

ನೆಮ್ಮದಿಯ ನಾಳೆ ನಮ್ಮದು

# ಹೊಸತು

ಡಿಸೆಂಬರ್ ೨೦೦೬

ಬೆಲೆ : ರೂ. ೧೨




ಗ್ಲಾಸ್ ಪೇಂಟಿಂಗ್


ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ರಚಿತವಾದ ಅಮೂರ್ತ ಶಿಲ್ಪ

# ಅಭಿವ್ಯಕ್ತಿಗೆ ವಿಭಿನ್ನ ಮಾಧ್ಯಮಗಳನ್ನು ಆಯ್ದುಕೊಂಡ ಚಿಂತಾಮಣಿ

ಬೆಂಗಳೂರಿನ ಕೆನ್ ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಫೈನ್ ಆರ್ಟ್ಸ್ ಡಿಪ್ಲೊಮಾ ಹಾಗೂ ಬರೋಡಾ ವಿಶ್ವವಿದ್ಯಾನಿಲಯದಿಂದ ಗ್ರಾಫಿಕ್ಸ್‌ನಲ್ಲಿ ಅಂಚೆ ಡಿಪ್ಲೊಮಾ ಪಡೆದಿರುವ ಚಿಂತಾಮಣಿ ಜಿ. ಗಾಯತ್ರಿ ಚಿತ್ರಕಲಾ ಕ್ಷೇತ್ರದ ಯುವ ಸಾಧಕರಲ್ಲೊಬ್ಬರು. ಮೂಲತಃ ಗೋಕರ್ಣದವರಾದ ಗಾಯತ್ರಿ ಪ್ರಸ್ತುತ ಉದ್ಯೋಗನಿಮಿತ್ತ ಬೆಂಗಳೂರಿನಲ್ಲಿ ನೆಲೆನಿಂತಿದ್ದಾರೆ. ಚಿತ್ರಕಲೆಯ ಅಭಿವ್ಯಕ್ತಿಗೆ ಹತ್ತಾರು ವಿಭಿನ್ನ ಮಾಧ್ಯಮಗಳನ್ನು ಆರಿಸಿಕೊಂಡು ಅವುಗಳೆಲ್ಲದರಲ್ಲಿಯೂ ಗಮನ ಸೆಳೆಯುವಂತಹ ಕಲಾಕೃತಿಗಳನ್ನು ರಚಿಸಿಕೊಡುವ ಜಾಣ್ಮೆ ಪಡೆದಿದ್ದಾರೆ. ಗ್ರಾಫಿಕ್, ಗ್ಲಾಸ್ ಪೇಂಟಿಂಗ್, ಮ್ಯೂರಲ್ ಆರ್ಟ್ಸ್, ಅಮೂರ್ತ ಶಿಲ್ಪಗಳ ರಚನೆ, ಜಲವರ್ಣ, ತೈಲವರ್ಣ ಹಾಗೂ ಮಿಶ್ರಮಾಧ್ಯಮಗಳ ಬಳಕೆಯಿಂದ ಪೇಂಟಿಂಗ್ ರಚನೆಯಲ್ಲೂ ಚಿಂತಾಮಣಿ ಸಾಧನೆ ತೋರಿದ್ದಾರೆ.

2000-2001ರಲ್ಲಿ ನವದೆಹಲಿಯಲ್ಲಿ ನಡೆದ ರಾಷ್ಟ್ರೀಯ ಕಲಾಪ್ರದರ್ಶನದಲ್ಲಿ ಚಿಂತಾಮಣಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ.

■ ಚಿತ್ರ - ಮಾಹಿತಿ : ಜಿ. ಎಂ. ಬೊಮ್ನಳ್ಳಿ, ಶಿರಸಿ


ತೈಲವರ್ಣ ಕಲಾಕೃತಿ


ಗ್ಲಾಸ್ ಪೇಂಟಿಂಗ್


ತೈಲವರ್ಣ ಕಲಾಕೃತಿ

ಜೀವನವೇ ಒಂದು ನಾಟಕ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಕೆದಿಲಾಯ, ಬಿ. ವಿಲ್ಸನ್, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು, ಆದರ್ಶ ಪೈ, ವಿವೇಕಾನಂದ

ಮುಖಚಿತ್ರ : ನೀಲಕಂಠ ಹಕ್ಕಿ ಚಿತ್ರಕೃಪೆ : ಕ್ಲೆಮೆಂಟ್ ಫ್ರಾನ್ಸಿಸ್ ಎಂ.

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಸುವರ್ಣ ಕರ್ನಾಟಕದ ಸಂಭ್ರಮದಲ್ಲಿ ರಾಜ್ಯವು ಕೋಟಿಗಟ್ಟಲೆ ಹಣವನ್ನು ಚೆಲ್ಲುತ್ತಿದೆ; ಅದರಲ್ಲಿ ಒಂದಷ್ಟನ್ನು ಮಧ್ಯವರ್ತಿಗಳು ಯಾವ ನಾಚಿಕೆಯೂ ಇಲ್ಲದೆ ಬಾಚಿಕೊಳ್ಳುತ್ತಿದ್ದಾರೆ. ಆದರೆ ಬಿಜಾಪುರ ಜಿಲ್ಲೆಯ ಕಡಕೊಳದಲ್ಲಿ ದಲಿತರಿಗೆ ಮುಕ್ತವಾಗಿ ನೀರು ಪಡೆಯುವ ಹಕ್ಕು ಸಹ ಇಲ್ಲ. ಬಸವಣ್ಣನವರು ತುಳಿದಿದ್ದ ನೆಲದಲ್ಲಿ ಇಂದಿಗೂ ದಲಿತರನ್ನು ತುಳಿಯುತ್ತಿರುವ ಹೀನ ಕಾಯಕ ನಡೆಯುತ್ತಿದೆ. ನಮಗೆ ಉತ್ಸವ ಬೇರೆ ಕೇಡು, ಎಂಬ ಭಾವನೆ ಬರುತ್ತದೆ. ಅತ್ತ ಮಹಾರಾಷ್ಟ್ರದ ಭಂಡಾರಾ ಜಿಲ್ಲೆಯಲ್ಲಿ ನಾಲ್ವರು ದಲಿತರನ್ನು ಕೊಚ್ಚಿಹಾಕಿದ್ದಾರೆ. ಅಲ್ಲಿ ಹಾಗೂ ಕಡಕೊಳದಲ್ಲಿ ನಡೆದಿರುವ ಘಟನೆಗಳಿಗೆ ನೊಂದು 'ಹೊಸತು' ತಲೆ ತಗ್ಗಿಸುತ್ತದೆ. ನೊಂದುಕೊಳ್ಳುವುದಕ್ಕಿಂತಲೂ ಕೋಪಗೊಳ್ಳುವುದು ಹೆಚ್ಚು ಸೂಕ್ತವಾದೀತು. ಭಂಡಾರಾ ದುಷ್ಕೃತ್ಯದಲ್ಲಿ ಸವರ್ಣೀಯ ಭೂಮಾಲಿಕರ ಕೈವಾಡವಿದೆ ಮತ್ತು ಕಡಕೊಳದಲ್ಲಿ ಸವರ್ಣೀಯರ ಭೂಮಾಲಿಕ ಸಂಪ್ರದಾಯವನ್ನು ಜೀವಂತವಾಗಿ ಇರಿಸಲಾಗಿದೆ. ಸಂವಿಧಾನ, ಕಾನೂನು, ಸಭ್ಯತೆ, ನಾಗರಿಕ ವರ್ತನೆ, ಇವುಗಳನ್ನೆಲ್ಲಾ ಮೀರಿದ ಹದ್ದುಬಸ್ತಿಲ್ಲದ ಜನಕ್ಕೆ ಸರ್ಕಾರಿ ಯಂತ್ರದ ಬೆಂಬಲವಿರುವುದು ಖಂಡನಾರ್ಹವಾದ್ದು. ಭಂಡಾರಾ ಕೃತ್ಯವನ್ನು ಪ್ರತಿಭಟಿಸಲು ನಾಗಪುರಕ್ಕೆ ಬಂದವರನ್ನು ಪೊಲೀಸರು ಚಚ್ಚಿದ್ದಾರೆ ಮತ್ತು ದಸ್ತಗಿರಿ ಮಾಡಿದ್ದಾರೆ. ಮುಂಬೈನಲ್ಲಿಯೂ ಪ್ರತಿಭಟನಾಕಾರರನ್ನು ದಸ್ತಗಿರಿ ಮಾಡಲಾಗಿದೆ. ಆದರೆ ಹಂತಕರನ್ನು ದಸ್ತಗಿರಿ ಮಾಡಲು ಮಂತ್ರಿಗಳಿಗೆ ಮತ್ತು ಪೊಲೀಸರಿಗೆ ಏನೋ ಅಂಜಿಕೆ. ಆಳುವ ವರ್ಗದ ಲಕ್ಷಣವನ್ನು ಜನ ತಿಳಿದುಕೊಳ್ಳಲೆಂದು ಹಾಗೆ ಮಾಡುತ್ತಾರೋ ಏನೋ! ನಮ್ಮನ್ನು ಬಾಧಿಸಬೇಕಾದ ಪ್ರಶ್ನೆ ಇದೇ: ಯಾವುದು ನಿಜವಾದ ಭಾರತ, ಮಾನ್ಯ ಇನ್ಫೋಸಿಸ್ ನಾರಾಯಣ ಮೂರ್ತಿಯದೋ ಅಥವಾ ಭಂಡಾರಾ-ಕಡಕೊಳಗಳ ಹೊಲಸು ಮನಸ್ಸಿನದೋ ? ಈ ಬಗ್ಗೆ ದೇಶದಲ್ಲಿ ಸಾಕಷ್ಟು ಪಾಪಪ್ರಜ್ಞೆ ಇಲ್ಲ. ನಾಗಪುರದಲ್ಲೇ ಇರುವ ಸುದರ್ಶನ್ ಅವರ ರಾಷ್ಟ್ರೀಯ ಸ್ವಯಂಸೇವಕ ಸಂಘವು ಭಂಡಾರಾ ಹಂತಕರ ವಿರುದ್ಧ ದನಿಯೆತ್ತಲು ಇನ್ನೆಷ್ಟು ದಶಕಗಳು ಕಳೆಯಬೇಕು ? ದೆಹಲಿಯ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ನಿರ್ದೇಶಕ ಡಾ॥ ವೇಣುಗೋಪಾಲ್ ಮತ್ತು ಅವರ ಪ್ರತಿಭಾವಂತ ಶಿಷ್ಯರು ಮೀಸಲಾತಿಯ ಪ್ರಶ್ನೆ ಬಂದಾಗ ಬೀದಿಗಿಳಿದರು; ಆದರೆ ಭಂಡಾರಾ-ಕಡಕೊಳ ಅವರ ಪಾಪಪ್ರಜ್ಞೆಯನ್ನು ಹೊಡೆದೆಬ್ಬಿಸುವುದಿಲ್ಲ. ''ಧರ್ಮಶ್ರವಣವಿದೇತಕೆ ?'' ಎಂದು ದಾಸರು ಹಾಡುವಾಗ ಇಂತಹ ಪಾಪಪ್ರಜ್ಞೆಯ ಅವಶ್ಯಕತೆಯನ್ನು ಬೋಧಿಸಬೇಕಾಗಿದ್ದಿತು. ಆದರೆ ಹಾಗೆ ಮಾಡಿದ್ದು ಕಡಿಮೆ.

ಇನ್ನೊಂದು ರೀತಿಯ ಪಾಪಪ್ರಜ್ಞೆಯ ಅಭಾವವನ್ನು ದೊಡ್ಡ ಮನುಷ್ಯರ ಸಣ್ಣತನದಲ್ಲಿ ಕಾಣಬಹುದು. ಬಿಡ್ಡಪ್ಪ ದಂಪತಿಗಳು ಮತ್ತು ಮುಖ್ಯಮಂತ್ರಿ ಕುಮಾರಸ್ವಾಮಿ ಇದಕ್ಕೆ ಉದಾಹರಣೆ. ಅತಿ ಕಡಿಮೆ ಬಟ್ಟೆಯನ್ನು ತೊಡಿಸಿ ''ಫ್ಯಾಶನ್ ಮಾಡೆಲ್''ಗಳನ್ನು ರಂಗಕ್ಕೆ ತರುವ ಬಿಡ್ಡಪ್ಪನ ಮಗ ಮತ್ತು ಹೆಂಡತಿ ಅವಾಚ್ಯ ಶಬ್ದಗಳನ್ನು ಪ್ರಯೋಗಿಸಿ ಪೊಲೀಸರನ್ನೇ ಒದ್ದರೂ ಅವರಿಗೆ ರಿಯಾಯಿತಿ ಉಂಟು. ''ಬೆಂಗಳೂರಿಗೆ ನಾನದೆಷ್ಟು ಗೌರವ ತಂದಿದ್ದೇನೆ, ಆದರೂ ನನ್ನ ಮಗನಿಗೆ ಶಿಕ್ಷೆಯೇ ?'' ಎಂದು ಅಬ್ಬರಿಸುತ್ತಾನೆ ಬಿಡ್ಡಪ್ಪ. ಅದೇನು ಗೌರವ ತಂದಿದ್ದಾನೋ ನಮಗಂತೂ ತಿಳಿಯುವುದಿಲ್ಲ; ಆದರೆ ಅಹಂಕಾರವು ಘನೀಭೂತವಾಗಿದೆ ಎಂಬುದಂತೂ ತಿಳಿಯುತ್ತದೆ. ಇನ್ನು ಕುಮಾರಸ್ವಾಮಿಯವರ ಪುತ್ರನ ಮಾತೇ ಬೇಡ. ಸ್ಮಶಾನದಲ್ಲಿ ಹೆಣಗಳನ್ನು ಮುಚ್ಚಿಹಾಕುವಂತೆ ಸಮಾಜದ ಕಾವಲುಗಾರರಾಗಿ ಪೊಲೀಸರು ಇಂತಹ ಪ್ರಸಂಗಗಳನ್ನು ಮುಚ್ಚಿಹಾಕುವುದರಲ್ಲಿ ಪ್ರವೀಣರು. ಅವರ ಮೇಲೆ ಒತ್ತಡ ಹೇರುವ ಧೀಮಂತ ರಾಜಕಾರಣಿಗಳ ಪೈಕಿ ನಮ್ಮ ಗೃಹಮಂತ್ರಿಯವರೂ ಸೇರಿದ್ದಾರೆಂಬ ಮಾತು ಕೇಳಿಬಂದಿದೆ. ಇದು ಬಹಳ ದುರದೃಷ್ಟಕರ. ಕುಮಾರಸ್ವಾಮಿಯವರು ಮಗನನ್ನು ಕರೆದುಕೊಂಡು ಹೋಗಿ ಶೃಂಗೇರಿಯಲ್ಲಿ ಸ್ವಾಮಿಗಳ ಪಾದಾರವಿಂದಗಳ ಮೇಲೆ ಹೊರಳಾಡಿಸಿ ಅವನನ್ನು ಪಾವನ ಮಾಡಿದ್ದಾರೆ, ತಾವೂ ಪಾವನರಾಗಿದ್ದಾರೆ. ಆದರೆ ಸ್ವಾಮಿಗಳು ಮಾತ್ರ ಧಾರ್ಮಿಕ ಪೊಲೀಸರಾಗಿ ಕಪ್ಪುಮಸಿ ಬಳಿದುಕೊಂಡಿದ್ದಾರೆ. ಇದಾವುದಕ್ಕೂ ಸಾರ್ವಜನಿಕರು ಪ್ರತಿಭಟಿಸುವಂತಿಲ್ಲ. ಏಕೆಂದರೆ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲವನ್ನೂ ಕಾನೂನು ರೀತ್ಯಾ ಮುಚ್ಚಿಹಾಕಲಾಗುತ್ತಿದೆ. ಕಾನೂನುಭಂಗವೇ ಇಲ್ಲದಿದ್ದಾಗ ನಿಮ್ಮ ಪ್ರತಿಭಟನೆ ಯಾವುದಕ್ಕೆಂದು ಪೊಲೀಸರು ಕೇಳುತ್ತಿದ್ದಾರೆ! ಇಷ್ಟಕ್ಕೂ ಗಾಂಧೀಜಿಯನ್ನು ಬಿಟ್ಟರೆ ಕುಮಾರಸ್ವಾಮಿಯವರೇ ದೀನ-ದಲಿತರ ಬಂಧು ಮತ್ತು ಸರಳತೆಯ ಪ್ರತೀಕ; ಏಕೆಂದರೆ ಹಳ್ಳಿಗಳಿಗೆ ಹೋಗಿ ಸಾಮಾನ್ಯರ ಮನೆಗಳಲ್ಲಿ ಮುದ್ದೆ ತಿಂದು ಮಲಗುತ್ತಾರೆ.

೮ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೫ ಡಿಸೆಂಬರ್ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೬
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೮೦೨೯, ೨೨೨೦೩೫೮೮೦
ಫ್ಯಾಕ್ಸ್ : ೩೦೫೭೮೮೦೨೩
e-mail : navakarnataka@vsnl.com
website : www.navakarnatakabooks.com


# ರತ್ನಗರ್ಭಾ ವಸುಂಧರಾ

**ಸಂಪಾದಕೀಯ**

**ಬಾಂ**ಗ್ಲಾದೇಶವು ವಿಶ್ವದ ಅತಿ ಬಡ ರಾಷ್ಟ್ರಗಳಲ್ಲಿ ಒಂದು. ಯಾವುದೇ ದೇಶವು ರಫ್ತು ಹೆಚ್ಚಿಸುವ ಮೂಲಕ ಮಾತ್ರವೇ ತನ್ನ ಆರ್ಥಿಕತೆಯನ್ನು ಸುಧಾರಿಸಿಕೊಳ್ಳಲಾರದು; ಅದಕ್ಕೆ ಅಗತ್ಯವಾದ್ದು ಆಂತರಿಕ ಬಳಕೆಗಾಗಿ ಉತ್ಪಾದನೆಯ ಹೆಚ್ಚಳ. ಬಾಂಗ್ಲಾ ದೇಶದ ಬಡತನದ ಬಗ್ಗೆ ಸುಮಾರು ಹದಿನೈದು ವರ್ಷಗಳ ಹಿಂದೆ (೧೨-೯-೧೯೯೨) ನ್ಯೂಯಾರ್ಕ್ ಟೈಮ್ಸ್‌ನಂತಹ ದರಿದ್ರ ಪತ್ರಿಕೆಯು ಆ್ಯನ್ ಕ್ರಿಟೆಂಡೆನ್ ಎಂಬುವವಳ ವಿಶ್ಲೇಷಣಾ ಲೇಖನವೊಂದನ್ನು ಪ್ರಕಟಿಸಿತ್ತು. ಆ ದೇಶದ ಬಡತನಕ್ಕೆ ಪ್ರಮುಖ ಕಾರಣವು ಭೂಮಿಗೆ ಸಂಬಂಧಿಸಿದ್ದೆಂದು ಆ ಲೇಖನದಲ್ಲಿ ಪ್ರತಿಪಾದಿಸಲಾಗಿತ್ತು: ''ಸಾಕಷ್ಟು ಅಧಿಕ ಉತ್ಪಾದನೆಯ ನಡುವೆಯೂ ಜನರಲ್ಲಿ ಅಪೌಷ್ಟಿಕತೆಯ ಹೆಚ್ಚಳಕ್ಕೆ ಭೂಮಿಯ ಅಸಮಾನ ಹಂಚಿಕೆಯು ಕಾರಣ. ಪಾಶ್ಚಿಮಾತ್ಯ ದೇಶಗಳ ಮಟ್ಟದಲ್ಲಿ ನೋಡಿದರೆ ಇಲ್ಲಿ ಶ್ರೀಮಂತರು ವಿರಳ, ಆದರೆ ಅಗಾಧ ಅಸಮಾನತೆಗಳು ಮನೆಮಾಡಿಕೊಂಡಿವೆ. ಅದು ಭೂಮಿಯ ಹಂಚಿಕೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಗ್ರಾಮಾಂತರ ಪ್ರದೇಶಗಳ ಜನಸಂಖ್ಯೆಯ ಶೇ. ೧೬ರಷ್ಟು ಮಂದಿ ಒಟ್ಟು ಭೂಮಿಯ ಶೇ. ೬೫ರಷ್ಟನ್ನು ತಮ್ಮ ಸ್ವಾಧೀನದಲ್ಲಿರಿಸಿಕೊಂಡಿದ್ದಾರೆ. ಜನಸಂಖ್ಯೆಯ ಶೇ. ೬೦ರಷ್ಟು ಮಂದಿಗೆ ಒಂದು ಎಕರೆಗಿಂತಲೂ ಕಡಿಮೆ ಭೂಮಿ ಇದೆ. ಹೊಸದಾಗಿ ಅಳವಡಿಸಲಾಗುತ್ತಿರುವ ಕೃಷಿ ತಾಂತ್ರಿಕ ವಿಧಾನಗಳು ದೊಡ್ಡ ಭೂಮಾಲಿಕರಿಗೆ ಅನುಕೂಲವಾಗಿವೆ. ಅದರ ಪರಿಣಾಮವಾಗಿ ಕಡಿಮೆ ಪ್ರಮಾಣದ ಭೂಮಿಯನ್ನು ಹೊಂದಿರುವವರಿಂದ ಇದ್ದ ಸ್ವಲ್ಪವನ್ನೂ ಕಸಿದುಕೊಳ್ಳಲು ಈ ಶ್ರೀಮಂತರಿಗೆ ಸಾಧ್ಯವಾಗಿದೆ.'' ಆಳುವ ವರ್ಗದಲ್ಲಿ ಭೂಮಾಲಿಕರ ಕೈ ಮೇಲಾದಾಗ ಇಂತಹ ದುರಂತಗಳು ಅನಿವಾರ್ಯ. ಭೂಮಿತಾಯಿಯು ತನ್ನ ಗರ್ಭದಲ್ಲಿ ಅಪಾರ ಸಂಪತ್ತನ್ನು ಅಡಗಿಸಿಕೊಂಡಿರುವುದು ಅವಳನ್ನು ತಮ್ಮತ್ತ ಸೆಳೆದುಕೊಳ್ಳಲು ಶ್ರೀಮಂತ ಭೂಮಾಲಿಕರಿಗೆ ಹಾಗೂ ಅವರ ವರ್ಗಕ್ಕೇ ಸೇರಿದ ಉದ್ಯಮಪತಿಗಳಿಗೆ ಒಂದು ಪ್ರಲೋಭನೆಯಾಗಿದೆ.

ನಮ್ಮ ದೇಶದಲ್ಲಿ ''ವಿಶೇಷ ಆರ್ಥಿಕ ವಲಯ'' ಎಂಬ ಕಲ್ಪನೆಯು ಉದ್ಯಮಗಳ ಸ್ಥಾಪನೆಯ ಮೂಲಕ ರಫ್ತಿಗಾಗಿ ಉತ್ಪಾದನೆಗೆ ಇಂಬುಕೊಡುವಂತಹ ಉದ್ದೇಶ ಹೊಂದಿದೆ. ಅಲ್ಲಿ ಭೂಮಿಯೇ ಸಂಪತ್ತು, ಅದರ ಕಬಳಿಕೆಯೇ ಉದ್ದೇಶ. ಮೂಲತಃ ಉದ್ಯಮಕ್ಕಿಂತಲೂ ಸೇವಾನಿರತ ಕ್ಷೇತ್ರಕ್ಕೆ ಇಲ್ಲಿ ಹೆಚ್ಚಿನ ಆದ್ಯತೆ ದೊರೆತುಬಿಡುವ ಸಾಧ್ಯತೆ ಇದೆ ಮತ್ತು ಕಾರಣಾಂತರಗಳಿಂದ ಉದ್ಯಮ ಅಥವಾ ಸೇವಾಕ್ಷೇತ್ರದಲ್ಲಿ ಹಿನ್ನಡೆ ಉಂಟಾದರೆ ಆಗ ಭೂಮಿಯನ್ನು ಬೇರೆ ರೀತಿಯಲ್ಲಿ ಬಳಸಿ ಲಾಭ ಗಳಿಸಿಕೊಳ್ಳುವ ಹುನ್ನಾರ ಇದರಲ್ಲಿದೆ. ಭೂಮಿಯನ್ನು ಕಳೆದುಕೊಳ್ಳುವ ರೈತ ಆ ವೇಳೆಗೆ ನಗರಗಳ ಯಾವುದಾದರೂ ಕೊಳಚೆ ಪ್ರದೇಶ ಸೇರಿಕೊಂಡಿರುತ್ತಾನೆ! ನಮ್ಮ ದೇಶವು ರಾಜಕೀಯ ಸ್ವಾತಂತ್ರ್ಯ ಪಡೆದಾಗಿನಿಂದ ಭೂಮಿಯ ಪ್ರಶ್ನೆಯನ್ನು ಎದುರಿಸಿರುವ ರೀತಿಯಲ್ಲಿಯೇ ಕಳಂಕಗಳು ತುಂಬಿವೆ. ಈಗಂತೂ ''ಉಳುವವನೇ ಹೊಲದೊಡೆಯ'' ಎಂಬ ಘೋಷಣೆ ನಿರರ್ಥಕವಾಗಿದ್ದು, ಹೆಚ್ಚುಕಡಿಮೆ ಬಾಂಗ್ಲಾದೇಶದ ಪರಿಸ್ಥಿತಿಯೇ ನಮ್ಮದೂ ಆಗುತ್ತಿದೆ. ಖಾಸಗಿ ಕಾರ್ಪೊರೇಟ್ ವಲಯವು ಭೂಮಿಯನ್ನು ನುಂಗುವುದರಲ್ಲಿ ನಿಸ್ಸೀಮವೆನಿಸಿಕೊಳ್ಳುತ್ತಿದೆ; ಇದರಲ್ಲಿ ವಿದೇಶಿ ಕಾರ್ಪೊರೇಟ್‌ಗಳೂ ಸೇರಿವೆ. ಇದನ್ನೇ ''ಅಭಿವೃದ್ಧಿ'' ಎಂದು ಕರೆಯುವ ಸರ್ಕಾರಗಳು ನಮ್ಮಲ್ಲಿವೆ. ಹದಿನೈದು ವರ್ಷಗಳಿಂದ ಚಾಲ್ತಿಯಲ್ಲಿರುವ ''ಹೊಸ ಆರ್ಥಿಕ ನೀತಿ''ಯು ಭೂಮಿಗಳ್ಳರಿಗೆ ಗೌರವಯುತ ಸ್ಥಾನವನ್ನು ದೊರಕಿಸಿಕೊಟ್ಟಿದೆ.

ಒಂದೆರಡು ನಿದರ್ಶನಗಳನ್ನು ನೋಡಬಹುದು: ನಮ್ಮ ಕುಖ್ಯಾತ ಬೆಂಗಳೂರು-ಮೈಸೂರು ಕಾರಿಡಾರ್ ರಸ್ತೆಯ ನಿರ್ಮಾಣಕ್ಕೆ ನಂದಿ ಹೆಸರನ್ನುಳ್ಳ ''ನೈಸ್'' ಕಂಪನಿಯ ಜೊತೆ ಸರ್ಕಾರವು ಒಪ್ಪಂದ ಮಾಡಿಕೊಂಡಿದ್ದು ೧೯೯೫ರಲ್ಲಿ. ಈ ಕಂಪನಿಯಲ್ಲಿ ಪುಣೆ, ಪೆನ್ಸಿಲ್ವೇನಿಯಾ (ಅಮೆರಿಕಾ) ಮತ್ತು ಬಾಸ್ಟನ್ (ಅಮೆರಿಕಾ) ಗುಂಪುಗಳು ಕೈಜೋಡಿಸಿವೆ. ಈ ಕಂಪನಿಗಾಗಿ ಸರ್ಕಾರವು ೨೯,೨೫೮ ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿತು. ಕಂಪನಿಯೇ ಅಷ್ಟು ಜಮೀನನ್ನು ಖರೀದಿಸಿದ್ದರೆ ತಗುಲುತ್ತಿದ್ದ ವೆಚ್ಚಕ್ಕೆ ಹೋಲಿಸಿದರೆ ಸರ್ಕಾರವು ಸ್ವಾಧೀನಪಡಿಸಿಕೊಂಡಾಗಿನ ವೆಚ್ಚವು ಬಹಳ ಕಡಿಮೆ. ರಸ್ತೆಯ ನಿರ್ಮಾಣಕ್ಕೆ ಅಗತ್ಯವಿದ್ದುದಕ್ಕಿಂತಲೂ ೧೦,೯೪೫ ಎಕರೆ ಭೂಮಿಯನ್ನು ಜಾಸ್ತಿಯಾಗಿ ಕಂಪನಿ ಪಡೆಯಿತು. ಈ ಅಧಿಕ ಭೂಮಿಯನ್ನು ಲಾಭ ಗಳಿಕೆಯ ವ್ಯಾಪಾರೀ ವ್ಯವಹಾರಗಳಿಗೆ ತೊಡಗಿಸುವುದು ಕಂಪನಿಯಿಂದ ನಿರೀಕ್ಷಿಸಬಹುದಾದದ್ದೇ. ಆದರೆ ಅದಕ್ಕೆ ಸರ್ಕಾರದ ಮಧ್ಯಸ್ಥಿಕೆ ಮತ್ತು ಬೆಂಬಲವಿದೆ. ರೈತನಿಗೆ ನೀಡಬೇಕಾಗಿದ್ದ ಬೆಂಬಲವನ್ನು ಕಂಪನಿಗೆ ವರ್ಗಾಯಿಸಲಾಗಿರುವುದು ''ಹೊಸ ಆರ್ಥಿಕ ನೀತಿ''ಯ ಬಳುವಳಿ. ಇದರಿಂದಾಗಿ ಕಂಪನಿಗೆ ಏನಿಲ್ಲವೆಂದರೂ ಹತ್ತು ಸಾವಿರ ಕೋಟಿ ರೂಪಾಯಿಗಳ ಉಳಿತಾಯ ಈಗಾಗಲೇ ಆಗಿದೆ. ಅದರಲ್ಲಿ ರಾಜ್ಯ ಮತ್ತು ಕೇಂದ್ರದ ಎಷ್ಟು ರಾಜಕೀಯ ಧುರೀಣರು ಎಷ್ಟೆಷ್ಟು ಲಂಚ ಪಡೆದಿರಬಹುದೆಂಬುದು ನಮ್ಮ ಊಹೆಗೆ ಬಿಟ್ಟಿದ್ದು. ಅಲ್ಲದೆ, ಕಂಪನಿಗೆ ತೆರಿಗೆ ವಿನಾಯಿತಿಗಳು ಬೇರೆ. ಅಂದರೆ, ಅಂತಿಮವಾಗಿ ಲಾಭದ ಮೊತ್ತವು ಅನೂಹ್ಯವಾದ್ದು. ಆದರೆ ಇದೇ ಭೂಮಿಯಲ್ಲಿ ಕೃಷಿಕರಾಗಿ ಇಲ್ಲವೆ ಕೂಲಿಗಳಾಗಿ ದುಡಿಯುತ್ತಿದ್ದ ಸುಮಾರು ಎರಡು ಲಕ್ಷ ಮಂದಿ ಎಲ್ಲಿ ಹೋದರೆಂದು ಕೇಳುವವರಿಲ್ಲ.

ಇನ್ನೊಂದು ಉದಾಹರಣೆ : ಉತ್ತರ ಪ್ರದೇಶದ ಗಾಜಿಯಾಬಾದ್ ಬಳಿಯ ದಾದ್ರಿ ಎಂಬಲ್ಲಿ ಅಂಬಾನಿಯ ರಿಲಯನ್ಸ್ ಕಂಪನಿಯು ಅನಿಲ ಆಧಾರಿತ ವಿದ್ಯುದುತ್ಪಾದನಾ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿದೆ. ಇಲ್ಲಿಯ ಭೂಮಿ ಅತ್ಯಂತ ಫಲವತ್ತಾದ್ದು. ಆದರೂ ಅದನ್ನು ಬಿಟ್ಟು ಬೇರೆಡೆ ಭೂಮಿಯನ್ನು ಪಡೆಯಲು ಕಂಪನಿಗೆ ಇಷ್ಟವಿಲ್ಲ. ಅಲ್ಲಿ ೨೧೦೦ ಎಕರೆ ಜಮೀನನ್ನು ವಶಪಡಿಸಿಕೊಳ್ಳಲಾಗಿದೆ; ಇನ್ನೂ ೪೦೦ ಎಕರೆಯನ್ನು ವಶಪಡಿಸಿಕೊಳ್ಳುವ ಇರಾದೆ ಇದೆ. ವಿದ್ಯುದಾಗಾರಕ್ಕೆ ೭೦೦-೮೦೦ ಎಕರೆ ಸಾಕು; ಇನ್ನುಳಿದ ೧೭೦೦ ಎಕರೆ ಏತಕ್ಕೆ ? ತಮಗೆ ತಿಳಿಯುವ ಮೊದಲೇ ಹೀಗೆ ಭೂಮಿಯನ್ನು ವಶಪಡಿಸಿಕೊಳ್ಳುವ ತಂತ್ರವನ್ನು ವಿರೋಧಿಸಿ ರೈತರು ಪ್ರತಿಭಟಿಸಿದಾಗ ಇದೇ ಜುಲೈ ೨೦೦೬ರಲ್ಲಿ ಸರ್ಕಾರದ ಸಶಸ್ತ್ರ ಪೊಲೀಸ್ ದಳವು ಅವರನ್ನು ಹಿಗ್ಗಾಮುಗ್ಗಾ ಚಚ್ಚಿ ಅವರ ಆಸ್ತಿಪಾಸ್ತಿಯನ್ನು ಹಾಳುಗೆಡವಿತು. ಭೂಮಿಗೆ ತಕ್ಕ ಬೆಲೆಯನ್ನು ಕೇಳಿದ್ದೇ ಅವರ ಅಕ್ಷಮ್ಯ ಅಪರಾಧ! ಚದುರ ಗಜಕ್ಕೆ ೧೫೦ ರೂಪಾಯಿಗಳಿಗಿಂತಲೂ ಒಂದು ಚಿಕ್ಕಾಸು ಹೆಚ್ಚಿಗೆ ಕೊಡಲು ಸಹ ಸರ್ಕಾರವು ನಿರಾಕರಿಸಿತು; ಆದರೆ ಮಾರುಕಟ್ಟೆಯಲ್ಲಿ ಅದರ ಬೆಲೆ ಕನಿಷ್ಠ ೫೦೦ ರೂಪಾಯಿಗಳು. ಕಡೆಗೆ ಬೇಸತ್ತು ಕ್ರುದ್ಧರಾದ ರೈತರು ಕಂಪನಿಯು ಹಾಕಿದ್ದ ತಂತಿಬೇಲಿಯನ್ನು ಕಿತ್ತೆಸೆದು ಭೂಮಿಯನ್ನು ಉಳಲು ಆರಂಭಿಸಿದರು. ಇನ್ನೂ ಪ್ರಶ್ನೆಯು ಬಗೆಹರಿದಿಲ್ಲ. ಹೀಗಿರುವಾಗ ಇದೇ ಕಂಪನಿಯು ವಿನೋಬಾ ಭಾವೆಯವರಿಗೆ ನಿಕಟವಾಗಿದ್ದ ಮಹಾರಾಷ್ಟ್ರದ ಪೇಣ್ ಹೋಬಳಿಯಲ್ಲಿ (ರಾಯಗಢ ಜಿಲ್ಲೆ) ''ವಿಶೇಷ ಆರ್ಥಿಕ ವಲಯ''ದ ಹೆಸರಿನಲ್ಲಿ ಸುಮಾರು

ಇಪ್ಪತ್ತೈದು ಸಾವಿರ ಎಕರೆ ಜಮೀನನ್ನು ಸರ್ಕಾರದ ಮೂಲಕ ಪಡೆಯಲು ಹೊರಟಿದೆ. ಒಂದು ಕಾರ್ಖಾನೆಯ ಸ್ಥಾಪನೆಗೆ ಅಷ್ಟೊಂದು ಜಮೀನಿನ ಅವಶ್ಯಕತೆ ಇದೆಯೇ ಎಂಬುದು ನಿಗೂಢ ಪ್ರಶ್ನೆ. ಆ ಜಮೀನಿನಲ್ಲಿ ಸುಮಾರು ಹನ್ನೆರಡು ಸಾವಿರ ಎಕರೆಗೆ ಹೇತವಾಣಿ ಅಣೆಕಟ್ಟಿನಿಂದ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ಅದನ್ನೇಕೆ ಉದ್ಯಮಕ್ಕೆ ಸೂಕ್ತ ಜಾಗವೆಂದು ಆಯ್ಕೆ ಮಾಡಿಕೊಳ್ಳಬೇಕು ? ಬಹುಶಃ ಮುಂಬೈ ಹೊರವಲಯದ ಪನವೇಲ್ ಬಳಿ ಇದೆ ಎಂಬ ಕಾರಣಕ್ಕಾಗಿ ಇರಬೇಕು. ಫಲವತ್ತಾದ ಕೃಷಿಭೂಮಿಯನ್ನು ನಮ್ಮ ದೇಶದಲ್ಲಿ ಹೀಗೆ ಪರಿವರ್ತಿಸುವುದು ಯೋಗ್ಯವೇ? ಕಡಿಮೆ ಜನಸಂಖ್ಯೆ ಮತ್ತು ದೇಶೂವಿಶಾಲವಾದ ಭೂಮಿ ಇರುವ ಅಮೆರಿಕಾದಲ್ಲಿ ಅಂತಹ ಪರಿವರ್ತನೆಯು ಸರಿ ಇರಬಹುದು, ಆದರೆ ನಮ್ಮಲ್ಲಿ ಅಲ್ಲ. ಕೃಷಿಕರನ್ನು ಬೀದಿಪಾಲು ಮಾಡುವ ಕೆಟ್ಟ ಕೆಲಸ ಇದು. ಕೃಷಿಯೋಗ್ಯವಲ್ಲದ ಭೂಮಿಯನ್ನು ''ವಿಶೇಷ ಆರ್ಥಿಕ ವಲಯ''ಕ್ಕಾಗಿ ಆಯ್ದುಕೊಳ್ಳುವುದು ಹೆಚ್ಚು ವಿವೇಕಯುತವಾದ್ದು.

ಪಶ್ಚಿಮ ಬಂಗಾಳದಲ್ಲಿ ವಿಶೇಷ ಆರ್ಥಿಕ ವಲಯಗಳಿಗಾಗಿ ರಾಜ್ಯದ ಹಲವೆಡೆ ಒಟ್ಟು ನಲವತ್ತಮೂರು ಸಾವಿರ ಎಕರೆಗಳಷ್ಟು ಭೂಮಿಯನ್ನು ನಿಗದಿಗೊಳಿಸಲಾಗಿದೆ. ಸಹಜವಾಗಿಯೇ ಬೇಸಾಯದಲ್ಲಿರುವ ಜಮೀನು ಇದರಲ್ಲಿ ಸೇರಬೇಕಾಗುತ್ತದೆ. ಸದ್ಯದಲ್ಲಿ ಸಂಗೂರಿನಲ್ಲಿ ಟಾಟಾ ಮೋಟಾರ್ಸ್‌ಗಾಗಿ ಸಾವಿರದಿನ್ನೂರು ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿದೆ. ಸ್ಕೂಟರ್‌ಗಳ ತಯಾರಿಕೆಗೆ ಹೌರಾದ ಉಲುಬೇರಿಯಾ ಬಳಿ ಮತ್ತೆ ಎರಡು ಸಾವಿರ ಎಕರೆ ಬೇಕಾಗುತ್ತದೆ. ಪ್ರತಿರೋಧದ ರಾಜಕೀಯ ಚಟುವಟಿಕೆಗಳಿಂದಾಗಿ ಸಂಗೂರಿನ ನಿಜವಾದ ಸನ್ನಿವೇಶವು ಸರಿಯಾಗಿ ತಿಳಿದುಬರುತ್ತಿಲ್ಲ. ರೈತರಿಗೆ ಮಾರುಕಟ್ಟೆ ಬೆಲೆಯನ್ನು ನೀಡಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದಾಗಿ ಸರ್ಕಾರವು ಹೇಳಿದೆ. ಆದಾಗ್ಯೂ ಒಟ್ಟು ನಲವತ್ತಮೂರು ಸಾವಿರ ಎಕರೆ ಜಮೀನು ಬೇಕಾದಾಗ ರೈತರಿಗೆ ಪೆಟ್ಟು ಬೀಳುವುದು ಖಚಿತ. ಮುಚ್ಚಿಹೋಗಿರುವ ಕಾರ್ಖಾನೆಗಳ ಜಾಗದಲ್ಲಿ ಈ ಹೊಸ ''ವಲಯ''ಕ್ಕೆ ಅವಕಾಶ ಮಾಡಿಕೊಡುವುದು ಹೆಚ್ಚು ವ್ಯಾವಹಾರಿಕ ಎನಿಸುತ್ತದೆ. ಸಂಗೂರಿನ ಬದಲು ಅಸನ್‌ಸಾಲ್ ಉದ್ಯಮ ಪ್ರದೇಶದಲ್ಲಿ ಟಾಟಾ ಮೋಟಾರ್ಸ್‌ಗೆ ಜಾಗ ಒದಗಿಸುವುದು ಸಹ ಸೂಕ್ತವಾಗಿರುತ್ತದೆ.

ಭೂಮಿ ಸ್ವಾಧೀನಪಡಿಸಿಕೊಳ್ಳುವ ಈ ಎಲ್ಲ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ ವಿದೇಶಿ ಬಂಡವಾಳದ ಅಗಾಧ ಒತ್ತಡವಿದೆ. ಮೆರಿಲ್ ಲಿಂಚ್ ಎಂಬ ಸಂಸ್ಥೆಯು ಲೆಕ್ಕಾಚಾರ ಮಾಡಿ ಇತ್ತೀಚೆಗೆ ಪ್ರಕಟಿಸಿರುವ ಅಂಕಿ-ಅಂಶಗಳಂತೆ ಭಾರತದಲ್ಲಿ ೨೦೦೫ರಲ್ಲಿ ಭೂ ಆಸ್ತಿಯ ಬೆಳವಣಿಗೆಯು ಐವತ್ತೈದು ಲಕ್ಷ ಕೋಟಿ ರೂಪಾಯಿಗಳಷ್ಟಿದ್ದುದು ೨೦೧೫ರ ವೇಳೆಗೆ ಏಳುಪಟ್ಟು ಹೆಚ್ಚುವ ನಿರೀಕ್ಷೆ ಇದೆ. ಅದರಿಂದಲೇ ಕಾರ್ಪೊರೇಟ್ ಸಂಸ್ಥೆಗಳು ಅಗತ್ಯಕ್ಕಿಂತಲೂ ಅಧಿಕ ಭೂಮಿಯನ್ನು ಕಬಳಿಸುವ ತರಾತುರಿಯಲ್ಲಿವೆ. ''ಮಂತ್ರಿ ಡೆವಲಪರ್ಸ್'' ಎಂಬ ಮೋರ್ಗನ್ ಸ್ಟ್ಯಾನ್ಲೆ ಕಂಪನಿಯು ಬೆಂಗಳೂರಿನಲ್ಲಿ ಕಚೇರಿ ಇಟ್ಟುಕೊಂಡು ಸುಮಾರು ೩೪೦ ಕೋಟಿ ರೂಪಾಯಿಗಳನ್ನು ಕಟ್ಟಡ ನಿರ್ಮಾಣದಲ್ಲಿ ತೊಡಗಿಸಿದೆ. ಮಿಕ್ಕವು ಇದಕ್ಕಿಂತಲೂ ಹೆಚ್ಚು ಮೊತ್ತ ತೊಡಗಿಸುವಂತಹ ಕಂಪನಿಗಳು. ಮೆರಿಲ್ ಲಿಂಚ್‌ನದು ''ಪಂಚಶೀಲ ಡೆವಲಪರ್ಸ್'' ಎಂಬುದು. ಇವಲ್ಲದೆ ಜೆ. ಪಿ. ಮೋರ್ಗನ್, ನೈಟ್ ಫ್ರಾಂಕ್ ಮುಂತಾದ ಕಂಪನಿಗಳು ಭೂಮಿಗಾಗಿ ಮುಗಿಬಿದ್ದಿವೆ. ಹೀಗಾಗಿ ಮನಮೋಹನ್ ಸಿಂಗ್ ಸರ್ಕಾರವು ರೈತರ ಹಿತವನ್ನು ರಕ್ಷಿಸುವ ಹಾದಿಯಿಂದ ದೂರ ಸರಿದು ಅರುಣ್ ಶೌರಿಯ ಸಂಪ್ರದಾಯವನ್ನು ಅನುಸರಿಸಲು ಸಜ್ಜಾಗಿದೆ. ಭೂ ಕಬಳಿಕೆಯಲ್ಲಿ ನಮ್ಮ ರಾಜ್ಯದ ಅನೇಕ ಮಂತ್ರಿಗಳು ನಿಷ್ಣಾತರಾಗಿದ್ದಾರೆ; ಅವರ ಹಿಂದಿನವರೂ ಅದೇ ಹಾದಿಯನ್ನು ಅನುಸರಿಸಿದ್ದರು. ಭೂಮಿಯ ವ್ಯವಹಾರಗಳಲ್ಲಿ ಜಟಾಪಟಿ ಹೆಚ್ಚಾಗಿ ಈಗಾಗಲೇ ಅನೇಕ ಕೊಲೆಗಳಾಗಿರುವ ವರದಿಗಳು ಬಂದಿವೆ. ಇದೆಲ್ಲಾ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವುದು ನಾಚಿಕೆಗೇಡಿನ ಸಂಗತಿ.

ಆರ್ಥಿಕ ವಲಯಗಳು ಬೇಕು. ಆದರೆ ಅದಕ್ಕಾಗಿ ಕಾರ್ಪೊರೇಟ್ ಸಂಸ್ಥೆಗಳಿಗೆ ಬೇಕಾಬಿಟ್ಟಿ ಭೂಮಿಯನ್ನು ನೀಡಕೂಡದು. ರೈತರನ್ನು ಬೀದಿಪಾಲು ಮಾಡದೆ ಮತ್ತು ಕೃಷಿಗೆ ಮೀಸಲಾದ ಭೂಮಿಯನ್ನು ಕಡಿತಗೊಳಿಸದೆ ಅಭಿವೃದ್ಧಿ ಸಾಧ್ಯವಿಲ್ಲವೆಂಬಂತಹ ಆರ್ಥಿಕ ಬೆಳವಣಿಗೆಯು ಅಭಿವೃದ್ಧಿ ಎನಿಸಿಕೊಳ್ಳುವುದಿಲ್ಲ; ಅದು ದುರಾಚಾರ ಮತ್ತು ದೌರ್ಜನ್ಯವಾಗುತ್ತದೆ. ಜನತೆಯು ಇದನ್ನು ತಡೆಗಟ್ಟಬೇಕಾದ್ದು ತುರ್ತು ಜವಾಬ್ದಾರಿಯಾಗಿದೆ. ಬೇಸಾಯ ನಡೆಯುತ್ತಿರುವ ಭೂಮಿಯನ್ನು ಹೀಗೆ ಕಳೆದುಕೊಳ್ಳುತ್ತಾ ಹೋದರೆ ದೇಶದ ತುಂಬ ಕೇವಲ ರಸ್ತೆಗಳು ಮತ್ತು ''ಆರ್ಥಿಕ ವಲಯಗಳು'' ತುಂಬಿಕೊಳ್ಳುತ್ತವೆ, ಆಹಾರಕ್ಕಾಗಿ ಅಮೆರಿಕಾದಂತಹ ಪಾತಕ ರಾಷ್ಟ್ರಗಳನ್ನು ಆಶ್ರಯಿಸಬೇಕಾಗುತ್ತದೆ. ಕತ್ತು ಹಿಚುಕಲು ಕಾಯುತ್ತಿರುವ ಧೂರ್ತನಿಗೆ ಸ್ವಯಮಿಚ್ಛೆಯಿಂದ ನಮ್ಮ ದೇಶವು ತನ್ನ ತಲೆಯನ್ನು ಕೊಟ್ಟು ವಿನಾಶದತ್ತ ಸಾಗುವುದು ಕೂಡದು.

* * *

ಸುವರ್ಣ ಕರ್ನಾಟಕ ಸಂಭ್ರಮದಲ್ಲಿ 'ರಾಷ್ಟ್ರಕವಿ' ಪ್ರಶಸ್ತಿಯು ಮರುಜೀವ ಪಡೆದಿದೆ. 'ಪೊಯೆಟ್ ಲಾರಿಯೇಟ್'ಗಳು ಇಲ್ಲವಾಗುತ್ತಿರುವ ಸಂದರ್ಭದಲ್ಲಿ 'ರಾಷ್ಟ್ರಕವಿ'ಯೊಬ್ಬರು ನಮ್ಮೊಡನಿದ್ದಾರೆಂಬುದು ಉಲ್ಲಾಸ ತರುವಂಥದು. ಒಂದು ರಾಜ್ಯವು 'ರಾಷ್ಟ್ರಕವಿ' ಪ್ರಶಸ್ತಿಯನ್ನು ನೀಡಬಲ್ಲುದೇ ಎಂಬುದು ಅಪ್ರಸ್ತುತವಾದ ಪ್ರಶ್ನೆ. ನಮ್ಮ ದೇಶದ ಒಂದೊಂದು ರಾಜ್ಯವೂ ರಾಷ್ಟ್ರವೇ ಆಗಿದೆಯೆಂಬುದರ ಸೂಚನೆ ಈ ಪ್ರಶಸ್ತಿಯಲ್ಲಿದೆ. ಖ್ಯಾತ ಕವಿ, ಪ್ರಾಧ್ಯಾಪಕ, ಸಂಶೋಧಕ, ವಿಮರ್ಶಕ, ಸಮನ್ವಯ ಜೀವಿ ಡಾ|| ಜಿ. ಎಸ್. ಶಿವರುದ್ರಪ್ಪ ಅವರನ್ನು ಈ ಪ್ರಶಸ್ತಿಗೆ ಆಯ್ಕೆಮಾಡಲಾಗಿರುವುದು ಸಂತೋಷದ ವಿಷಯ. ಡಾ|| ಜಿ. ಎಸ್. ಎಸ್. ಅವರಿಗೆ 'ಹೊಸತು' ಅಭಿನಂದನೆಗಳನ್ನು ಸಲ್ಲಿಸುತ್ತದೆ. ಈ ಸಂದರ್ಭದಲ್ಲಿ ಒಂದು ಪ್ರಶ್ನೆಯನ್ನೆತ್ತಿದರೆ ಅನುಚಿತವಾಗಲಾರದು : ಕವಿಗಳಿಗೆ ಮಾತ್ರವೇ ಇಂತಹ ಮನ್ನಣೆ ಸಲ್ಲಬೇಕಾಗಿಲ್ಲ. ಇಂಗ್ಲಿಷ್ ಭಾಷೆಯನ್ನು ಒಂದನೆಯ ತರಗತಿಯಿಂದಲೇ ಕಲಿಯುವ ನಮ್ಮ ಮಕ್ಕಳು ಇನ್ನು ಹತ್ತು ವರ್ಷಗಳ ನಂತರ ಕನ್ನಡದ ಕವಿತೆಗಳನ್ನು ಎಷ್ಟರಮಟ್ಟಿಗೆ ಸವಿಯುತ್ತಾರೋ ಹೇಳಲಾಗದು. ತಮ್ಮ ಪ್ರತಿಭೆಯಿಂದ ರಾಜ್ಯಕ್ಕೆ ಗೌರವ ತಂದುಕೊಟ್ಟಿರುವ ಬೇರೆ ಕ್ಷೇತ್ರಗಳವರನ್ನೂ ರಾಷ್ಟ್ರ ವಿಜ್ಞಾನಿ, ರಾಷ್ಟ್ರತಂತ್ರಜ್ಞ, ರಾಷ್ಟ್ರ ಸಂಗೀತಗಾರ, ರಾಷ್ಟ್ರ ಕಲಾವಿದ, ರಾಷ್ಟ್ರ ಶಿಲ್ಪಿ, ರಾಷ್ಟ್ರ ರಾಜಕಾರಣಿ, ರಾಷ್ಟ್ರ ಕೃಷಿಕ, ಎಂದೆಲ್ಲಾ ಗುರುತಿಸುವುದು ಯೋಗ್ಯವಾಗಿರುತ್ತದೆ. ರಾಜ್ಯದ ಜನರು ಇಂತಹ ರಾಷ್ಟ್ರಪ್ರಶಸ್ತಿ ವಿಜೇತರನ್ನು ಭೇಟಿಯಾಗಬಹುದಾದಂತಹ ಕೆಲವು ಕಾರ್ಯಕ್ರಮಗಳನ್ನು ಸಹ ನಾವು ಯೋಜಿಸಿಕೊಳ್ಳಬೇಕು. ಅಂತರರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಯೊಬ್ಬನನ್ನು ನಮ್ಮ ಪ್ರೌಢಶಾಲಾ ವಿದ್ಯಾರ್ಥಿಗಳು ಭೇಟಿಯಾಗಲು ಸಾಧ್ಯವಾದರೆ ಅವರಿಗೆ ವಿಶೇಷ ಹುಮ್ಮಸ್ಸು ಮೂಡುವ ಸಾಧ್ಯತೆ ಇರುತ್ತದೆ. ಸದ್ಯದಲ್ಲಿ ಡಾ|| ಜಿ. ಎಸ್. ಶಿವರುದ್ರಪ್ಪ ಅವರ ವಿಚಾರಗಳನ್ನು ಜನರಿಗೆ ತಲುಪಿಸುವ ಕನಿಷ್ಠ ಕಾರ್ಯಕ್ರಮವನ್ನು ಹಾಕಿಕೊಂಡು ಮುನ್ನಡೆದರೆ ಅವರಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದು ಅರ್ಥವತ್ತಾಗಿರುತ್ತದೆ. ಮತ್ತೊಮ್ಮೆ ಡಾ|| ಜಿ. ಎಸ್. ಎಸ್. ಅವರಿಗೆ ಅಭಿನಂದನೆಗಳು.


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಪ್ರಕೃತಿಯನ್ನು ದೋಚುವಿಕೆ

ಪ್ರಕೃತಿಯನ್ನು ದೋಚುವ ದೇಶಗಳು ಬಡತನದಿಂದ ತತ್ತರಿಸುತ್ತಿವೆ. ಶೇಕಡ ಒಂದರಷ್ಟು ಅರಣ್ಯ ನಾಶ ಮಾಡಿದರೆ ಮಲೇರಿಯಾ ರೋಗ ಶೇಕಡ ೮ರಷ್ಟು ಉಲ್ಬಣಗೊಳ್ಳುವ ಸಾಧ್ಯತೆ ಇದೆ. ಇದಕ್ಕೆ ಕಾರಣ, ಮಲೇರಿಯಾ ಹರಡುವ ಸೊಳ್ಳೆಗಳು ಸೂರ್ಯರಶ್ಮಿ ಬೀಳುವ ತೆರೆದ ಹಳ್ಳಗಳಲ್ಲಿ ಉಲ್ಬಣಗೊಳ್ಳುವುವು. ಕಾಡುಗಳು ವಾಯುಮಾಲಿನ್ಯ ತಡೆಗಟ್ಟುತ್ತವೆ. ಪ್ರವಾಹವನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತವೆ. ಹಸಿವು ನೀಗಲು ಬೇಕಾದ ಗೆಡ್ಡೆಗೆಣಸುಗಳನ್ನು ಒದಗಿಸುತ್ತವೆ. ಔಷಧೀಯ ವನಸ್ಪತಿಗಳು ಬೆಳೆಯಲು ಸಹಕಾರಿಯಾಗುತ್ತವೆ ಎಂಬುದು ಮರಗಳ ನಾಶಮಾಡುವವರಿಗೆ ಮುಖ್ಯವೆನಿಸುವುದೇ ಇಲ್ಲ. ಅವರಿಗೆ ಹಣ ಮಾಡುವುದೊಂದೇ ಮುಖ್ಯ. ಪರಿಸರ ವ್ಯವಸ್ಥೆಯನ್ನು ಪುನರ್ ನಿರ್ಮಾಣ ಮಾಡುವೆವಾದರೆ ಹೆಚ್ಚಿನ ಗಳಿಕೆ ಸಾಧ್ಯವಾಗುತ್ತದೆ. ಹಾಗೆ ಮಾಡಲಿಲ್ಲವಾದರೆ ಬಡತನ ಉಲ್ಬಣಗೊಳ್ಳುವುದು ಅನಿವಾರ್ಯವಾಗುತ್ತದೆ. ಪರಿಸರ ಪುನರ್ನಿರ್ಮಾಣ ಕಾರ್ಯದ ಮೇಲೆ ಹಣ ಹೂಡುವುದು ಹೆಚ್ಚು ಲಾಭದಾಯಕ. ಟಾನ್‌ಜಾನಿಯಾದಲ್ಲಿ ೮೦೦ ಗ್ರಾಮ್‌ಗಳ ಮೂರೂವರೆ ಲಕ್ಷ ಹೆಕ್ಟೇರ್ ಅರಣ್ಯ ಭೂಮಿಯಲ್ಲಿ ಬೆಳೆದಿದ್ದ ಮರಗಳನ್ನೆಲ್ಲ ನಾಶಮಾಡಲಾಗಿತ್ತು. ಈಗ ಮತ್ತೆ ಅಲ್ಲಿ ಅರಣ್ಯಾಭಿವೃದ್ಧಿ ಕೆಲಸ ನಡೆಸಿದುದರ ಪರಿಣಾಮವಾಗಿ ಜನರಿಗೆ ಈಗ ನಗದು ಸೌಲಭ್ಯ ಸಿಕ್ಕಿದಂತಾಗಿದೆ. ಅಂದರೆ, ಅಲ್ಲಿಯ ಗ್ರಾಮವಾಸಿಗಳಿಗೆ ಗುಡಿಸಲು ನಿರ್ಮಿಸಿಕೊಳ್ಳಲು ಸಾಮಗ್ರಿಗಳು, ಗೆಡ್ಡೆಗೆಣಸು, ವನಸ್ಪತಿ, ಮರಮುಟ್ಟು ಮತ್ತು ಉರುವಲು ಸೌದೆ ರೂಪದಲ್ಲಿ ತಲಾ ತಿಂಗಳಿಗೆ ಏಳು ನೂರು ರೂ.ಗಳಷ್ಟು ಪ್ರತಿಫಲ ಸಿಗುತ್ತಿದೆ.

ಬಡರಾಷ್ಟ್ರಗಳ ಜನತೆಗೆ, ಪ್ರಕೃತಿಯನ್ನು ಪೋಷಿಸುವುದರಿಂದ ತಮಗೆ ಸಿಗುವ ಸೌಲಭ್ಯಗಳೇನು ಎಂಬುದರ ತಿಳುವಳಿಕೆ ಇಲ್ಲವೇ ಇಲ್ಲ. ಪ್ರಾಕೃತಿಕ ಸಂಪತ್ತನ್ನು ಯೋಗ್ಯವಾದ ರೀತಿಯಲ್ಲಿ ಬಳಸಿಕೊಂಡಲ್ಲಿ ಆ ಮೂಲಕ ಬಡತನವನ್ನು ಬಹುಮಟ್ಟಿಗೆ ನೀಗಬಹುದು. ಪ್ರಾಕೃತಿಕ ಸಂಪತ್ತು ಬರಿದಾಗುತ್ತಿರುವ ಕಾರಣದಿಂದ ಕೆಟ್ಟ ಕಾಯಿಲೆ ಗಳನ್ನು, ರಾಜಕೀಯ ಅಭದ್ರತೆಯನ್ನು, ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯನ್ನು ಅನುಭವಿಸುತ್ತಿರುವ ಹಾಗೂ ಬಡತನದಿಂದ ಪಾರಾಗಲು ದಾರಿಕಾಣದೆ ಹತಾಶರಾದ, ಕ್ರೋಧಾಧೀನರಾದ ಜನಜಂಗುಳಿಯನ್ನು ಪಾರುಮಾಡಿ ಹೊಸ ಸಮಾಜ ಒಂದನ್ನು ರೂಪಿಸುವ ಕಾಲ ಸನ್ನಿಹಿತವಾಗಿದೆ.

ಕಾಡಿನಲ್ಲಿರುವ ವೃಕ್ಷಗಳನ್ನು ಕೆಡುವುವುದರಲ್ಲೂ ಒಂದು ಕ್ರಮ ಅನುಸರಿಸಬೇಕು. ಯಾವ ಜಾತಿಯ ಮರಗಳನ್ನು ಹೆಚ್ಚಾಗಿ ಬೆಳೆಸಬೇಕು ? ಯಾವ ಜಾತಿಯ ಮರವನ್ನು ತೆಗೆಯುವುದರಿಂದ, ಇತರ ಮರಗಳು ಮತ್ತಷ್ಟು ಹುಲುಸಾಗಿ ಬೆಳೆಯುತ್ತವೆ ಎಂಬ ಪರಿಜ್ಞಾನ ಅರಣ್ಯ ಇಲಾಖೆಯವರಿಗೆ ಇರಬೇಕು. ಅಂದರೆ ಪರಿಸರ ಪ್ರಜ್ಞೆಯುಳ್ಳ ಅರಣ್ಯಶಾಸ್ತ್ರದ ಪರಿಪೂರ್ಣ ಜ್ಞಾನವನ್ನು ಅರಣ್ಯ ಇಲಾಖೆಯವರು ಕರಗತ ಮಾಡಿಕೊಳ್ಳಬೇಕು.

ಪರಿಸರ ಧ್ವಂಸಕಾರ್ಯದಿಂದಾಗುವ ನಷ್ಟ ಎಷ್ಟು ಎಂಬುದಕ್ಕೆ ಈಗ ಸಾಕ್ಷ್ಯಾಧಾರ ಸಿಕ್ಕಿದೆ. ಯೂರೋಪಿನಲ್ಲಿ ವಾಯುಮಾಲಿನ್ಯವನ್ನು ಕೂಡಲೇ ತಡೆಗಟ್ಟಲು ಕಾರ್ಯಕ್ರಮ ಕೈಗೊಳ್ಳದಿದ್ದಲ್ಲಿ ವರ್ಷಕ್ಕೆ ೭೦೦ ಬಿಲಿಯನ್ ಡಾಲರ್ ಹಣವನ್ನು ಆರೋಗ್ಯ ಇಲಾಖೆ ಖರ್ಚು ಮಾಡಬೇಕಾಗುವುದೆಂದು ಯೂರೋಪಿಯನ್ ಯೂನಿಯನ್ ಅಂದಾಜು ಮಾಡಿದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ತಲೆದೋರುವ ಕಾಯಿಲೆಗಳಲ್ಲಿ ೧/೫ರಷ್ಟು ಪರಿಸರ




ಮಾಲಿನ್ಯ ಕಾರಣದಿಂದ ಉಂಟಾಗುತ್ತವೆ ಎಂದು ವಿಶ್ವ ಬ್ಯಾಂಕ್ ಅಭಿಪ್ರಾಯ ವ್ಯಕ್ತಪಡಿಸಿದೆ. ಈ ಕಾಯಿಲೆಯ ಕಾರಣದಿಂದ ಬಡತನದಿಂದ ಜನ ಹೊರಬರಲು ಸಾಧ್ಯವಾಗುತ್ತಿಲ್ಲ. ಅಭಿವೃದ್ಧಿಯ ಹೆಸರಿನಲ್ಲಿ ಪರಿಸರವನ್ನು ಕಡೆಗಣಿಸಿದ ಕಾರಣದಿಂದಲೇ ಮಿಸಿಸಿಪ್ಪಿಯ ಸ್ವಾಭಾವಿಕ ರಕ್ಷಣೆ ಒಂದೇ ಸಮನೆ ನಾಶವಾಗಿ, ಲೂಸಿಯಾನಾದಲ್ಲಿ ಇತ್ತೀಚೆಗೆ ಸಂಭವಿಸಿದ ಕಟ್ರಿನಾ ಬಿರುಗಾಳಿಯಿಂದ ಅಪಾರವಾದ ಅನಾಹುತ ಸಂಭವಿಸಿತು. ಪ್ರಕೃತಿ ಆ ಮೂಲಕ ತನ್ನ ಮುಯ್ಯಿ ತೀರಿಸಿಕೊಂಡಿತು. ಬಿರುಗಾಳಿಯ ದಾಳಿಯನ್ನು ಫಲಪ್ರದವಾಗಿ ತಡೆಗಟ್ಟಬೇಕಾಗಿದ್ದ ನ್ಯೂಆರ್ಲಿಯನ್ಸ್‌ನ ಲೆವೀಸ್‌ಗಳು ಬಿರುಕುಬಿಟ್ಟವು. ಅದರಿಂದ ಅಮೆರಿಕಾ ಸಂಯುಕ್ತ ಸಂಸ್ಥಾನ ಸರ್ಕಾರಕ್ಕೆ ೨೦೦ ಬಿಲಿಯನ್ ಡಾಲರ್‌ಗಳಷ್ಟು ನಷ್ಟ ಸಂಭವಿಸಿದೆ. ಇರಾಕ್ ಮೇಲೆ ಅಮೆರಿಕಾ ಹೂಡಿದ ಯುದ್ಧಕ್ಕೆ ಖರ್ಚು ಮಾಡಿದಷ್ಟೇ ಹಣವನ್ನು ಕಟ್ರಿನಾ ಅನಾಹುತ ಸಂಭವಿಸಿದ ಪ್ರದೇಶದ ಮೇಲೂ ಸರ್ಕಾರ ಖರ್ಚು ಮಾಡಬೇಕಾಗಿಬಂತು.

ಜಿ.ಡಿ.ಪಿ.ಯನ್ನು ಕ್ಷೇಮಾಭ್ಯುದಯ ಸೂಚಿಯನ್ನಾಗಿ ಸರ್ಕಾರಗಳು ತಪ್ಪಾಗಿ ಭಾವಿಸುತ್ತವೆ. ಜಿ.ಡಿ.ಪಿ.ಯ ನಿಜವಾದ ಗುರಿ ಆರ್ಥಿಕ ಚಟುವಟಿಕೆಗಳ ಅಳತೆಗೋಲಾಗಿ ಬಳಸುವುದಾಗಬೇಕು. ಜಿ.ಡಿ.ಪಿ. ಬಳಕೆ ಅಪ್ರಯೋಜಕವಲ್ಲ. ಅದನ್ನು ತಪ್ಪಾಗಿ ಬಳಸಲಾಗುತ್ತಿದೆ ಎಂಬುದೇ ನಮ್ಮ ತಕರಾರು. ಭಾರತ, ಪಾಕಿಸ್ತಾನ, ಬಾಂಗ್ಲಾದೇಶ ಮತ್ತು ನೇಪಾಳಗಳ ಆರ್ಥಿಕ ಸ್ಥಿತಿಗತಿಗಳನ್ನು ಅವರು ಆ ದೇಶಗಳ ಇಂಗಾಲದ ಹೊರ ಹಾಕುವಿಕೆ, ವೃಕ್ಷ ಸಂಪತ್ತಿನ ನಾಶ, ಎಣ್ಣೆ ಮತ್ತು ಪ್ರಾಕೃತಿಕ ಅನಿಲಗಳ ದುಂದುಬಳಕೆ ಈ ಆಧಾರದ ಮೇಲೆ ಅಭ್ಯಾಸ ಮಾಡಿರುವ ಪ್ರೊ॥ ದಾಸ್‌ಗುಪ್ತಾ ಅವರು ೧೯೭೦ರಿಂದ ಮೇಲೆ ಹೇಳಿದ ಎಲ್ಲ ಪ್ರಕೃತಿ ಸಂಪತ್ತು ಸಾಕಷ್ಟು ಹಾನಿಗೊಳಗಾಗಿದೆಯೆಂದು ಅಂಕಿಅಂಶಗಳ ಮೂಲಕ ಅಂದಾಜು ಮಾಡಿದ್ದಾರೆ.

ಬಡತನ ನಿವಾರಣೆಯಾಗಬೇಕಾಗಿದ್ದರೆ, ನಾವು ಹೇಗೆ ಕಟ್ಟಡಗಳನ್ನು, ಯಂತ್ರಗಳನ್ನು, ರಸ್ತೆಗಳನ್ನು ಆರ್ಥಿಕ ಲೆಕ್ಕಾಚಾರಕ್ಕೆ (Economic Audit) ಒಳಪಡಿಸುವೆವೋ ಹಾಗೆಯೇ ಪ್ರಕೃತಿಯನ್ನು ಆರ್ಥಿಕ ಲೆಕ್ಕಾಚಾರಕ್ಕೆ ಒಳಪಡಿಸಿದಾಗ ಮಾತ್ರ ರಾಷ್ಟ್ರದ ಬಡತನ ನೀಗಲು ಸಾಧ್ಯವಾದೀತು. (ಸಾಧಾರ)

*ಬೆಂಗಳೂರು* **ಎಚ್. ಎಸ್. ದೊರೆಸ್ವಾಮಿ**

## ಮಾತು - ಮುತ್ತು

"ಮಾತು ಆಡಿದರೆ ಹೋಯಿತು; ಮುತ್ತು ಒಡೆದರೆ ಹೋಯಿತು" ಎನ್ನುವ ಮಾತನ್ನು ನಾವೆಲ್ಲ ಕೇಳಿದ್ದೇವೆ. ಆಡಿದ ಮಾತು ಅಥವಾ ಒಡೆದ ಮುತ್ತನ್ನು ಸರಿಪಡಿಸಲಾಗುವುದಿಲ್ಲ ಎಂದು ತಾನೆ ಇದರರ್ಥ ? ಕಪ್ಪು ಹಲಗೆಯ ಮೇಲೆ ಬರೆದ ಅಕ್ಷರಗಳನ್ನೊ, ಮರಳಿನ ಮೇಲೆ ಬರೆದ ಚಿತ್ರವನ್ನೊ ಅಳಿಸಿ ತಿದ್ದಬಹುದು, ಹೊಸದನ್ನ ಸೃಷ್ಟಿಸಬಹುದು. ಆದರೆ ಒಮ್ಮೆ ಆಡಿದ ಮಾತನ್ನಾಗಲಿ, ಒಡೆದ ಮುತ್ತನ್ನಾಗಲಿ ಸರಿಪಡಿಸಲಾದೀತೆ ? ಆಡುವ ಅಥವಾ ಒಡೆವ ನಮ್ಮ ಕ್ರಿಯೆ ಪ್ರಜ್ಞಾಪೂರ್ವಕದ್ದಾಗಿರಲಿ, ಅಪ್ರಜ್ಞಾಪೂರ್ವಕದ್ದಾಗಿರಲಿ ಅವುಗಳ ಫಲಿತಾಂಶದಲ್ಲಿ ಮಾತ್ರ ಬದಲಾವಣೆಯನ್ನು ತರಲಾಗುವುದಿಲ್ಲ. ಇವು ತನ್ಮೂಲಕ ನಮಗಿರಬೇಕಾದ 'ಜವಾಬ್ದಾರಿ'ಯನ್ನೆ ಎಚ್ಚರಿಸುತ್ತವಲ್ಲವೆ ? 'ಛೆ! ನಾನು ಹಾಗೆ ಮಾತನಾಡುವುದಕ್ಕಿಂತ ಹೀಗೆ ಮಾತನಾಡಿದ್ದರೆ ಚೆನ್ನಾಗಿರುತ್ತಿತ್ತು' ಎಂತಲೊ, 'ನಾನು ಸ್ವಲ್ಪ ಜೋಪಾನವಾಗಿದ್ದಿದರೆ...' ಎಂತಲೊ ಉದ್ಗರಿಸುವ ಹಿಂದೆ ನಮ್ಮ

### ಮನವಿ

ಪ್ರಕಟಣೆಗೆ ಸ್ವೀಕೃತವಾಗಿರುವ ಕತೆಗಳು, ಕವನಗಳು ಮತ್ತು 'ನಾನು ಓದಿದ ಪುಸ್ತಕ' ವಿಭಾಗಕ್ಕೆ ಲೇಖನಗಳು ಈಗ ನಮ್ಮಲ್ಲಿ ಅಧಿಕವಾಗಿ ಶೇಖರವಾಗಿವೆ. ಆದ್ದರಿಂದ ಅವುಗಳ ಪ್ರಕಟಣೆ ನಿಧಾನವಾಗುತ್ತದೆ. ಲೇಖಕರು ಇದನ್ನು ಗಮನಿಸಿ ಸಹಕಾರ ನೀಡಬೇಕೆಂದು ವಿನಂತಿ. ಬೇರೆ ಲೇಖನಗಳನ್ನು ಕಳಿಸುವವರು ಸುಮಾರು ೧೫೦೦–೧೬೦೦ ಪದಗಳ ಮಿತಿಯನ್ನು ಇರಿಸಿಕೊಂಡರೆ ಅನುಕೂಲವಾಗುತ್ತದೆ.

*ಸಂಪಾದಕ*

'ಬೇಜವಾಬ್ದಾರಿ'ತನವೆ ತಾನೆ ಕಾಣುವುದು ?

ಚೀನಾದ ಮಹಾನ್ ದಾರ್ಶನಿಕ ಕನ್‌ಫ್ಯೂಷಿಯಸ್ ಒಮ್ಮೆ ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಕೈಗೊಂಡನು. ಲೋ ಎಂಬ ನಗರದ ಒಂದು ವೈಭವ ದೇವಸ್ಥಾನದಲ್ಲಿ ಬಾಯಿಗೆ ಕೊಂಡಿಹಾಕಿಕೊಂಡಿದ್ದ ಮನುಷ್ಯನ ಲೋಹದ ಮೂರ್ತಿಯನ್ನು ಕನ್‌ಫ್ಯೂಷಿಯಸ್ ಕಂಡನು. ಆ ಮೂರ್ತಿಯ ಹಿಂಭಾಗದಲ್ಲಿ ಹೀಗೆ ಬರೆದಿತ್ತು :

''ನಿನ್ನ ಮಾತಿನ ಬಗೆಗೆ ಜಾಗ್ರತನಾಗಿರು,
ಅತಿಯಾಗಿ ಮಾತನಾಡಬೇಡ,
ಏಕೆಂದರೆ,
ಮಾತು ಅನರ್ಥಕ್ಕೆ ಎಡೆಮಾಡಿಕೊಡುತ್ತದೆ.''

ಇದನ್ನು ಓದಿದ ಕನ್‌ಫ್ಯೂಷಿಯಸ್ ಸ್ತಂಭೀಭೂತನಾಗಿ ತನ್ನ ಶಿಷ್ಯನಿಗೆ ಹೀಗೆ ಹೇಳಿದನು : ''ಈ ಮಾತುಗಳು ಸತ್ಯ ಮತ್ತು ತಮ್ಮನ್ನು ತಾವು ನಮ್ಮ ಭಾವನೆಗಳಿಗೆ ಒಪ್ಪಿಸಿಕೊಳ್ಳುತ್ತವೆ.''

ಈ ಮೇಲಿನ ವಿವರಣೆ ನಮಗೆ ಏನನ್ನು ಹೇಳುತ್ತದೆ ? 'ಅರ್ಥ'ವಿಲ್ಲದ ಮಾತು ಎಂದರೆ 'ಅನರ್ಥ' ಎಂದು ತಾನೆ ? ನಮ್ಮ ಸುತ್ತಮುತ್ತಲಿನ ಗಿಡಮರ, ಹೂವುಹಣ್ಣು, ಪ್ರಾಣಿಪಕ್ಷಿಗಳಾಗಲಿ ಅಥವಾ ಪುಟ್ಟ ಮಕ್ಕಳಾಗಲಿ ಎಂದೂ ಯಾರೊಂದಿಗೂ ತಮ್ಮ ಸಂಬಂಧವನ್ನು ಕೆಡಿಸಿಕೊಳ್ಳವು. ಇದಕ್ಕೆ ಅವುಗಳ ಮೌನದ ಮಾತಲ್ಲದೆ ಮತ್ಯಾವ ಕಾರಣ ವಿರಲು ಸಾಧ್ಯ ? ನಮ್ಮ ಹಳ್ಳಿಗಳಲ್ಲಿನ ಆಚರಣೆಯಲ್ಲಿ 'ಬಾಯಿಗ ಬೀಗ' ಚುಚ್ಚಿ ದೇವರನ್ನು ಪ್ರಾರ್ಥಿಸುವ, ಹರಕೆ ಹೊರುವ ಪದ್ಧತಿಯೂ ಮಾತಿಗಿರಬೇಕಾದ 'ಅರ್ಥ' ಮತ್ತು 'ಎಚ್ಚರ'ವನ್ನೂ, ಮೌನದ ಅಗತ್ಯವನ್ನೂ ಹೇಳುತ್ತದೆ. ನಾನು ಹೇಳದಿದ್ದುದು ನನಗೆ ಎಂದೂ ಯಾವ ಕೆಡುಕನ್ನೂ ಉಂಟುಮಾಡದಿರುವುದನ್ನು ನಾನು ಗಮನಿಸಿದ್ದೇನೆ ಎನ್ನುವ ಕ್ಯಾಲ್ವಿನ್ ಕೂಲಿಡ್ಜ್ ಎಂಬ ಚಿಂತಕ ಮೌನ ಮಥನದ ಮಾತಿನ ಜವಾಬ್ದಾರಿ ಕುರಿತೆ ಹೇಳಿದ್ದಾನೆ. ಮಾತು ಮೌನವಾದಾಗ, ಮೌನ ಮಾತಾದಾಗ ಮಾತ್ರ 'ಮಾತು ಬೆಳ್ಳಿ ಮೌನ ಬಂಗಾರ' ವಾಗಲು ಸಾಧ್ಯ ತಾನೆ ?

ಹಾಸನ — ಜ.ನಾ. ತೇಜಶ್ರೀ

### ನವೆಂಬರ್ ಸಂಚಿಕೆ

ಮುಖಪುಟ ಅತ್ಯಂತ ಸುಂದರವಾಗಿ ಬಂದಿದೆ.

ಗಿರೀಶ್ ಕಾಸರವಳ್ಳಿ ನಿರ್ದೇಶನದ 'ನಾಯಿನೆರಳು' ಸಿನಿಮಾ ರಾಷ್ಟ್ರಪ್ರಶಸ್ತಿ ಪಡೆದುದಕ್ಕೆ ತುಂಬ ಸಂತೋಷವಾಗಿದೆ. ಕನ್ನಡಿತಿ ಪವಿತ್ರಾ ಲೋಕೇಶ್ ರಾಷ್ಟ್ರಪ್ರಶಸ್ತಿ ಪಡೆದು ಕನ್ನಡಿಗರ ಹೆಮ್ಮೆಗೆ ಪಾತ್ರರಾಗಿದ್ದಾರೆ. ಕಾಸರವಳ್ಳಿ ಹಾಗೂ ಪವಿತ್ರಾ ಅವರಿಗೆ ಅಭಿನಂದನೆಗಳು.

ತುಮಕೂರು — ಆರ್. ಮಾನಸ, ಆರ್. ವಿಕಾಸ್

'ನಾಯಿನೆರಳು' ಚಲನಚಿತ್ರದ ಒಂದು ದೃಶ್ಯದೊಂದಿಗೆ ವಿಶೇಷ ವರ್ಣವಿನ್ಯಾಸ ಪಡೆದು ನವ್ಯ ರೂಪವನ್ನು ತಳೆದು ಆಕರ್ಷಣೀಯವಾಗಿ ಹೊರಹೊಮ್ಮಿದೆ. ಡಾ|| ಎಸ್. ಎಲ್. ಭೈರಪ್ಪನವರ ಇದೇ ಹೆಸರಿನ ಕಾದಂಬರಿಯ ಕಥಾವಸ್ತುವಿನ ಸುತ್ತ ಹೆಣೆದು ಅದಕ್ಕೆ ಕಾಸರವಳ್ಳಿಯವರು ತಮ್ಮದೇ ಆದ ಛಾಪನ್ನು ತುಂಬಿ ವಿಶಿಷ್ಟ ಪ್ರಯೋಗ ನಡೆಸಿರುವ ಪರಿಯನ್ನು ಅತ್ಯಂತ ನಾಜೂಕಾಗಿ ವಿವರಿಸಿರುವ ಬಿ. ಸುರೇಶ್‌ರವರ ಶೈಲಿ ವಿಭಿನ್ನವಾದರೂ ಓದುಗನನ್ನು ತನ್ನದೇ

> ಶ್ರೀ ಈರಪ್ಪ ಎಂ. ಕಂಬಳಿ ಅವರ 'ಭಾಷಾಂತರ ಇಲಾಖೆ ನಡೆದು ಬಂದ ದಾರಿ' (ನವೆಂಬರ್ ೨೦೦೬) ಎಂಬ ಲೇಖನದಲ್ಲಿ ಈಗಿನ ನಿರ್ದೇಶಕರ ಹೆಸರು ತಪ್ಪಾಗಿ ಅಚ್ಚಾಗಿದೆ. ಅದನ್ನು ಶ್ರೀ. ವೆಂಕಟರಾಮಯ್ಯ ಎಂದು ತಿದ್ದಿಕೊಳ್ಳಬೇಕು.
>
> ಸಂಪಾದಕ

ಚೌಕಟ್ಟಿನಲ್ಲಿ ಇರಿಸುವಲ್ಲಿ ಸಫಲವಾಗಿದೆ. ಕಥನ ಕ್ರಮ, ಸ್ಕೋಪ್ ಮತ್ತು ಕ್ಯಾಮೆರಾ, ಸಂಭಾಷಣೆ, ಅಭಿನಯ ಮತ್ತು ಕೆಲವು ಪ್ರಶ್ನೆಗಳು ಹೀಗೆ ಸಾಗುತ್ತಾ ವಿಮರ್ಶಾತ್ಮಕ ಮತ್ತು ಚಿತ್ರದ ಪಾತ್ರಗಳ ಪರಿಚಯವನ್ನೂ ವೈಭವೀಕರಿಸಿ ಓದಿಸಿಕೊಂಡು ಹೋಗುತ್ತದೆ.

ಕಥನಕ್ರಮದಲ್ಲಿ ಮೂಲ ಕಾದಂಬರಿಯನ್ನು ಓದದೇ ಚಿತ್ರ ನೋಡಿದ ವೀಕ್ಷಕನ ಕೋನದಲ್ಲಿಯೇ ವ್ಯಾಖ್ಯಾನದ ಹೆಜ್ಜೆಗಳನ್ನು ಇಟ್ಟಿದೆ ಎಂದೆನಿಸಿದರೂ ''ಸಾಹಿತ್ಯ ಪ್ರಕಾರದಿಂದ ಸಿನಿಮಾ ಮಾಧ್ಯಮಕ್ಕೆ ಬಂದಂತಹ ಕೃತಿಯೊಂದರ ಸಾಧನೆಯಾಗಬೇಕು'' ಎನ್ನುವ ನಿಟ್ಟಿನಲ್ಲಿ ಗಿರೀಶ್ ಯಶಸ್ವಿಯಾಗಿದ್ದಾರೆ ಎನ್ನುವ ಚಿಂತನ ಮಂಥನೀಯ. ಸ್ಕೋಪ್ ಮತ್ತು ಕ್ಯಾಮೆರಾ ತಾಂತ್ರಿಕವಾಗಿ ಪೂರಕ ಮಾಹಿತಿ ಇತ್ತಿದ್ದರೆ, ಸಂಭಾಷಣೆ ಚಿತ್ರವನ್ನು ವೀಕ್ಷಿಸಲು ಪ್ರೇರೇಪಿಸುವಂತಿದೆ. ಅಭಿನಯಕ್ಕೆ ಈಗಾಗಲೇ ಪುರಸ್ಕಾರ ದೊರೆತೇ ಇರುವುದು ಸರ್ವವಿದಿತ. ಇನ್ನು ಕೆಲವು ಪ್ರಶ್ನೆಗಳು – ಕಲಾತ್ಮಕ, ಹೊಸ ಅಲೆ ಚಿತ್ರಗಳ ಮಟ್ಟಿಗೆ ಮೊದಲಿನಿಂದಲೂ ಸಾಧಾರಣ ವೀಕ್ಷಕ ತನ್ನದೇ ಆದ ಧೋರಣೆ ಹೊಂದಿರುತ್ತಾನೆ. ಹೀಗಾಗಿ ಇಂತಹ ಪ್ರಶ್ನೆಗಳು ಉದ್ಭವಿಸುವುದು ಸಹಜ. ಆದರೂ ''ನೋಡುಗನಿಲ್ಲದ ಸಿನಿಮಾ ತಿನ್ನುವವರಿಲ್ಲದ ಹಳಸುವ ಒಬ್ಬಟ್ಟಿನಂತಾಗಬಾರದು'' ಎನ್ನುವ ಸಮಾರೋಪ ಕನ್ನಡ ಚಿತ್ರಪ್ರೇಕ್ಷಕನ ಪಾಲಿಗೆ ಒಂದು ಕೌತುಕದ ಚಿಹ್ನೆಯಾದಿತೇನೋ ?

ಬೆಂಗಳೂರು — ನೆ. ಲ. ರಾಮಮೂರ್ತಿ

### ಸಾಹಿತ್ಯ ವಿಮರ್ಶೆಯ ಕಾರ್ಯ

ಭಾಷೆಗಳು ಮಾನವನ ನಾಗರಿಕತೆಯ ಸಂಪತ್ತಾಗಿ ಬೆಳೆದರೆ ಸಾಹಿತ್ಯವು ಬದುಕಿನ ಗುಣಮಟ್ಟದ ಸೂಚ್ಯಂಕವಾಗಿ ಹಾಗೂ ಅವುಗಳ ವಿಮರ್ಶಾ ಗುಣಾತ್ಮಕ ಮೌಲ್ಯಗಳಾಗಿ ನಾಗರಿಕ ಸಮಾಜದ ನಿರ್ಮಾಣದಲ್ಲಿ ಪೂರಕವಾಗಿ ಬೆಳೆದುಬಂದ ವಿಚಾರವನ್ನು ಓದುಗರೊಂದಿಗೆ ಅವರ ಮನಃಸ್ಥಿತಿಗನುಸಾರವಾಗಿ ಹಂಚಿಕೊಂಡ ಲೇಖನದಲ್ಲಿ ಸತ್ವವಿದೆ, ವಸ್ತುನಿಷ್ಠ ವಿಚಾರವಿದೆ. ಬರಹಗಳು, ಲೇಖನಗಳು, ಕಥೆ, ಕಾದಂಬರಿ, ಕವಿತೆಗಳು ಲೇಖಕರು ಸೃಷ್ಟಿಸಿದ ಕೂಸುಗಳು. ಹೆತ್ತವರಿಗೆ ಹೆಗ್ಗಣ ಮುದ್ದು ಎಂಬ ಸಾಮಾಜಿಕ ಕಳಕಳಿಯಿಂದಾಗಿ ಕೂಸುಗಳು ಕಂಟಕಪ್ರಾಯರಾಗಿ ನಾಗರಿಕತೆಯ ನಾಶಕ್ಕಾಗಿ ಪ್ರಯತ್ನಿಸಿದ ಎಲ್ಲಾ ವಿವರಗಳು ಚರಿತ್ರೆಯ ಪುಟಗಳಲ್ಲಿ ಹಚ್ಚಹಸಿರಾಗಿರುವುದರಿಂದಾಗಿ ಭಗವಾನ್ ಕೃಷ್ಣ ವೈದ್ಯನಾಗಿ, ವಿಮರ್ಶಕನಾಗಿ ಬದುಕನ್ನು ಸರಿಪಡಿಸಿದ ರೀತಿಯಿಂದಾಗಿ ಆತ ನಮಗೆ ತಿಳಿದಿರುವ ಅತ್ಯುತ್ತಮ ವಿಮರ್ಶಕನಾಗಿದ್ದಾನೆ. ಆದರೆ ವೈವಿಧ್ಯಮಯ ಹಾಗೂ ವಿಶಿಷ್ಟಪೂರ್ಣ ನಿಲುವುಗಳಿಂದಾಗಿ ಮಾನವ ತನ್ನ ಮಾನಸಿಕ ಬೆಳವಣಿಗೆಗಳಿಂದಾಗಿ ತನ್ನನ್ನು ಗುರುತಿಸಿಕೊಂಡು ನಿರಂತರ ಸಾಹಿತ್ಯ ಚಲನೆಯಲ್ಲಿ ತೊಡಗಿಸಿಕೊಂಡ ಪರಿಣಾಮದಿಂದಾಗಿ ಸೃಷ್ಟಿ, ಸ್ಥಿತಿ ಮತ್ತು ವಿಮರ್ಶೆಗಳು ಓದುಗರನ್ನು ಸದಾ ಆಲೋಚನಾ ಕ್ರಿಯೆಯಲ್ಲಿ ಹಾಗೂ ಸಂಸ್ಕೃತಿಗಳನ್ನು ಅರಿಯುವ ಅಧ್ಯಯನದಲ್ಲಿ ನಿರತರಾಗುವ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಿದೆ. ಪ್ರಯೋಗ ಹಾಗೂ ಕಳಕಳಿಯ ಸಾಹಿತ್ಯಗಳು ಒಟ್ಟಾರೆ ಬೆಳವಣಿಗೆಗಳಾಗಿ ಬದುಕಿನ ಅಂಶಗಳಾದರೆ ವಿಮರ್ಶೆಗಳು ಗುಣಮಟ್ಟದ ತಂತ್ರಗಳಾಗಿ ಸಾಮಾಜಿಕ ವಿಸ್ತಾರದಲ್ಲಿ ಭಾಷೆಗಳನ್ನು ನಿರಂತರ ಅಭಿವೃದ್ಧಿಯ ಜ್ಞಾನಕ್ಷೇತ್ರವಾಗಿ ಕಂಡುಕೊಂಡ ಪರಿಣಾಮವೇ ಪ್ರಗತಿಯತ್ತ ಸಾಗುವ ಸಮಾಜ.

ಬೆಂಗಳೂರು — ನರೇಂದ್ರ ಸಿರಕಜೆ

'ಆತ್ಮವಿಶ್ವಾಸ' ('ತಿಳಿವು')ವನ್ನೋದಿದಾಗ ಪ್ರಸಿದ್ಧವಾದ ಈ ಆಂಗ್ಲ ಗಾದೆ ನೆನಪಾಯಿತು : ನಿಧಾನವಾಗಿ ಯಾದರೂ ಒಂದೇ ಸಮನೆ ನಡೆಯುವವರು ಪಂದ್ಯದಲ್ಲಿ ಗೆಲ್ಲುತ್ತಾರೆ. ವೇಗಗಾಮಿಗಳು ಸುಸ್ತಾಗಲೂಬಹುದು !

'ಬಾಲ್ಟಿಮೋರ್‌ನಲ್ಲಿ ಆದಿವಾಸಿ ಕನ್ನಡಿಗರು' ಎಂಬ ಸುದ್ದಿ ಮತ್ತು ಅದನ್ನು ಅಚ್ಚಿಸಿರುವ ರೀತಿ, ಅದನ್ನೊಂದು 'ಹನಿಗವನ'ವನ್ನಾಗಿಸಿದೆ.

ಮೈಸೂರು — ಸಿಪಿಕೆ

## ಹನಿಕತೆ

ಆಗ ತಾನೆ ತನ್ನನ್ನು ತಡೆಯೋರ್‍ಯಾರೂ ಇಲ್ಲ ಎಂಬಂತೆ ಧೋ... ಎಂದು ಸುರಿದ ಮಳೆಯ ಅಬ್ಬರ ನಿಂತಿತ್ತು. ನಮ್ಗೇನು ಎಂಬಂತೆ ಭೂಮಿಗೆ ಬಿದ್ದ ನೀರು ಸುಮ್ಮನೆ ರಸ್ತೆಗುಂಟ ಎಲ್ಲಾ ಚರಂಡಿಗಳನ್ನೊಂದು ಮಾಡಿ ಹರಿಯುತ್ತಿತ್ತು. ಜನ-ದನ ಮನೆ ಹೊಲ... ಅಲ್ಲಲ್ಲಿ ಹೊಲದ ಫಸಲುಗಳೆಲ್ಲವೂ ತಾವೆಲ್ಲಾ ಒಂದೆಂಬಂತೆ ಕಾಗದದ ದೋಣಿಗಳಂತೆ ತೇಲಿ-ತೇಲಿ ಹೋಗ್ತಾನೇ ಇದ್ವು !

ನಿಂತ ಮಳೆ ಅದ್ಯಾವಾಗ ಬಾಂಬಿನಂತೆ ಮತ್ತೆ ಬೀಳುತ್ತೋ ಅಂತ ಅಳಿದುಳಿದ ಜನ – ಪರಿಹಾರ ಕಾರ್ಯದಿ ತೊಡಗಿದ್ದಾಗಲೇ... ಎಳೇ ಮಗುವಿನ ಕೊರಳಾಳದ ಅಳುವ ದನಿ ಕೇಳಿದ್ದು! ದಡಬಡಾಯಿಸಿ ನೋಡೆ... ಚರಂಡಿಯ ಅಡ್ಡಕಲ್ಲಿನ ಮೇಲ್ಭಾಗಕ್ಕೆ ಸಿಕ್ಕಿ ಚೀರ್‍ತಾ ಅಳ್ತಿತ್ತು !

ನಾಲ್ಕೈದು ಜನ ಸೇರಿ ಎತ್ತಿ ತಂದವರಲ್ಲಿ ಯಾರೋ ಅಂದಂಗಾತು ''ಅಯ್ಯೋ... ಇದು ಸಾಬ್ರ ಇಮಾಮನ ಪಿಳ್ಳೆ'' ಅಂತ ವ್ಯಂಗ್ಯದ ಮಾತು ! ಕೆಲವರಿಗೆ ನಿರಾಶೆಯಾದಂತಾಯ್ತು.

ಮಗು ಅಳ್ತಾನೇ ಇತ್ತು
ನೀರು ಕಣ್ಣಿಂದೋ... ಮಳೆ ನೀರೋ...
ಗೊತ್ತಾಗಲಿಲ್ಲ!

ಸಂತೇಬೆನ್ನೂರು ಫೈಜ್ನಟ್ರಾಜ್
ಸರ್ಕಾರಿ ಪ್ರೌಢಶಾಲೆ, ಕಣಿವೆ ಬಿಳಚಿ - ೫೭೭ ೨೩೦
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ

೩ನೇ ಪುಟದಿಂದ (ಈ ತಿಂಗಳು)

ಅದನ್ನೆಲ್ಲಾ ಸೆರೆಹಿಡಿಯಲು ದುರ್ದರ್ಶನದ ಪ್ರತಿನಿಧಿಗಳು ಮೊದಲೇ ಹೋಗಿರುತ್ತಾರೆ ಎಂಬುದು ಬೇರೆ ವಿಷಯ. ಈ ಗಾಂಧಿ ಅನುರೂಪವನ್ನು ಮಾನ್ಯ ಹಾರ್ನಹಳ್ಳಿ ರಾಮಸ್ವಾಮಿಯವರ ನೇತೃತ್ವದ ಪತ್ರಿಕೆಯೊಂದು ಗುರುತಿಸಿದೆ!

ಈ ತಿಂಗಳ ಮೊದಲ ವಾರದಲ್ಲಿ ಒಂದು ಸಭೆ ನಡೆಯಿತು. ಪ್ರಧಾನ ಮಂತ್ರಿಗಳು ಹಾಜರಿದ್ದ ಈ ಸಭೆಯಲ್ಲಿ ರಾಜ್ಯದ ಮುಖ್ಯಮಂತ್ರಿ ಭಾಗವಹಿಸಿ ಗಣಿಗಾರಿಕೆಯ ಬಗ್ಗೆ ಸಲಹೆಗಳನ್ನು ಮಂಡಿಸಿದ್ದು ದೆಹಲಿಯಲ್ಲಿ ಸ್ವಲ್ಪ ಆಶ್ಚರ್ಯ ಮೂಡಿಸಿರಬಹುದು. ಗಣಿ ಹಗರಣಕ್ಕೆ ಹೆಸರಾಗಿರುವ ರಾಜ್ಯವು ಖಾಸಗಿ ಗಣಿಗಾರಿಕೆಯನ್ನು ನಿರ್ಬಂಧಿಸಬೇಕೆಂದು ಆಗ್ರಹಿಸಿದ್ದು ತೋರಿಕೆಯ ಪೌರುಷವೋ ಅಥವಾ ದೀರ್ಘಕಾಲಿಕ ನೀತಿಯೋ ಎಂಬ ಪ್ರಶ್ನೆ ಎದ್ದಿದೆ. ಎಷ್ಟೋ ''ಗರೀಬಿ ಹಟಾವೊ'' ಘೋಷಣೆಗಳಂತೆ ಇದೂ ಪೊಳ್ಳು ಮಾತಾಗಿಬಿಡುವ ಸಂಭವವೇ ಹೆಚ್ಚು. ಕಳೆದ ತಿಂಗಳು ರಾಮವಿಲಾಸ ಪಾಸ್ವಾನ್ ಹೇಳಿದ್ದನ್ನೇ ಈ ತಿಂಗಳು ಕುಮಾರಸ್ವಾಮಿ ಹೇಳಿರುವುದು ಸ್ವಾರಸ್ಯಕರವಾಗಿದೆ, ಸ್ವಾಗತಾರ್ಹವಾಗಿದೆ. ನಮ್ಮ ಸಂಪನ್ಮೂಲಗಳನ್ನು ಬಳಸಿ ಸರಕುಗಳನ್ನು ತಯಾರಿಸಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅವನ್ನು ಮಾರಬೇಕೇ ವಿನಾ ಕಚ್ಚಾ ಅದಿರನ್ನು ಮಾರಿ ನಷ್ಟ ಮಾಡಿಕೊಳ್ಳಬಾರದೆಂಬುದು ಆ ಸಲಹೆ. ಕಾನೂನು ರೀತ್ಯಾ ಮತ್ತು ಕಾನೂನುಬಾಹಿರವಾಗಿ ನಮ್ಮ ರಾಜ್ಯದಿಂದ ಎಷ್ಟು ಅದಿರನ್ನು ಪೋಲು ಮತ್ತು ಲೂಟಿ ಮಾಡಿದ್ದಾರೆ ಎಂಬುದನ್ನು ಲೆಕ್ಕ ಹಾಕಿದರೆ ಈವರೆಗೆ ಕನಿಷ್ಠ ಒಂದೆರಡು ಲಕ್ಷ ಕೋಟಿ ರೂಪಾಯಿಗಳಾದರೂ ನಷ್ಟವಾಗಿದೆ. ಇದನ್ನು ಮಾಡಿರುವ ಹೆಗ್ಗಣಗಳನ್ನು ಹಿಡಿಯುವ ಆಶಯ ಸರ್ಕಾರಕ್ಕಿಲ್ಲ. ಆಗಾಗ್ಗೆ ಬೆಟ್ಟ ಅಗೆದು ಒಂದು ಇಲಿಯನ್ನು ಹಿಡಿದು ಆಮೇಲೆ ಅದನ್ನು ಬಿಟ್ಟುಬಿಡುವುದು ಸರ್ಕಾರಗಳ ಕೃತ್ರಿಮವಾಗಿದೆ. ಕುಮಾರಸ್ವಾಮಿ ಮತ್ತು ಡಿ. ಕೆ. ಶಿವಕುಮಾರ್ ಕುಟುಂಬಗಳು ಈ ಸಂಬಂಧದಲ್ಲಿ ವಿಶೇಷವಾಗಿ ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಪರಸ್ಪರ ರಾಜಕೀಯ ದೂಷಣೆ ಮತ್ತು ಜಟಾಪಟಿಯಲ್ಲಿ ಆರೋಪ ಮತ್ತು ಪ್ರತ್ಯಾರೋಪಗಳು ಸಾಬೀತಾಗಿ ಎರಡೂ ಕಡೆಯವರು ಜೈಲಿಗೆ ಹೋದರೆ ರಾಜ್ಯದ ಜನ ಕಣ್ಣೀರು ಸುರಿಸುವುದಿಲ್ಲ. ಅವರೆಲ್ಲರ ಜೊತೆ ಅಂತಹ ಬೇರೆಯವರನ್ನೂ ಹಿಡಿದು ಶಿಕ್ಷಿಸಬೇಕು ಮತ್ತು ಅವರು ನುಂಗಿರುವ ರಾಜ್ಯದ ಸಂಪತ್ತನ್ನು ಕಕ್ಕಿಸಬೇಕು. ಇದರ ಬದಲು ಕೇವಲ ಕೊಚ್ಚೆ ಎರಚಿಕೊಳ್ಳುವ ಪ್ರಹಸನ ನಡೆದರೆ ಜನರು ಮುಖ್ಯಮಂತ್ರಿಯವರನ್ನು ಕಟಕಟೆಯಲ್ಲಿ ನಿಲ್ಲಿಸಿ ಪ್ರಶ್ನಿಸಬೇಕು. ಇದು ಚಾಮುಂಡೇಶ್ವರಿ ಕ್ಷೇತ್ರದ ಚುನಾವಣೆಗೆ ಸೀಮಿತವಾದ ತಂತ್ರವಾಗಲು ಬಿಡದೆ ಸಮಗ್ರ ತನಿಖೆ ನಡೆಯುವಂತೆ ಆಗ್ರಹಿಸಬೇಕಾಗಿದೆ.

ಆಂತರಿಕ ಮಾರುಕಟ್ಟೆಯ ಕೃತ್ರಿಮಗಳಿಂದಾಗಿ ಕೊಬ್ಬರಿ ಮತ್ತು ಈರುಳ್ಳಿ ಬೆಳೆಗಾರರು ಈ ತಿಂಗಳಲ್ಲಿ ಪ್ರಬಲ ಪ್ರತಿಭಟನೆಗಳಲ್ಲಿ ತೊಡಗಿಕೊಳ್ಳಬೇಕಾಯಿತು. ಯಥಾಪ್ರಕಾರ ಮಧ್ಯವರ್ತಿ ವ್ಯಾಪಾರಿಗಳು ಮನಬಂದಂತೆ ವರ್ತಿಸಿ ರೈತರ ಕತ್ತು ಹಿಚುಕಲು ಯತ್ನಿಸಿದ್ದು ಇದೇ ಮೊದಲಲ್ಲ. ಆದರೆ ಪ್ರತಿಬಾರಿಯೂ ಉಲ್ಬಣಗೊಳ್ಳುವ ಪರಿಸ್ಥಿತಿಯನ್ನು ಹೇಗೋ ಶಮನ ಮಾಡಲಾಗುತ್ತದೆಯೇ ಹೊರತು ಮೂಲಸಮಸ್ಯೆಗೆ ಪರಿಹಾರ ನೀಡಲಾಗುವುದಿಲ್ಲ. ರೈತರೂ ಪ್ರಸಂಗವನ್ನು ಮರೆತು ಮತ್ತೆ ವ್ಯಾಪಾರಿಗಳ ಅಧೀನದಲ್ಲಿ ಉಳಿಯುತ್ತಾರೆ. ಒಂದು ದೀರ್ಘ ಕಾಲಿಕ ಮಾರಾಟಸೂತ್ರವನ್ನು ರೂಪಿಸುವುದು ಅಗತ್ಯ. ಆಗ ಬೆಳೆಗಾರರಿಗೆ ಸೂಕ್ತ ಬೆಲೆ ಸಿಗುತ್ತದೆ.

ನ್ಯಾಯಾಲಯದ ಆದೇಶದಂತೆ ಜನವಸತಿ ಇರುವ ಕಡೆ ವ್ಯಾಪಾರದ ವಹಿವಾಟನ್ನು ತಡೆಯಲು ದೆಹಲಿಯಲ್ಲಿ (ಮತ್ತು ಕಡಿಮೆ ಪ್ರಮಾಣದಲ್ಲಿ ನಮ್ಮ ಬೆಂಗಳೂರಲ್ಲಿ) ಬೀಗಮುದ್ರೆ ಜಡಿಯುವ ಕಾರ್ಯಕ್ರಮ ನಡೆಯುತ್ತಿದೆ. ನಾಳೆ ಮೆಟ್ರೋ ರೈಲಿನ ನಿರ್ಮಾಣ ಆರಂಭವಾಗಬೇಕಾದರೆ ಇನ್ನಷ್ಟು ವ್ಯಾಪಾರಿಗಳು ಬೀದಿಗೆ ಬೀಳುವುದು ಅನಿವಾರ್ಯ. ಇದೇನನ್ಯಾಯ ಎಂಬ ಕೂಗು ಸಹಜವಾಗಿಯೇ ಮೊಳಗುತ್ತಿದೆ. ದೆಹಲಿಯಲ್ಲಂತೂ ಅಲ್ಲೋಲಕಲ್ಲೋಲವೇ ಆಗಿದೆ. ಮೈಸೂರು-ಬೆಂಗಳೂರು ಮಹಾನ್ ರಸ್ತೆಯ ನಿರ್ಮಾಣಕ್ಕೆ ರೈತರನ್ನು ತಮ್ಮ ಭೂಮಿಯಿಂದ ಹೊರಹಾಕಲಾಯಿತು, ಬಡಾವಣೆಗಳ ನಿರ್ಮಾಣಕ್ಕೆ ತೋಟಗಳೂ ಸೇರಿದಂತೆ ಭೂಮಿಯನ್ನು ವಶಪಡಿಸಿಕೊಳ್ಳಲಾಯಿತು. ವಿಶೇಷ ಆರ್ಥಿಕ ವಲಯಗಳ ನಿರ್ಮಾಣಕ್ಕೆ ಇನ್ನೂ ನೂರಾರು ರೈತರು ಭೂಮಿ ಕಳೆದುಕೊಳ್ಳುವುದಿದೆ. ಅವರ ಜೀವನಕ್ಕೆ ಕುತ್ತು ಬಂದಾಗ ವ್ಯಕ್ತವಾಗದ ಕಾಳಜಿ ವ್ಯಾಪಾರಿಗಳಿಗೆ ಎತ್ತಂಗಡಿಯಾದಾಗ ಕಂಡುಬರುತ್ತಿದೆ. ನ್ಯಾಯಾಲಯವು ಪ್ರಕೃತ ನಮ್ಮ ದೇಶದ ವಾಸ್ತವ ಪರಿಸ್ಥಿತಿಯನ್ನು ಪರಿಶೀಲಿಸದೆ ಜನವಸತಿ ಇರುವೆಡೆ ವ್ಯಾಪಾರ ಕೂಡದೆಂದು ಹೇಳುವುದೇ ಅಬದ್ಧವಾಗಿದೆ. ಒಂದು ಬ್ಯಾಂಕು, ಅಂಚೆ ಕಚೇರಿ, ತರಕಾರಿ ಮಳಿಗೆ, ವಾಹನ ರಿಪೇರಿ ಅಂಗಡಿ, ಧಾನ್ಯ ಮಾರಾಟದ ಕೇಂದ್ರ ಇವೆಲ್ಲಾ ಜನವಸತಿಗಳಿಂದ ದೂರವಿರಬೇಕೆಂದಾದರೆ ದಿನನಿತ್ಯದ ಜೀವನಕ್ಕೆ ತೊಂದರೆಯಾಗುತ್ತದೆ. ಕಾರುಗಳಲ್ಲಿ ಹೋಗಿ ವಾರಕ್ಕೊಮ್ಮೆ ದೊಡ್ಡ ಮಾಲುಗಳಲ್ಲಿ ಅವಶ್ಯಕ ವಸ್ತುಗಳನ್ನು ತಂದು ಮನೆಗಳಲ್ಲಿ ಸಂಗ್ರಹಿಸಿಕೊಳ್ಳಬೇಕೆಂದು ನಿರೀಕ್ಷಿಸುವುದು ತಪ್ಪು. ಮಾಲಿನ್ಯ ಉಂಟುಮಾಡುವ ಉತ್ಪಾದನಾ ಘಟಕಕ್ಕೂ, ಒಂದು ಸಾಮಾನ್ಯ ವ್ಯಾಪಾರೀ ಕೇಂದ್ರಕ್ಕೂ ವ್ಯತ್ಯಾಸವಿದೆ. ಅದನ್ನು ತಿಳಿದು ನೀತಿ ನಿರೂಪಣೆ ಮಾಡಿದರೆ ಬಹುಶಃ ಈಗಿನ ವಿರೋಧವು ಇಲ್ಲವಾಗಬಹುದು.

ಕಳೆದ ತಿಂಗಳ ಒಂದು ಅನುಭವ ರೋಚಕವಾಗಿತ್ತು, ಹರ್ಷದಾಯಕವಾಗಿತ್ತು. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ನೂರು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಒಂದು ಸಾರ್ವಜನಿಕ ಸಂಸ್ಥೆಯು ಬೆಂಗಳೂರಿನಲ್ಲಿ ಬಹುಮಾನಗಳನ್ನು ನೀಡಿ ಆದರಿಸಿತು. ವಿದ್ಯಾರ್ಥಿಗಳು ರಾಜ್ಯದ ಎಲ್ಲ ಭಾಗಗಳಿಂದ ಆಯ್ಕೆಯಾಗಿದ್ದರು. ಅವರು ಎಸ್.ಎಸ್.ಎಲ್.ಸಿ. ಮತ್ತು ಪ್ರೀ-ಯೂನಿವರ್ಸಿಟಿ ಪರೀಕ್ಷೆಗಳಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದವರು. ಯಾರೂ ಶೇಕಡ ೭೦ಕ್ಕಿಂತ ಕಡಿಮೆ ಅಂಕ ಗಳಿಸಿದವರಲ್ಲ. ಶೇಕಡ ೯೦ಕ್ಕೂ ಹೆಚ್ಚು ಅಂಕ ಪಡೆದವರೂ ಇದ್ದರು. ವಿಶೇಷವೇನೆಂದರೆ ಇವರಲ್ಲಿ ಬಹಳಷ್ಟು ಮಂದಿ ಅತ್ಯಂತ ಬಡ ಕುಟುಂಬಗಳವರು, ಕನಿಷ್ಠ ಸೌಲಭ್ಯಗಳೂ ಇಲ್ಲದೆ ವ್ಯಾಸಂಗ ಮಾಡಿದವರು. ಮುಂದಿನ ವ್ಯಾಸಂಗಕ್ಕೆ ಅನುವಾಗುವಂತೆ ಇವರಿಗೆಲ್ಲಾ ಸಂಸ್ಥೆಯು ಮೂರು ಸಾವಿರ ರೂಪಾಯಿಗಳಷ್ಟು ಧನಸಹಾಯ ನೀಡಿದ್ದು ಬಹಳ ಶ್ಲಾಘನೀಯ. ಅನುಕೂಲಸ್ಥ ಕುಟುಂಬಗಳವರು, ಶಿಕ್ಷಿತರ ಕುಟುಂಬದವರು, ಪ್ರತಿಷ್ಠಿತ ಹಿನ್ನೆಲೆಯವರು ಶೇಕಡ ೯೦ ಅಂಕ ಗಳಿಸುವುದು ಹೆಚ್ಚಲ್ಲ; ಆದರೆ ಈ ವಿದ್ಯಾರ್ಥಿಗಳು ಗಳಿಸಿರುವುದು ಅಭಿನಂದನೀಯ.

ಪ್ರತಿಭೆಯೆಲ್ಲಾ ತಮ್ಮ ಆಸ್ತಿಯೆಂದು ಭಾವಿಸುವ ವಿದ್ಯಾರ್ಥಿಗಳು, ಪೋಷಕರು ಮತ್ತು ಮೀಸಲಾತಿ ವಿರುದ್ಧ ದನಿಗೂಡಿಸುವವರು ಇದನ್ನು ಗಮನಿಸಬೇಕು. ಕನಿಷ್ಠ ಸೌಲಭ್ಯಗಳನ್ನು ನೀಡಿದರೆ ನಮ್ಮ ನಾಡಿನ ಹಿಂದುಳಿದ ಕುಟುಂಬಗಳ ವಿದ್ಯಾರ್ಥಿಗಳು ಬೇರೆ ಯಾರಿಗಾದರೂ ಸೆಡ್ಡು ಹೊಡೆಯಬಲ್ಲರು, ಸಮಾನವಾಗಿ ನಿಲ್ಲಬಲ್ಲರು. ಮೀಸಲಾತಿ ಅನಗತ್ಯವಾಗಬೇಕಾದರೆ ಮೊದಲು ನಾವು ಕನಿಷ್ಠ ಸೌಲಭ್ಯಗಳನ್ನು ಎಲ್ಲರಿಗೂ ಒದಗಿಸುವ ಜವಾಬ್ದಾರಿಯನ್ನು ಹೊರಬೇಕು. ಶೇಕಡ ೯೦ ಅಂಕಗಳನ್ನು ಇಂದೇ ಗಳಿಸಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಯು ಮೀಸಲಾತಿ ಪಟ್ಟಿಯಿಂದ ಹೊರಬಂದು ಮೀಸಲು ಸ್ಥಾನವನ್ನು ಶೇಕಡ ನಲವತ್ತೋ ಐವತ್ತೋ ಪಡೆದಿರುವವರಿಗೆ ಬಿಟ್ಟುಕೊಡಬಲ್ಲನು ಅಥವಾ ಬಿಟ್ಟುಕೊಡಬಲ್ಲಳು. ಅದು ಹಾಗೇ ಮುಂದುವರಿದು ಒಂದೆರಡು ದಶಕಗಳಲ್ಲಿ ಸುಮಾರಾಗಿ ಸಮಾನವಾಗಿರುವ ಶಿಕ್ಷಣ ವ್ಯವಸ್ಥೆ ಮತ್ತು ಅರ್ಹತೆಯ ಗಳಿಕೆ ಸಾಧ್ಯ. ಸದ್ಯದಲ್ಲಿ ಅನುಕೂಲಗಳಿಂದ ವಂಚಿತವಾಗಿರುವ ವಿಭಾಗದ ಅರ್ಹ ವಿದ್ಯಾರ್ಥಿಗಳಿಗೆ ಅಗತ್ಯವಾದ ನೆರವು ನೀಡುತ್ತಿರುವ ಸಂಸ್ಥೆಯ ಶ್ರೀ ಎಚ್. ಕೆಂಚಪ್ಪ ಮತ್ತು ಅವರ ಒಡನಾಡಿಗಳ ಕೆಲಸ ಸ್ತುತ್ಯರ್ಹವಾದದ್ದು.

ರಾಜ್ಯೋತ್ಸವ ಪ್ರಶಸ್ತಿ ವಿಜೇತರಲ್ಲಿ ಬೆಂಗಳೂರು ದುರ್ದರ್ಶನ ಕೇಂದ್ರದ ನಿರ್ದೇಶಕರೂ ಸೇರಿದ್ದಾರೆ. ರಾಜ್ಯಪಾಲರಂತಹವರಿಂದ ಹಿಡಿದು ಎಲ್ಲ ರಾಜಕೀಯ ಗಣ್ಯರಿಗೆ ಮತ್ತು ಜಡ್ಡುಗಟ್ಟಿದ ಮತಧರ್ಮದ ಪ್ರತಿಪಾದಕರಿಗೆ ವಿಶೇಷ ಪ್ರಚಾರ ನೀಡುವ ಕೃಪೆ ತೋರುವ ಶ್ರೀಯುತರಿಗೆ ಪ್ರಶಸ್ತಿ ಸಲ್ಲಬೇಕಾದ್ದೆ! ಸರ್ಕಾರಿ ಸೇವೆಯಲ್ಲಿರುವವರಿಗೆ ಪ್ರಶಸ್ತಿ ಕೊಡಬಾರದೆಂಬ ನಿಯಮವನ್ನು ಉಲ್ಲಂಘಿಸಿ ಅವರಿಗೆ ಮರ್ಯಾದೆ ತೋರಿಸಿರುವುದು ಅವರ ಘನತೆಯನ್ನು ಎತ್ತಿತೋರಿಸುತ್ತದೆ!!

ಇನ್ನೊಂದೆಡೆ, ಭಾರತೀಯ ಜನತಾ ಪಕ್ಷವು ಪಟ್ಟುಹಿಡಿದು ತನ್ನ ನೇರ ಪ್ರತಿನಿಧಿಗಳನ್ನು ಕರ್ನಾಟಕ ಲೋಕಸೇವಾ ಆಯುಕ್ತದ ಸದಸ್ಯರನ್ನಾಗಿ ನೇಮಕ ಮಾಡಿಸಿಕೊಂಡಿದೆ. ಅವರ ಪಕ್ಷದಲ್ಲಿ ಈ ಉದ್ಯಮಿ-ವ್ಯಾಪಾರಿಗಳಿಗಿಂತಲೂ ಉತ್ತಮರಾರೂ ಸಿಕ್ಕಲಿಲ್ಲವೆಂಬುದು ಶೋಚನೀಯ ದುರಂತ. ಶೈಕ್ಷಣಿಕ ಹಿನ್ನೆಲೆಯುಳ್ಳವರು ಪಕ್ಷದ ಕಣ್ಣಿಗೆ ಏಕೆ ಬೀಳಲಿಲ್ಲವೆಂಬುದು ಸ್ಪಷ್ಟವಿದೆ: ಉದ್ಯಮಿಗಳಷ್ಟು ಚತುರರಾಗಿ ವ್ಯವಹಾರ ಕುದುರಿಸಲು ಅವರು ಅಸಮರ್ಥರಿರಬೇಕು. ಇವರು ಸದಸ್ಯರಾದ ದಿನದಿಂದಲೇ ವ್ಯಾಪಾರದ ತಕರಾರು ಪ್ರಾರಂಭವಾಯಿತು. ಅಭ್ಯರ್ಥಿಗಳ ಆಯ್ಕೆಗೆ ಸಂದರ್ಶನ ಸಮಿತಿಯಲ್ಲಿ ಅವರನ್ನು ಕೂಡಿಸದಿದ್ದುದರಿಂದ ಅವರಿಗೆ ಹಾಗೂ ಅವರ ಪಕ್ಷಕ್ಕೆ ಭಾರಿ ನಷ್ಟವಾಗಿರಬೇಕು! ಆಯೋಗದ ಅಧ್ಯಕ್ಷರ ಕಾರ್ಯನಿರ್ವಹಣೆಯ ಸೂಕ್ಷ್ಮಗಳನ್ನು ತನಿಖೆ ಮಾಡಲು ಆಯೋಗವೊಂದರ ಅವಶ್ಯಕತೆ ಇರುವಾಗ ಭಾರತೀಯ ಜನತಾಪಕ್ಷದ ಪ್ರತಿನಿಧಿಗಳ ಸೇರ್ಪಡೆಯಾಗಿರುವುದು ಆಯೋಗವು ಅರ್ಹತೆಯ ಆಧಾರವನ್ನು ಸಂಪೂರ್ಣವಾಗಿ ತ್ಯಜಿಸಲು ಅನುಕೂಲ ಕಲ್ಪಿಸಿದೆ.



# ದಲಿತ ಚಳವಳಿ ಮತ್ತು ಕಾನ್ಷಿರಾಂ

**ದತ್ತಾತ್ರಯ ಇಕ್ಕಳಕಿ**

ಬಾಬಾಸಾಹೇಬ್ ಡಾ|| ಅಂಬೇಡ್ಕರ್‌ರವರು ಅಸಮಾನತೆಯ ಗೂಡಾದ ಹಿಂದೂ ಧರ್ಮವನ್ನು ತ್ಯಜಿಸಿ ಬೌದ್ಧ ಧರ್ಮ ಸ್ವೀಕರಿಸಿ ೫೦ ವರ್ಷಗಳು ಕಳೆದವು. ಈ ಹಿನ್ನೆಲೆಯಲ್ಲಿ ದೇಶದಾದ್ಯಂತ ಅಂಬೇಡ್ಕರ್ ಅಭಿಮಾನಿಗಳು ಧರ್ಮಚಕ್ರ ಪ್ರವರ್ತನದ ಸುವರ್ಣ ಮಹೋತ್ಸವ ಆಚರಿಸುತ್ತಾ ಸಾಗರೋಪಾದಿಯಲ್ಲಿ ಬೌದ್ಧಧರ್ಮಕ್ಕೆ ಮರಳುತ್ತಿದ್ದಾರೆ. ಇದೇ ಸಂದರ್ಭದಲ್ಲಿ ದಲಿತರ ಆಶಾ ಕಿರಣವಾಗಿದ್ದ ಬಿಎಸ್‌ಪಿಯ ಸಂಸ್ಥಾಪಕ ಕಾನ್ಷಿರಾಂರವರು ಪರಿನಿಬ್ಬಾಣ ಹೊಂದಿದ್ದಾರೆ. ಅಂಬೇಡ್ಕರ್ ತರುವಾಯ ದಲಿತ ಮತ್ತು ಹಿಂದುಳಿದ ವರ್ಗಗಳನ್ನು ಒಂದುಗೂಡಿಸಿ, ಈ ದೇಶ ಆಳಬೇಕೆನ್ನುವ ಕಾನ್ಷಿರಾಂರವರ ಸಂಘಟನಾ ಶಕ್ತಿ, ಕಾಂಗ್ರೆಸ್ ಸೇರಿದಂತೆ ಮನುವಾದಿ ಪಕ್ಷಗಳಲ್ಲಿ ನಡುಕ ಹುಟ್ಟಿಸಿದೆ. ಸ್ವಾತಂತ್ರ್ಯಾನಂತರದ ಬಹುಪಾಲು ವರ್ಷಗಳ ಕಾಲ ಕಾಂಗ್ರೆಸ್ ಈ ದೇಶವನ್ನಾಳಿದೆ. ಬಿಜೆಪಿ, ಜನತಾ ದಳಗಳು ಕೂಡ ಬೆರಳೆಣಿಕೆಯಷ್ಟು ವರ್ಷ ಅಧಿಕಾರದ ಗದ್ದುಗೆ ಏರಿವೆ. ಆದರೆ ದೇಶದಲ್ಲಿ ಬಡತನ, ಜಾತೀಯತೆ, ದೌರ್ಜನ್ಯ, ಅತ್ಯಾಚಾರ ಯಥೇಚ್ಛವಾಗಿ ನಡೆದು, ದಲಿತರ ಬದುಕನ್ನೆ ಇನ್ನಷ್ಟು ಯಾತನಾಮಯವಾಗಿಸಿವೆ.

ಸಂವಿಧಾನದಲ್ಲಿ ಶೋಷಿತರ ಏಳಿಗೆಗೆ ಹತ್ತು ಹಲವು ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಆದಾಗ್ಯೂ ಬಹುಸಂಖ್ಯಾತ ಜನರು ಅನ್ನ, ಅರಿವೆ ಮತ್ತು ಮಾನವೀಯ ಗೌರವಗಳಿಂದ ಗಾವುದ ದೂರವಿದ್ದಾರೆ. ಇದಕ್ಕೆ ಕಾರಣ ಯಾರು ? ಈ ಪ್ರಶ್ನೆ ಕುರಿತು ಅತ್ಯಂತ ವಾಸ್ತವಿಕ ನೆಲೆಗಟ್ಟಿನಲ್ಲಿ ಯೋಚಿಸಬೇಕಾಗಿದೆ. ಅಂಬೇಡ್ಕರ್‌ರವರು, ನಾನು ರಚಿಸಿದ ಈ ಸಂವಿಧಾನವನ್ನು ಯಥಾವತ್ ಜಾರಿಗೆ ತಂದರೆ ಕೇವಲ ೨೦ ವರ್ಷಗಳಲ್ಲಿ ಎಲ್ಲಾ ಜನರು ಸಾಮಾಜಿಕ, ಆರ್ಥಿಕ ಮತ್ತು ಬದುಕುವ ಎಲ್ಲಾ ಅವಕಾಶಗಳಿಂದ ಸಮಾನವಾಗಿ ಜೀವಿಸುತ್ತಾರೆನ್ನುವ ಆಶಯ ಹೊಂದಿದ್ದರು. ಆದರೆ ನಮ್ಮ ಸಂವಿಧಾನಕ್ಕೆ ಆರು ದಶಕಗಳು ಮುಗಿಯುತ್ತಾ ಬಂದಿವೆ. ಈ ದೇಶದಲ್ಲಿ ದಲಿತರು ಮಾನವಾಗಿ ಬದುಕುವ ಮಾತು ಹಾಗಿರಲಿ, ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಇಂದಿಗೂ ದಲಿತರನ್ನು ಅಮಾನುಷವಾಗಿ ನಡೆಸಿಕೊಳ್ಳಲಾಗುತ್ತಿದೆ. ಸಾವಿರಾರು ಜಾತಿ ಮತ್ತು ಪಂಗಡಗಳಾಗಿ ಚದುರಿ ಹೋಗಿರುವ ದಲಿತ ವರ್ಗಗಳವರು ಇಂದು ಕವಲು ದಾರಿಯಲ್ಲಿದ್ದಾರೆ. ಅವರ ಬದುಕಿಗೆ ರಕ್ಷಣೆ, ಗೌರವ ಕಲ್ಪಿಸಿ ಕೊಡುವವರು ಯಾರು ? ಇಲ್ಲಿಯವರೆಗೆ ಆಡಳಿತದ ಚುಕ್ಕಾಣಿ ಹಿಡಿದ ಸರ್ಕಾರಗಳು ಸಂವಿಧಾನ ಜಾರಿ ಮಾಡಲು ಮೀನಮೇಷ ಎಣಿಸಿ ದಲಿತರಿಗೆ ಮೋಸ ಮಾಡಿವೆ. ಅಂತಹ ಸರ್ಕಾರಗಳನ್ನು ಸಂವಿಧಾನ ವಿರೋಧಿ ಎನ್ನುವುದರಲ್ಲಿ ಸತ್ಯಾಂಶವಿದೆ. ಇದಕ್ಕೆ ಲಕ್ಷಾಂತರ ಬ್ಯಾಕ್‌ಲಾಗ್ ಹುದ್ದೆಗಳು ಖಾಲಿ ಬಿದ್ದಿರುವುದು ಒಂದು ಉದಾಹರಣೆ ಮಾತ್ರ.

ಬಾಬಾಸಾಹೇಬ್ ಡಾ|| ಅಂಬೇಡ್ಕರ್‌ರವರು ತಮ್ಮ ಸರ್ವಸ್ವವನ್ನು ತೇದು ಸಂವಿಧಾನ ರಚಿಸಿದರು. ಸಂವಿಧಾನ ರಚಿಸುವ ಸಂದರ್ಭದಲ್ಲಿ ಈ ಮನುವಾದಿಗಳು ಅಂಬೇಡ್ಕರ್‌ರೊಂದಿಗೆ ಇನ್ನಿಲ್ಲದ ನಾಟಕವಾಡಿ ಹಿಂಸೆ ಕೊಟ್ಟರು. ಒಂದರ್ಥದಲ್ಲಿ ಮುಳ್ಳಿನ ಹಾದಿಯನ್ನೇ ಕ್ರಮಿಸಿ ಅಂಬೇಡ್ಕರ್‌ರವರು ಸಂವಿಧಾನ ರಚಿಸುವ ಜವಾಬ್ದಾರಿ ನಿರ್ವಹಿಸಿದರು. ಹೀಗಿರುವಾಗ, ಅಂಬೇಡ್ಕರ್ 'ವಾದ' ಇರುವುದೇ ಸಂವಿಧಾನದಲ್ಲಿ. ಆದರೆ ಸಂವಿಧಾನ ಜಾರಿ ಮಾಡುವವರು ಯಾರು ? ಇದು ದಲಿತ ಲೋಕದ ಮುಂದಿರುವ ಯಕ್ಷ ಪ್ರಶ್ನೆ. ಅನೇಕ ವೈರುಧ್ಯಗಳನ್ನು ತಮ್ಮ ಜೀವಿತಾವಧಿಯಲ್ಲಿಯೇ ಗಮನಿಸಿದ್ದ ಅಂಬೇಡ್ಕರ್‌ರವರು, ''ಶತಮಾನಗಳ ಗುಲಾಮಗಿರಿಗೆ ಸಿಕ್ಕು ಬೆಂದು ಹೋಗಿರುವ ಶೋಷಿತ ವರ್ಗಗಳು ಒಂದಾಗಿ, ಜಾತಿ ವ್ಯವಸ್ಥೆಯನ್ನು ಧ್ವಂಸ ಮಾಡುವುದರ ಜೊತೆಗೆ ಈ ದೇಶ ಆಳುವುದನ್ನು ಕಣ್ಣಾರೆ ಕಾಣಬೇಕೆಂಬುವುದೇ ನನ್ನ ಜೀವನದ ಪರಮಗುರಿ'' ಎಂದು ಹೇಳಿದ್ದರು. ಈ ಆಸೆ ಈಡೇರಿಸುವ ಜವಾಬ್ದಾರಿಯನ್ನು ದಲಿತ ವಿದ್ಯಾವಂತ ನೌಕರ ವರ್ಗದವರ ಮೇಲೆ ಹೊರಿಸಿದ್ದರು. ಇಂದು ಅನೇಕ ದಲಿತ ನೌಕರರು ಮತ್ತು ವಿದ್ಯಾವಂತರು ತಮ್ಮ ಕುಟುಂಬದ ಸಂರಕ್ಷಣೆ ಅಥವಾ ವಿಲಾಸಿ ಜೀವನ ಕಳೆಯುವುದರಲ್ಲಿಯೇ ತಲ್ಲೀನರಾಗಿದ್ದಾರೆ. ಅಂಬೇಡ್ಕರ್ ಹೆಚ್ಚು ನೆನಪಾಗುವುದು ಏಪ್ರಿಲ್ ೧೪ ಮತ್ತು ಡಿಸೆಂಬರ್ ೬ರಂದು ಮಾತ್ರ. ಅಂದು ಅಂಬೇಡ್ಕರ್ ಅಭಿಮಾನಿಗಳು ಆಳೆತ್ತರದ ಕಟೌಟ್‌ಗಳನ್ನು ನಿರ್ಮಿಸಿ ಕಿವಿಗಡಚಿಕ್ಕುವ ಸಂಗೀತಗಳ ಮಧ್ಯೆ ಕುಣಿದು ಕುಪ್ಪಳಿಸುವುದರಲ್ಲಿಯೇ ಮಗ್ನರಾಗಿರುತ್ತಾರೆ. ಇಂತಹ ಅಂಧಾಭಿಮಾನ ಕೂಡ ದಲಿತರ ವೈಚಾರಿಕ ಅಧಃಪತನವನ್ನು ಎತ್ತಿ ತೋರಿಸುತ್ತದೆ.

ಅಂಬೇಡ್ಕರ್ ನಮ್ಮ ಮಾರ್ಗದಾತ, ವಿಮೋಚಕ ಎನ್ನುವುದರಲ್ಲಿ ಎರಡು ಮಾತಿಲ್ಲ. ಅವರು ಅಗಾಧ ಪಾಂಡಿತ್ಯ ಮತ್ತು ಚಾರಿತ್ರ್ಯಗಳಿಂದ ಅನೇಕ ಜನಾಂಗಗಳ ಬದುಕುವ ದಿಕ್ಕನ್ನೇ ಬದಲಿಸಿದವರು. ಸಾತ್ವಿಕ ಸಿಟ್ಟು ಮತ್ತು ಅದಮ್ಯವಾದ ಮಾನವ ಪ್ರೇಮ ತುಂಬಿಕೊಂಡಿದ್ದ ಅಂಬೇಡ್ಕರ್, ಅಹಿಂಸೆಯಿಂದಲೇ ಎಲ್ಲವನ್ನೂ ಸಾಧಿಸಬಲ್ಲ ಮಹಾನ್ ಕ್ರಾಂತಿಕಾರಿಯಾಗಿದ್ದರು. ಅಂಬೇಡ್ಕರ್ ಮತ್ತು ಗಾಂಧಿ ನಡುವೆ ನಡೆದ ಪೂನಾ ಒಪ್ಪಂದದಲ್ಲಿ, ಗಾಂಧಿ ಶೋಷಿತ ವರ್ಗಗಳಿಗೆ ಐತಿಹಾಸಿಕ ವಂಚನೆ ಮಾಡಿದರು. ಈಗಿರುವ ಜಂಟಿ ಮೀಸಲಾತಿ ಪದ್ಧತಿಯ ಅವಘಡಗಳನ್ನು ಮೊದಲೇ ಊಹಿಸಿದ್ದ ಅಂಬೇಡ್ಕರ್‌ರವರು, ಆ ಕಾರಣಕ್ಕಾಗಿಯೇ ಪ್ರತ್ಯೇಕ ಮೀಸಲಾತಿ ಬೇಕೆಂದು ಪಟ್ಟುಹಿಡಿದಿದ್ದರು. ವಿದೇಶದಿಂದ ಅಂಬೇಡ್ಕರ್ ತಂದಿದ್ದ ರಸಭರಿತ ಹಣ್ಣನ್ನು ಗಾಂಧಿ ಕಸಿದುಕೊಂಡು ತನ್ನ ಜನರಿಗೆ ಹಿಂಡಿ ಹಿಂಡಿ ಅದರ ರಸವನ್ನು ನೀಡಿ, ಶೋಷಿತ ವರ್ಗಗಳ ಮೇಲೆ ಅದರ ಸಿಪ್ಪೆಯನ್ನು ಎಸೆದರು. ಈ ಮಾತನ್ನು ಅಂಬೇಡ್ಕರ್ ಅತ್ಯಂತ ನೋವಿನಿಂದಲೇ ಹೇಳಿದ್ದರು. ಕೆಲವೇ ಸೀಮಿತ ವರ್ಗಗಳಿಗೆ ಮಾತ್ರ ಮೀಸಲಾಗಿದ್ದ ಓಟಿನ ಅಧಿಕಾರವನ್ನು, ಶೋಷಿತ ವರ್ಗಗಳಿಗೂ ದೊರಕಿಸಿಕೊಟ್ಟರು. ದಲಿತರಿಗೆ ಓಟಿನ ಹಕ್ಕು ಒದಗಿಸುವುದು ಅಂಬೇಡ್ಕರ್ ಪಾಲಿಗೆ ಜೀವನ್ಮರಣದ ಪ್ರಶ್ನೆಯಾಗಿತ್ತು. ಒಬ್ಬ ವ್ಯಕ್ತಿಗೆ ಒಂದು ಓಟು, ಒಂದು ಓಟಿಗೆ ಒಂದೇ ಮೌಲ್ಯ ಇರುವುದರಿಂದ ದೇಶದ ಅಭಿವೃದ್ಧಿಯಲ್ಲಿ ಎಲ್ಲಾ



ಪ್ರಜೆಗಳದ್ದೂ ಸಮಪಾಲು ಭಾಗವಾಗಿರುತ್ತದೆ. ಓಟು ಒಬ್ಬ ಮನುಷ್ಯನ ಜೀವನ ಮೌಲ್ಯ ಅಥವಾ ಆತನ ಬದುಕುವ ವಿಧಾನ, ಈ ಓಟಿನ ಮೂಲಕವೇ ರಾಜ್ಯಾಧಿಕಾರವೆಂಬ ಎಲ್ಲಾ ಅಭಿವೃದ್ಧಿಗಳ ಕೀಲಿಕೈ ಪಡೆಯಬೇಕೆಂದು ಅಂಬೇಡ್ಕರ್ ಬಯಸಿದ್ದರು. ಅಧಿಕಾರ ಮಾತ್ರ ಸಕಲ ಸಮಸ್ಯೆಗಳಿಗೆ ಪರಿಹಾರ ಒದಗಿಸಬಲ್ಲದು ಎಂದು ಅವರು ಬಲವಾಗಿ ನಂಬಿದ್ದರು. ಆದರೆ ದೇಶದಾದ್ಯಂತ ನಡೆಯುತ್ತಿರುವ ದಲಿತ ಮತ್ತು ಪ್ರಗತಿಪರ ಚಳವಳಿಗಳು ಅಂಬೇಡ್ಕರ್ ವಿಚಾರಗಳನ್ನು ಸರಿಯಾಗಿ ಗ್ರಹಿಸದೆ ಬೀದಿ ಹೋರಾಟಗಳಲ್ಲಿಯೇ ನಿರತವಾಗಿವೆ. ಒಂದೊಮ್ಮೆ ರಾಜಕಾರಣದಲ್ಲೇ ಬಿರುಗಾಳಿ ಎಬ್ಬಿಸಬಹುದಾದಷ್ಟು ಪ್ರಬಲ ಶಕ್ತಿ ಹೊಂದಿದ್ದ ದಲಿತ ಪ್ಯಾಂಥರ್ಸ್, ದಲಿತ ಮಹಾಸಭಾ ಮತ್ತು ದಲಿತ ಸಂಘರ್ಷ ಸಮಿತಿಯಂತಹ ಸಂಘಟನೆಗಳು ಇಂದು ಎಣಿಸಲಾರದಷ್ಟು ಭಾಗಗಳಾಗಿವೆ. ಸ್ವಾರ್ಥನಾಯಕರ ಪ್ರಾಬಲ್ಯ ಹೆಚ್ಚಾಗಿ ಚಮಚಾ ರಾಜಕಾರಣವೇ ಎಲ್ಲೆಡೆ ತಾಂಡವವಾಡುತ್ತಿದೆ. ಅಂಬೇಡ್ಕರ್ ವಿಚಾರಗಳಿಗೆ ಬದಲಾಗಿ ಅವರ ಆರಾಧನಾ ಮನೋಭಾವವನ್ನೇ ಮೈಗೂಡಿಸಿಕೊಳ್ಳುತ್ತಿರುವುದು ದಲಿತರ ದುರಂತವೇ ಸರಿ.

ಬೌದ್ಧಿಕ ದಾರಿದ್ರ್ಯಕ್ಕೆ ಒಳಗಾದ ದಲಿತ ಸಮುದಾಯಗಳಿಗೆ ಅಂಬೇಡ್ಕರ್ ತೋರಿದ ನಿರ್ದಿಷ್ಟ ಮಾರ್ಗ ತೋರಿಸಬೇಕಾಗಿದ್ದ ವಿಚಾರವಂತರು, ನಾಯಕರುಗಳು ಆವೇಶಭರಿತ ಗೊಂದಲದ ವಿಚಾರಗಳನ್ನು ಹೇಳುವುದರ ಮೂಲಕ ಅಂಬೇಡ್ಕರ್ ರಥಕ್ಕೆ ಅಡ್ಡಗಾಲಾಗಿ ನಿಂತಿದ್ದಾರೆ. ಆಯಾ ಸಮಾಜದ ಎಲ್ಲಾ ಆಗುಹೋಗುಗಳು ಆಯಾ ಸಮಾಜದ ಚಿಂತಕರ, ನಾಯಕರ ಅಭಿಪ್ರಾಯಗಳ ಮೇಲೆ ಅವಲಂಬಿತವಾಗಿರುತ್ತವೆ. ಹೀಗಿರುವಾಗ ಭಾರತದ ಜನಸಂಖ್ಯೆಯ ಶೇ. ೮೫ರಷ್ಟು ಭಾಗವಾಗಿರುವ ಬಹುಜನ ಸಮುದಾಯಗಳನ್ನು ಇಷ್ಟು ದೀರ್ಘಕಾಲ ವಂಚನೆ ಮಾಡುತ್ತ ಬಂದಿರುವ ಮಾಯೆ ಯಾವುದು ? ನಮ್ಮನ್ನಾಳಿದ ಸರ್ಕಾರಗಳೋ ಅಥವಾ ನಮ್ಮನ್ನು ಪ್ರತಿನಿಧಿಸುವ ನಾಯಕರೋ ಎನ್ನುವುದನ್ನು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ. ಇತ್ತೀಚಿಗೆ ಆತ್ಮಾವಲೋಕನ ಎನ್ನುವ ಪದವೇ ಸವಕಲು ನಾಣ್ಯವಾಗಿದೆ. ಆತ್ಮಾವಲೋಕನ ಎಂದರೆ, ಹಿಂದೆ ಆಗಿರುವ ಪ್ರಮಾದಗಳನ್ನು ಮುಂದೆ ಆಗದಂತೆ ನಮ್ಮ ವಿಚಾರಗಳನ್ನು ಒರೆಗಲ್ಲಿಗೆ ಹಚ್ಚಿ ಎಚ್ಚರದಿಂದ ನಡೆಯುವುದು. ಆದರೆ ನಮ್ಮ ನಾಯಕರುಗಳು ವೇದಿಕೆಯ ಮೇಲೆ ಆತ್ಮಾವಲೋಕನದ ಬಗ್ಗೆ ಘಂಟಾಘೋಷವಾಗಿ ಮಾತಾಡುತ್ತ ಅಂತರಂಗದಲ್ಲಿ ಮುಂದಿನ ಹುನ್ನಾರಗಳಿಗೆ ತಂತ್ರ ರೂಪಿಸುತ್ತಿರುತ್ತಾರೆ. ಸಮಾರಂಭಗಳಲ್ಲಿ ಅಂಬೇಡ್ಕರ್ ವಿಚಾರ ಎತ್ತಿ ಹಿಡಿಯಲು ಹೇಳುವವರೇ ಚುನಾವಣೆಯಲ್ಲಿ ಆ ವಿಚಾರ ಹೊಸಕಿಹಾಕುವವರ ಪರ ನಿಲ್ಲುತ್ತಾರೆ. ಮೀಸಲಾತಿ ಪ್ರಯೋಜನ ಪಡೆದು ಕೆಂಪು ದೀಪದ ಕಾರಿನಲ್ಲಿ ಓಡಾಡುವ ರಾಜಕಾರಣಿಗಳ ಮತ್ತು ದಲಿತರ ನಡುವೆ ಸಂಬಂಧವೇ ಇಲ್ಲವೆನ್ನುವಷ್ಟು ಅಂತರ ಸೃಷ್ಟಿಯಾಗಿದೆ. ಮನುವಾದಿಗಳ ಕುತಂತ್ರಕ್ಕೆ ಬಲಿಯಾದ ನಾಯಕರು, ತಮ್ಮ ತಮ್ಮ ಜಾತಿ ಸಂಕೋಲೆಗಳಲ್ಲಿಯೇ ಬಂಧಿಯಾಗಿಸಲು ಹವಣಿಸುತ್ತಿದ್ದಾರೆ. ಈ ಧರ್ಮ ಸೂಕ್ಷ್ಮ ನಾವು ಅರಿಯದೇಹೋದರೆ, ನಮ್ಮ ವಿನಾಶದ ಹಾದಿ ದೂರವಿಲ್ಲವೆಂದೇ ಹೇಳಬಹುದು. ದೊಡ್ಡ ಮೀನು ಸಣ್ಣ ಮೀನನ್ನು ನುಂಗುವ ಹಾಗೆ, ದಲಿತರ ಹೆಸರಿನ ಮೇಲೆ ಹುಟ್ಟಿರುವ ಹಲವು ಸಂಘಟನೆಗಳು ದಲಿತರನ್ನೇ ನುಂಗಿ ಹಾಕುತ್ತಿವೆ. ಆ ಕಾರಣಕ್ಕಾಗಿಯೇ ಶೋಷಿತರಿಗೆ ಅನೇಕ ನಾಯಕರು ವಿಲನ್‌ಗಳಾಗಿ ಕಾಣುತ್ತಿದ್ದಾರೆ.

ಹಲವಾರು ದಶಕಗಳ ಕಾಲ ಅಂಬೇಡ್ಕರ್ ವಿಚಾರಗಳು, ಮೇಲೆ ಶಾಂತವಾಗಿ ಕಂಡರೂ ಒಳಗೆ ಲಾವಾರಸದಂತೆ ಕುದಿಯುತ್ತಿದ್ದವು. ಮುಳುಗುವ ಮನುಷ್ಯ ಹುಲ್ಲು ಕಡ್ಡಿಯ ಆಸರೆಗಾಗಿ ಅಂಗಲಾಚುವಂತೆ ಬಿಎಸ್‌ಪಿ ಸಂಸ್ಥಾಪಕ ಕಾನ್ಷಿರಾಂ ಶೋಷಿತ ವರ್ಗಗಳ ಪಾಲಿಗೆ ಆಶಾ ಕಿರಣವಾಗಿ ಕಂಡರೆ, ಇದರಲ್ಲಿ ಆಶ್ಚರ್ಯವೇನಿಲ್ಲ. ಅಂಬೇಡ್ಕರ್ ತೋರಿದ ಹಾದಿಯಲ್ಲಿ ಪ್ರಾಮಾಣಿಕವಾಗಿ ನಡೆದ ಮೊದಲ ಯಾತ್ರಿಕ ಕಾನ್ಷಿರಾಂ.

ಬ್ರಾಹ್ಮಣಶಾಹಿಗಳ ತವರೂರಾದ ಉತ್ತರ ಪ್ರದೇಶದಲ್ಲಿ ಒಬ್ಬ ದಲಿತ ಮಹಿಳೆ ಮೂರು ಬಾರಿ ಮುಖ್ಯಮಂತ್ರಿಯಾಗುವಷ್ಟರ ಮಟ್ಟಿಗೆ ಒಂದು ಬಲಾಢ್ಯ ರಾಜಕೀಯ ವೇದಿಕೆ ನಿರ್ಮಿಸಿದ ಕೀರ್ತಿ ಕಾನ್ಷಿರಾಂರವರಿಗೆ ಸಲ್ಲುತ್ತದೆ. ಆಯಾ ಸಾಂದರ್ಭಿಕ ರಾಜಕೀಯ ತೀರ್ಮಾನಗಳ ಬಗ್ಗೆ ಭಿನ್ನಾಭಿಪ್ರಾಯಗಳೇನೆ ಇರಲಿ, ನಲ್ವತ್ತು ವರ್ಷಗಳ ಕಾಲ, ಕಾಲಿಗೆ ಚಕ್ರ ಕಟ್ಟಿಕೊಂಡು ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತ ಸಮುದಾಯಗಳನ್ನು ಸಂಘಟಿಸಿ, ದೇಶದಾದ್ಯಂತ ತಿರುಗಿ ಬಿಎಸ್‌ಪಿ ಕಟ್ಟಿದ ರೀತಿ ಇದೆಯಲ್ಲ, ಅದು ಯಾರನ್ನಾದರೂ ಬೆರಗುಗೊಳಿಸುತ್ತದೆ. ಅವರಲ್ಲಿದ್ದ ಬಂಡವಾಳ ಒಂದೇ, ಅದು ಅಂಬೇಡ್ಕರ್‌ವಾದ ಮಾತ್ರ. ದೇಶದ ಎಲ್ಲಾ ಶೋಷಿತ ಸಮುದಾಯಗಳಲ್ಲಿ ನಾವು ಯಾರಿಗಿಂತಲೂ ಕಡಿಮೆ ಇರದೆ, ನಮ್ಮ ಓಟು ನಾವು ಹಾಕಿಕೊಳ್ಳುವುದರ ಮೂಲಕ ದೇಶ ಆಳುವುದು ಸಾಧ್ಯ ಎನ್ನುವ ಆತ್ಮಬಲ ಹೆಚ್ಚಿಸಿದವರೇ ಕಾನ್ಷಿರಾಂ. ಅಂಬೇಡ್ಕರ್‌ರವರ ಆಶಯಗಳಿಗೆ ಒಂದು ಚಾರಿತ್ರಿಕ ಗೌರವ ಒದಗಿಸಿಕೊಟ್ಟವರು ಕಾನ್ಷಿರಾಂ ಎಂಬುದನ್ನು ಅವರ ಶತ್ರುಗಳೂ ಒಪ್ಪಿಕೊಳ್ಳುತ್ತಾರೆ.

ಕಾನ್ಷಿರಾಂ ಅವರದು ಸಂತತನದ ಆದರ್ಶ ಹೊಂದಿರುವ ಪರಿಶುದ್ಧ ರಾಜಕಾರಣವಾಗಿತ್ತು. ಈ ದೇಶಕ್ಕೆ ಸಮಸ್ಯೆಗಳಿರುವುದೇ ಎರಡು : ಜಾತೀಯತೆ ಮತ್ತು ಬಡತನ. ಇವುಗಳ ನಿರ್ಮೂಲನೆ ಮಾಡುವುದೆಂದರೆ ಯಥಾವತ್ ಸಂವಿಧಾನ ಜಾರಿ ಮಾಡುವುದು. ಅಂದಾಗ ಮಾತ್ರ ಅಂಬೇಡ್ಕರ್



ಕಂಡ ಪ್ರಬುದ್ಧ ಭಾರತದ ನಿರ್ಮಾಣ ಸಾಧ್ಯ ಎಂದು ಹೇಳುತ್ತಿದ್ದರು. ಆದ್ದರಿಂದಲೇ ಕಾನ್ಷಿರಾಂ ಅವರಲ್ಲಿ ಶೋಷಿತ ವರ್ಗಗಳು ಅಂಬೇಡ್ಕರ್ ಅವರನ್ನು ಕಾಣಲು ಬಯಸಿದ್ದರು. ಆ ಕಾರಣಕ್ಕಾಗಿಯೇ ಕಾನ್ಷಿರಾಂ ಶೋಷಿತರಿಗೆ ಆಪ್ಯಾಯಮಾನವಾಗಿ ಕಾಣುತ್ತಾರೆ; ಬಹುಜನ ಸಮಾಜಪಕ್ಷ ಒಂದು ರಾಜಕೀಯ ಪಕ್ಷವಾಗಿ ಕಾಣಿಸದೆ, ಸಾಮಾಜಿಕ ಪರಿವರ್ತನಾ ಆಂದೋಲನವಾಗಿ ಗೋಚರಿಸುತ್ತದೆ.

ಧಮ್ಮಚಕ್ರ ಪ್ರವರ್ತನದ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಆರು ಕೋಟಿ ಜನರೊಂದಿಗೆ ಬೌದ್ಧಧರ್ಮ ಸ್ವೀಕರಿಸುವುದು ಕಾನ್ಷಿರಾಂರವರ ಸಂಕಲ್ಪವಾಗಿತ್ತು. ಅವರ ಆಸೆಗೆ ಆರೋಗ್ಯ ಸಹಕರಿಸಲಿಲ್ಲ. ಮೂರು ವರ್ಷಗಳ ಕಾಲ ಸಾವನ್ನೂ ದುಡಿಸಿಕೊಂಡು ಬದುಕಿದವರು ಕಾನ್ಷಿರಾಂ. ಯಾವುದೇ ಆಡಂಬರಗಳಿಲ್ಲದ ಅವರ ಸರಳ ಜೀವನ, ಒಂದು ಪೆನ್ನಿನ ಮೂಲಕ ಜಾತಿ ವ್ಯವಸ್ಥೆಯನ್ನು ವಿವರಿಸುವ ವಿಧಾನ ಎಲ್ಲವೂ ಅನುಕರಣೀಯವಾದಂಥವುಗಳು.

ಮಹಾಮುತ್ಸದ್ದಿಯಾಗಿದ್ದ ಕಾನ್ಷಿರಾಂ ಇಲ್ಲದಿರುವಿಕೆ, ಲಕ್ಷಾಂತರ ಅಂಬೇಡ್ಕರ್ ಅಭಿಮಾನಿಗಳಿಗೆ ಭರಿಸಲಾಗದ ದುಃಖ ತಂದಿದೆ. ಈ ಸಂದರ್ಭದಲ್ಲಿ ಅಂಬೇಡ್ಕರ್ ರಥ ಮುನ್ನಡೆಸುವ ದಿಶೆಯಲ್ಲಿ, ಒಂದೇ ಪಕ್ಷದ ವೇದಿಕೆಯಡಿ ಎಲ್ಲಾ ಬಹುಜನ ಸಮುದಾಯಗಳು ಒಂದುಗೂಡುವುದು ಇಂದಿನ ಅವಶ್ಯಕತೆಯಾಗಿದೆ. ಈ ನಿಟ್ಟಿನಲ್ಲಿ ಎಲ್ಲಿ ಎಡವಿದ್ದೇವೆ ಎನ್ನುವುದನ್ನು ವಿದ್ಯಾವಂತ ನೌಕರರು, ವಿಚಾರವಂತರು ಪ್ರಾಮಾಣಿಕವಾಗಿ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

ಮೊನ್ನೆ ಕಲ್ಬುರ್ಗಿಯಲ್ಲೊಂದು ಚಿಕ್ಕ ಸಮಾರಂಭ ಏರ್ಪಡಿಸಿ, ಸಮಾರಂಭಕ್ಕೆ ಮುಖ್ಯ ಅತಿಥಿಗಳೊಬ್ಬರನ್ನು ಆಹ್ವಾನಿಸಿದ್ದೆವು. ಸಮಾರಂಭದಲ್ಲಿ ಕಡಿಮೆ ಜನ ಸೇರಿರುತ್ತಾರೆ, ತಾವು ಬೇಸರ ಮಾಡಿಕೊಳ್ಳದೆ ದೀರ್ಘವಾಗಿ ಮಾತಾಡಬೇಕೆಂದಾಗ, ''ಜನ ಕಡಿಮೆ ಸೇರಿರಬಹುದು; ಪ್ರಶ್ನೆ ಜನರದಲ್ಲ, ಸಮಾರಂಭಕ್ಕೆ ಬಂದವರು, ಬರದೇ ಇರುವವರು ಯಾವತ್ತೂ ನಮ್ಮೊಂದಿಗಿದ್ದಾರೆ. ಬದಲಾಗಬೇಕಾಗಿರುವುದು ಜನರಲ್ಲ, ನಾಯಕರು, ವಿಚಾರವಂತರೆಂದು ಹೇಳಿಕೊಂಡು ತಿರುಗುವ ನಾವು ಬದಲಾಗಬೇಕಾಗಿದೆ, ಸಮಾಜಕ್ಕೆ ಮೋಸ ಆಗುತ್ತಿರುವುದು ನಮ್ಮಿಂದಲೇ'' ಎಂದು ಹೇಳಿದರು. ಯಾಕೋ ಗೊತ್ತಿಲ್ಲ, ಆ ಮಾತು ಇಂದಿಗೂ ನನ್ನನ್ನು ಕೊರೆಯುತ್ತಲೇ ಇದೆ.

**ದತ್ತಾತ್ರಯ ಇಕ್ಕಳಕಿ**
ನಂ. ೧೨/೧, 'ಅಮ್ರಪಾಲಿ', ನ್ಯೂ ಘಾಟಗೆ ಲೇ ಔಟ್
ಕೇಂದ್ರ ಬಸ್ ನಿಲ್ದಾಣ ಹಿಂದುಗಡೆ, ಗುಲಬರ್ಗಾ - ೫೮೫ ೧೦೩

# ಸುವರ್ಣ ಕರ್ನಾಟಕದ ಹೆಬ್ಬಾಗಿಲಲ್ಲಿ ಕನ್ನಡಿಗ

ಬಸವರಾಜ ಹೂಗಾರ



ನಾವೀಗ ಸುವರ್ಣ ಕರ್ನಾಟಕದ ಸಂದರ್ಭದಲ್ಲಿದ್ದೇವೆ. ಕರ್ನಾಟಕ ರಾಜ್ಯ ನಿರ್ಮಾಣವಾಗಿ ೫೦ ವರ್ಷಗಳು ಕಳೆದಿವೆ. ನಾವು ನಡೆದು ಬಂದ ದಾರಿಯಲ್ಲಿ ಬೇಕಾದಷ್ಟು ಹೂಗಳು ಅರಳಿವೆ. (ಸಾಧನೆ ಖಂಡಿತ ಸಂತೃಪ್ತಿದಾಯಕವಾಗಿಲ್ಲ ಎನ್ನುವ ಕೊರಗೂ ಕೂಡ ಇದೆ. ಇದಕ್ಕೆ ಹಲವಾರು ಕಾರಣಗಳೂ ಉಂಟು.) ಇಂಥ ಸಂದರ್ಭವನ್ನೇ ಗಮನದಲ್ಲಿಟ್ಟುಕೊಂಡು ಸರಕಾರ ಸುವರ್ಣ ಕರ್ನಾಟಕ ವರ್ಷಾಚರಣೆ ಮಾಡುತ್ತಿದೆ. ಅದರಲ್ಲಿ ಜನತೆ ಪಾಲ್ಗೊಳ್ಳುತ್ತದೆ. ಇದು ಒಂದು ನಿಟ್ಟಿನ ವಿಚಾರ.

ಇವತ್ತು ಬೆಳಗಾವಿ ಸಮಸ್ಯೆ ತುಂಬ ಗಂಭೀರ ರೂಪ ತಾಳುತ್ತಿದೆ. ಭಾಷೆ ಭಾವನಾವಲಯಕ್ಕೆ ಸೇರಿದ್ದು. ಹೀಗಾಗಿ ಎಲ್ಲಾ ದಾಳಗಳೂ ಮುಗಿದ ಮೇಲೆ ರಾಜಕಾರಣದಲ್ಲಿ ಭಾಷೆಯೂ ಒಂದು ದಾಳವಾಗುತ್ತದೆ ಎನ್ನುವುದನ್ನು ನಾವು ಮರೆಯುವ ಹಾಗಿಲ್ಲ. ಬೆಳಗಾವಿ ತಾಲ್ಲೂಕಿನ ಗಡಿಯಲ್ಲಿ 'ಯಳ್ಳೂರು' ಎಂಬ ಗ್ರಾಮವಿದೆ. ಅಲ್ಲಿಯ ಜನ ಊರಲ್ಲಿ ಒಂದು ಸಿಮೆಂಟಿನ ಫಲಕ ನಿಲ್ಲಿಸಿದ್ದಾರೆ. ಆ ಫಲಕದ ಮೇಲೆ 'ಮಹಾರಾಷ್ಟ್ರ ರಾಜ್ಯ ಯಳ್ಳೂರು' ಎಂಬ ಬರಹವಿದೆ. ಅದು ಸಂಪೂರ್ಣವಾಗಿ ಕರ್ನಾಟಕದ ಕಂದಾಯ ವಿಭಾಗಕ್ಕೆ ಸೇರಿರುವ ಗ್ರಾಮ. ಜಿಲ್ಲಾಡಳಿತ ಎಷ್ಟು ಪ್ರಯತ್ನಿಸಿದರೂ ಆ ನಾಮ ಫಲಕವನ್ನು ಬದಲಾವಣೆ ಮಾಡಲು ಸಾಧ್ಯವಾಗಿಲ್ಲ.

ತುಂಬ ಗಂಭೀರವಾದ ಸಮಸ್ಯೆ ಎಂದರೆ ಕರ್ನಾಟಕ-ಮಹಾರಾಷ್ಟ್ರ ಗಡಿಯಲ್ಲಿರುವ ೩೨ ಹಳ್ಳಿಗಳು ನಮ್ಮನ್ನು ಮಹಾರಾಷ್ಟ್ರ ರಾಜ್ಯಕ್ಕೆ ಸೇರಿಸಿ

> ನಾವು ಎದುರಿಸಬೇಕಾದ ನಿಜವಾದ ಶತ್ರು ಜಾಗತೀಕರಣ. 'ನಮ್ಮ ಎಲ್ಲಾ ಚರ್ಚೆಗಳು ಕೊನೆಗೆ ಮುಟ್ಟುವುದು ಜಾಗತೀಕರಣದಲ್ಲಿಯೇ' ಎಂದು ಅಮರ್ತ್ಯ ಸೇನ್ ಹೇಳುತ್ತಾರೆ. ಒಂದು ಭಾಷೆಯ ಅಸ್ತಿತ್ವದ ಗೊಂದಲದ ಮೇಲೆಯೂ ಜಾಗತೀಕರಣದ ಕರಿ ನೆರಳಿದೆ. ಒಂದು ಸಮಸ್ಯೆಯ ಮೂಲಕ್ಕೆ ಹೋಗಿ ಅದನ್ನು ಎದುರಿಸುವ ಛಾತಿ ನಮ್ಮಲ್ಲಿ ಉಳಿದಿಲ್ಲ. ಬಗೆಹರಿಯದಂತಹ ಸಮಸ್ಯೆಗಳನ್ನು ದಾಟಿ ನಾವು ತುಂಬ ದೂರ ಬಂದಿದ್ದೇವೆ. ಮರಳಿ ಹೋಗುವುದು ಸಾಧ್ಯವಿಲ್ಲ. ಅದಕ್ಕಾಗಿ ತೇಪೆ ಹಚ್ಚುವ ಕೆಲಸ ಮಾಡುತ್ತಾ ದಿನ ದೂಡುತ್ತಿದ್ದೇವೆ.

ಎಂದು ಮನವಿ ಮಾಡಿಕೊಂಡ ವರದಿ ಮೊನ್ನೆ ಪತ್ರಿಕೆಯಲ್ಲಿ ವರದಿಯಾಯಿತು. ಇಲ್ಲಿ ನಾವು ಗಮನಿಸಬೇಕಾದದ್ದು ಗಡಿ ಸಮಸ್ಯೆ ಕೇವಲ ಭಾಷಾ ಸಮಸ್ಯೆ ಅಲ್ಲ. ಭಾಷೆಯನ್ನು ಮೀರಿ ಅಲ್ಲಿ ಹಲವಾರು ಬಿಕ್ಕಟ್ಟಿನ ಸಂದರ್ಭಗಳಿವೆ. ಒಂದು ಪ್ರದೇಶದ ಜನ ಎದುರಿಸುವ ಸಮಸ್ಯೆಯನ್ನು ನಾವೇ ಸ್ವತಃ ಎದುರಿಸಿದರೆ ಮಾತ್ರ ಗೊತ್ತಾಗುತ್ತದೆ. ಕನಿಷ್ಠ ಒಂದೂರಿನಲ್ಲಿ ಹೈಸ್ಕೂಲ್ ಇಲ್ಲದಿದ್ದರೆ ಆ ಊರಿನ ಗಂಡು ಮತ್ತು ಹೆಣ್ಣುಮಕ್ಕಳ ಶಿಕ್ಷಣದ ಪ್ರಮಾಣ ಎಷ್ಟಿರಬಹುದು ?

ಅವರ ಸಮಸ್ಯೆಗಳನ್ನು ಅವರು ಎಷ್ಟೇ ಕೇಳಿಕೊಂಡರೂ ಗಮನಿಸದೇ ಹೋದಾಗ ಅವರು ಯಾವ ಸ್ಥಿತಿಗೆ ತಲುಪಬಹುದು ? ಆಸ್ಪತ್ರೆ, ರಸ್ತೆ, ಶಿಕ್ಷಣ, ನೀರು, ತೀರಾ ಅಗತ್ಯವಾದ ಇಂಥ ಸೌಲಭ್ಯಗಳ ತೀವ್ರ ಕೊರತೆ ಅನುಭವಿಸುವ ಮನಃಸ್ಥಿತಿಗೆ ಭಾಷೆಯ ಬಗ್ಗೆ ಭಾವುಕವಾಗಿ ಯೋಚಿಸುವ ವ್ಯವಧಾನವಿರುವುದಿಲ್ಲ. ಅವರ ಭಾವನಾವಲಯಕ್ಕೆ ಔಪಚಾರಿಕವಲಯವೂ ಪರಸ್ಪರ ಪೂರಕವಾಗಿರಬೇಕು. ನಾವು ನಾಡಿನ ಮಧ್ಯದಲ್ಲಿದ್ದವರು. ನಮಗೆ ಔಪಚಾರಿಕವಾಗಿ ಇಲ್ಲವೇ ಅನೌಪಚಾರಿಕವಾಗಿ ವ್ಯವಹರಿಸುವ ಖಚಿತ ವಲಯವಿದೆ. ನಮ್ಮೂರಲ್ಲಿ ಒಂದು ಪ್ರಾಥಮಿಕ ಶಾಲೆ ಇದೆ. ಅಲ್ಲಿ ಓದು ಮುಗಿಸಿದರೆ ಮುಂದೆ ಹೈಸ್ಕೂಲು. ಮಾಸ್ತರುಗಳು ಅಲ್ಲಿ ತಕ್ಕಮಟ್ಟಿಗೆ ಇರುತ್ತಾರೆ. ಇನ್ನೂ ಮುಂದೆ ಹೋಗಲು ಎಂಥದ್ದೋ ಒಂದು ವ್ಯವಸ್ಥೆ ಇದೆ. ನಮಗೆ ಉದ್ಯೋಗ ಸಿಗದೇ ಹೋಗಬಹುದು. ಆದರೆ ಆಶಾಭಾವನೆ ಇದೆ. ಉಪಯೋಗವಾಗಲಿ, ಬಿಡಲಿ ಎಂಥದ್ದೋ ಒಂದು ಸ್ಪಷ್ಟತೆ ಇದೆ. ಹೇಳಿಕೊಳ್ಳಲಿಕ್ಕೆ ಗಟ್ಟಿಯಾಗಿ ಕೂಗಲಿಕ್ಕೆ ಒಂದು ವ್ಯವಸ್ಥೆ ಇದೆ.

ಇತ್ತ ನಮ್ಮವರೂ ನಮ್ಮನ್ನು ಕೇಳದೆ, ಅತ್ತ ಇನ್ನೊಂದು ವ್ಯವಸ್ಥೆಗೂ ನಾವು ಪಕ್ಕಾಗದೇ ಇದ್ದಾಗ ಯಾಕಿರಬೇಕು, ಎನ್ನುವ ಹತಾಶ ಮನವಿ ಹುಟ್ಟಿಕೊಳ್ಳುತ್ತದೆ. ಒಂದು, ನಾನು ತಾಂತ್ರಿಕವಾಗಿ ಕನ್ನಡಿಗ, ಇನ್ನೊಂದು ಕಡೆ ದಟ್ಟವಾದ ಮರಾಠಿ ವ್ಯವಸ್ಥೆ. ಇವೆರಡರ ಮಧ್ಯೆ ತಾತ್ಸಾರ. ಯಾವುದನ್ನು ಆಯ್ದುಕೊಳ್ಳುವುದು ? ತಾನು ಕಾನೂನುಬದ್ಧವಾಗಿ ಇದ್ದ ನೆಲ ಸ್ಮರಿಸದೇ ಹೋದಾಗ ಸೋತ ಜನ ಬೇರೊಂದು ಪರಿಸರದ ಜೊತೆಗೆ ಒಂದಾಗಲು ಹವಣಿಸುತ್ತಾರೆ. ಇದು





ಸರಿಯೋ, ತಪ್ಪೋ ಎಂದು ಆಲೋಚಿಸಲು ಅವರೆಲ್ಲ ಪೆನ್ನು ಹಿಡಿದುಕೊಂಡು ಬರೆಯುತ್ತಾ ಕೂತು ಆಲೋಚಿಸುವ ಜನ ಅಲ್ಲ. ಅವರಿಗೆ ಬದುಕು ಮುಖ್ಯವಾಗುತ್ತದೆ. ಈ ನಿಟ್ಟಿನಲ್ಲಿ ಹೇಳಲಾರದ ನಿರ್ಲಕ್ಷ್ಯ ಗಡಿಭಾಗಗಳ ಮೇಲಾಗಿರುವುದು ಸುಳ್ಳಲ್ಲ.

ಇನ್ನು ಬೆಂಗಳೂರಿಗೆ ಬರೋಣ. ಮೆಜಸ್ಟಿಕ್‌ನಿಂದ ಯಲಹಂಕ, ಭೂಪಸಂದ್ರ, ನಾಗಶೆಟ್ಟಿಹಳ್ಳಿ ಮುಂತಾದ ಕಡೆಗೆ ಹೋಗುವ ಬಸ್ಸುಗಳಲ್ಲಿ ನಿಮ್ಮ ಹಿಂದೆ-ಮುಂದೆ ಕುಳಿತ ನಾಲ್ಕು ಜನರಲ್ಲಿ ಮೂವರು ಉತ್ತರ ಭಾರತದವರಿರುತ್ತಾರೆ. ಸಮಾಧಾನ ಎಂದರೆ ಟಿಕೆಟ್ ಕೇಳುವ ಕಂಡಕ್ಟರುಗಳು ಕನ್ನಡದವರಾಗಿರುತ್ತಾರೆ. ಬೆಳಗಾವಿಯಲ್ಲಿ ಇದೂ ಸಾಧ್ಯವಿಲ್ಲ. ಮರಾಠಿಯಲ್ಲೇ ಟಿಕೆಟ್ ಕೇಳುತ್ತಾರೆ. ಬೆಂಗಳೂರಿನಲ್ಲಿ ಹಿಂದಿ ಪ್ರಭಾವ ಕಡಿಮೆ. ಹೀಗಾಗಿ ಕಂಡಕ್ಟರ್‌ಗಳು ಕನ್ನಡೇತರರು ಎಂದು ಗೊತ್ತಾದರೂ ಕನ್ನಡದಲ್ಲಿಯೇ ಅವರಿಗೆ ಅರ್ಥವಾಗುವ ಹಾಗೆ ಟಿಕೆಟ್ ಕೇಳುತ್ತಾರೆ.

ಅಂತರರಾಜ್ಯ ವಲಸೆ ನಮ್ಮಲ್ಲಿ ಸಾಮಾನ್ಯ. ಅದಕ್ಕೆ ಯಾವುದೇ ನಿರ್ಬಂಧವಿಲ್ಲ. ನಾವು ಹೈದರಾಬಾದಿನಲ್ಲಿ ನಾಳೆಯೇ ಮನೆ ಹಿಡಿಯಬಹುದು. ಒಬ್ಬ ಗುಜರಾತಿ ಬೆಂಗಳೂರಿಗೆ ಬೇರೆ ಬೇರೆ ಕಾರಣಗಳಿಂದ ಬಂದು ನೆಲೆಯೂರಬಹುದು. ಇದಕ್ಕೆ ನಿರ್ಬಂಧಗಳಿಲ್ಲ, ಇರಲೂಬಾರದು. ಒಂದು ಭಾಷಿಕ ಸಮುದಾಯ ಈ ರೀತಿಯ ಬೃಹತ್ ಪ್ರಮಾಣದ ವಲಸೆಯನ್ನು ಹೇಗೆ ಎದುರಿಸುತ್ತದೆ ಎನ್ನುವುದು ಮುಖ್ಯ. ಬೆಂಗಳೂರಿನಂಥ ಊರಿನಲ್ಲಿ ನಾವು ಕನ್ನಡದ ಪರಿಸರವನ್ನು ನಿರ್ಮಾಣ ಮಾಡಲಿಕ್ಕೆ ಯಾಕೆ ಸಾಧ್ಯವಾಗಲಿಲ್ಲ ಎನ್ನುವುದು ಇಲ್ಲಿರುವ ಪ್ರಶ್ನೆ. ಯಾವ ಭಾಷೆಯೂ ಇನ್ನೊಂದು ಭಾಷೆಯ ವೈರಿಯಲ್ಲ. ಒಂದೊಂದು ಭಾಷೆಗೂ ಒಂದೊಂದು ಸೊಗಡಿರುತ್ತದೆ. ಅಂತರ್ಗತವಾದ ಒಂದು ಭಾಷೆ ಬಹಿರ್ಮುಖಿಯಾದ ಇನ್ನೊಂದು ಭಾಷೆಗೆ ಮುಖಾಮುಖಿಯಾದಾಗ ಭಾಷೆಯನ್ನು ಮೀರಿ ಜೀರ್ಣಿಸಿಕೊಂಡ ಒಂದು ವ್ಯಕ್ತಿತ್ವ ಅಲ್ಲಿ ನಿರ್ಮಾಣವಾಗುತ್ತದೆ. ಬರುವವರು ಬರಲಿ, ದುಡಿಯುವುದಕ್ಕೆ ಬಂಟರಿರುವವರು ಜಗತ್ತಿನ ಎಲ್ಲಾ ಕಡೆ ಹೋಗಿ ಬದುಕಬಲ್ಲರು. ಆದರೆ ಬೆಂಗಳೂರಿನಲ್ಲಿ ಮಾತ್ರ ನಾವು ಒಂದು ಅಚ್ಚ ಕನ್ನಡದ ವಾತಾವರಣವನ್ನು ನಿರ್ಮಾಣ ಮಾಡಲಿಲ್ಲ.

ಇವತ್ತು ಬೆಂಗಳೂರು ಕನ್ನಡದ ರಾಜಧಾನಿ. ಅದು ರಾಜ್ಯದ ಸುದ್ದಿಯ ಕೇಂದ್ರ ಬಿಂದು. ಅಲ್ಲಿ ವಿಧಾನಸೌಧವಿದೆ. ಕನ್ನಡ ಅಲ್ಪಸಂಖ್ಯಾತ ಪರಿಸರದಲ್ಲಿರುವ ಬೆಂಗಳೂರು ವಿಶಾಲ ಕರ್ನಾಟಕವನ್ನು ಆಳುವ ನೆಲ. ಕರ್ನಾಟಕವನ್ನು ಸುತ್ತಿಕೊಂಡು ಬಂದ ರಾಜಕಾರಣಿ ಬೆಂಗಳೂರಿನಲ್ಲಿ 'ಪ್ರೆಸ್‌ಮೀಟ್' ಮಾಡುತ್ತಾನೆ. ಕನ್ನಡಿಗರ ಸಂಖ್ಯೆ ಅತ್ಯಂತ ಕಡಿಮೆ ಎಂದು ಖ್ಯಾತಿಗಳಿಸಿರುವ ಬೆಂಗಳೂರಿನ ಈ ಸುದ್ದಿ ರಾಜ್ಯ ಮಟ್ಟದ ಸುದ್ದಿಯಾಗುತ್ತದೆ. ಇದೊಂದು ವೈವಿಧ್ಯ. ಯಾರು ಏನೂ ಮಾಡುವಂತಿಲ್ಲ. ಬೆಂಗಳೂರು ನಮ್ಮ ಹೆಮ್ಮೆಯ ಕರ್ನಾಟಕದ ರಾಜಧಾನಿ! ಚೆನ್ನೈನಲ್ಲಿ ತಮಿಳು ಪರಿಸರ ನಿರ್ಮಾಣವಾಗಿದೆ. ಹೈದರಾಬಾದಿನಲ್ಲಿ ತೆಲುಗು ಪರಿಸರವಿದೆ. ಬೆಂಗಳೂರಿನಲ್ಲಿ ಕನ್ನಡದ ಪರಿಸರ ಯಾಕಿಲ್ಲ? ಕಳೆದ ಐವತ್ತು ವರ್ಷಗಳಲ್ಲಿ ನಮ್ಮಲ್ಲಿ ಕಂಡುಬಂದ ಇಚ್ಛಾಶಕ್ತಿಯ ಕೊರತೆ ಈ ಸಮಸ್ಯೆಗೆ ಮೂಲಕಾರಣ. ಜೊತೆಗೆ ಓಟುಗಳನ್ನೇ ಗಮನದಲ್ಲಿಟ್ಟುಕೊಂಡು ನಡೆದುಬಂದ ನಮ್ಮ ರಾಜಕಾರಣದ ಕರಿನೆರಳು ಈಗ ಭಾಷೆ ಮತ್ತು ಸಂಸ್ಕೃತಿಯ ಮೇಲೆ ಕಾಣಿಸುತ್ತದೆ.

ಕನ್ನಡದ ಪರಿಸರ ನಿರ್ಮಾಣವಾಗದೇ ಇರುವುದಕ್ಕೆ ಸಾಹಿತಿ ಕಲಾವಿದರದು ಏನೂ ತಪ್ಪಿಲ್ಲ. 'ರಾಜಕೀಯ ಒಡೆಯುತ್ತದೆ, ಸಂಸ್ಕೃತಿ ಕಟ್ಟುತ್ತದೆ' ಎನ್ನುವ ಮಾತಿದೆ. ಮಹಾರಾಷ್ಟ್ರದ ಕುಗ್ರಾಮವೊಂದರಿಂದ ಕರ್ನಾಟಕದ ಪತ್ರಿಕೆಗಳಿಗೆ ಬರೆಯುವ ಹೆಣ್ಣು ಮಕ್ಕಳು, ಹೈದರಾಬಾದಿನಲ್ಲಿದ್ದುಕೊಂಡು ಕನ್ನಡದ ಪತ್ರಿಕೆಗಳಿಗೆ ಪತ್ರ ಬರೆಯುವ ಹುಡುಗರು, ತಮಿಳಿನ ಅತ್ಯುತ್ತಮ ಕಥೆಗಳನ್ನು ಕನ್ನಡಕ್ಕೆ ಅನುವಾದಿಸುವ ತಮಿಳು ಮಾತೃಭಾಷೆಯ ಕನ್ನಡಿಗರು ಅಷ್ಟೇ ಅಲ್ಲ, ಎಸ್. ಜಾನಕಿ, ಎಸ್. ಪಿ. ಎಲ್ಲರಿಗೂ ಗೊತ್ತು. ರಜನಿಕಾಂತ್, ಸುಹಾಸಿನಿ, ಸೌಂದರ್ಯ ಮುಂತಾದವರವರೆಗೆ ಈ ಕೊಡುಗೆ ಹಬ್ಬಿದೆ. ಇದು ಈವತ್ತಿನ ಪರಂಪರೆಯಲ್ಲ. ತುಂಬ ಹಿಂದಿನದು.

ಕನ್ನಡದ ಬಹುದೊಡ್ಡ ಕಾವ್ಯಶಕ್ತಿ ಎನಿಸಿಕೊಂಡ ಬೇಂದ್ರೆ 'ಕನ್ನಡಿಗ'ರಲ್ಲ. ಅವರ ಮಾತೃಭಾಷೆ ಮರಾಠಿಯಾಗಿತ್ತು. ಮತ್ತು ಡಿ.ವಿ.ಜಿ.ಯವರ ಮಾತೃಭಾಷೆ ತಮಿಳು.

ಇವರಿಗಿಂತಲೂ ಹಿಂದಿನ ಪರಂಪರೆಯಲ್ಲಿ ಇಂಥ ಬೇಕಾದಷ್ಟು ಉದಾಹರಣೆಗಳಿವೆ. ಅಂದರೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಈ ರೀತಿಯ ಆಹ್ಲಾದಕಾರಿಯಾದ ವಾತಾವರಣ ಇವತ್ತಿಗೂ ಇದೆ. ಮರಾಠಿಯ ಕರಂದಿಕರ್ ಅವರಿಗೆ ಜ್ಞಾನಪೀಠ ಪ್ರಶಸ್ತಿ ಬಂದಾಗ ನಮಗೆ ಅವರು ಕಲಿಸಿಹೋದ ಬಾಗಲಕೋಟೆಯ ಕಾಲೇಜು ನೆನಪಾಗುತ್ತದೆ.

ಒಂದು ಭಾಷೆಯ ಆಚೆಗೆ ಇರುವ ಹಣ್ಣಾದ ಆ ಸಾಹಿತ್ಯದ ಜೀವಕ್ಕೆ ನೀರಲ್ಲಿ ಮುಳುಗಿದ ಬಾಗಲಕೋಟೆಯನ್ನೊಮ್ಮೆ ನಾನು ನೋಡಬೇಕು ಎನ್ನುವ ತುಡಿತ! ತಾಂತ್ರಿಕವಾಗಿ ಕೇರಳದಲ್ಲಿದ್ದರೂ ಪ್ರತಿನಿತ್ಯ ಕನ್ನಡದ ಪರಿಸರವನ್ನು ಹೊದ್ದು ಮಲಗುವ ಕಾಸರಗೋಡಿನ ಜನಕ್ಕೆ ಕನ್ನಡದ ಅಕ್ಷರಗಳೆಲ್ಲ ತವರಿನ ಮುತ್ತುಗಳ ಹಾಗೆ. ರಾಜಕೀಯದಲ್ಲಿ ಕಯ್ಯಾರ ಕಿಞ್ಞಣ್ಣ ರೈ ಅವರ ಧ್ವನಿ ಕ್ಷೀಣವಾದರೂ ಸಾಂಸ್ಕೃತಿಕ ಪರಿಸರದಲ್ಲಿ ಅದಕ್ಕೆ ಬಾಂಧವ್ಯ ಬೆಸೆಯುವ ಶಕ್ತಿ ಇದೆ. ಯಾವ ಪಕ್ಷ ಬರಲಿ ಹೋಗಲಿ ಈ ಕಟ್ಟುವ ಕೆಲಸ ನಿರಂತರವಾಗಿ ನಡೆಯುತ್ತಿರುತ್ತದೆ. ಅಂದಾಗ ಒಂದು ಪರಿಸರದ ಗೊಂದಲಕ್ಕೆ ಏನು ಕಾರಣ ಎನ್ನುವುದನ್ನು ನಾವು ಆಲೋಚಿಸಬೇಕು. ಈಗ ನಾವು ತುಂಬ ಗದ್ದಲದಲ್ಲಿದ್ದೇವೆ. ಯಾರ ಮಾತು ಯಾರಿಗೂ ಕೇಳಿಸುತ್ತಿಲ್ಲ. ದಿಢೀರನೇ ಎದ್ದ ಭಾಷಾಪ್ರೇಮ ಯಾವ ಮೂಲದಿಂದ ಬಂದದ್ದು ಎನ್ನುವುದನ್ನು ಕೇಳಿಸಿಕೊಳ್ಳುವುದಕ್ಕೆ ಯಾರಿಗೂ ಪುರಸೊತ್ತಿಲ್ಲ. ರಚನಾತ್ಮಕವಾಗಿ ಆಲೋಚನೆ ಮಾಡುವುದಕ್ಕಾಗಿ ಒಂದು ಕಡೆ ಕೂಡುವ ಭಾಗ್ಯ ಮುಂದಿನ ಯಾವ ಶತಮಾನಗಳಲ್ಲಿಯೂ ಬರಲಿಕ್ಕಿಲ್ಲ. ಅಷ್ಟರಮಟ್ಟಿಗೆ ಪರಿಸ್ಥಿತಿ ಬಿಗಡಾಯಿಸಿದೆ.

ನಾವು ಎದುರಿಸಬೇಕಾದ ನಿಜವಾದ ಶತ್ರು ಜಾಗತೀಕರಣ. 'ನಮ್ಮ ಎಲ್ಲಾ ಚರ್ಚೆಗಳು ಕೊನೆಗೆ ಮುಟ್ಟುವುದು ಜಾಗತೀಕರಣದಲ್ಲಿಯೇ' ಎಂದು ಅಮರ್ತ್ಯ ಸೇನ್ ಹೇಳುತ್ತಾರೆ. ಒಂದು ಭಾಷೆಯ ಅಸ್ತಿತ್ವದ ಗೊಂದಲದ ಮೇಲೆಯೂ ಜಾಗತೀಕರಣದ ಕರಿ ನೆರಳಿದೆ. ಒಂದು ಸಮಸ್ಯೆಯ ಮೂಲಕ್ಕೆ ಹೋಗಿ ಅದನ್ನು ಎದುರಿಸುವ ಛಾತಿ ನಮ್ಮಲ್ಲಿ ಉಳಿದಿಲ್ಲ. ಬಗೆಹರಿಯದಂತಹ ಸಮಸ್ಯೆಗಳನ್ನು ದಾಟಿ ನಾವು ತುಂಬ ದೂರ ಬಂದಿದ್ದೇವೆ. ಮರಳಿ ಹೋಗುವುದು ಸಾಧ್ಯವಿಲ್ಲ. ಅದಕ್ಕಾಗಿ ತೇಪೆ ಹಚ್ಚುವ ಕೆಲಸ ಮಾಡುತ್ತಾ ದಿನ ದೂಡುತ್ತಿದ್ದೇವೆ.

ಇನ್ನು ಸಿನಿಮಾದ ಬಗ್ಗೆ ಒಂದು ಮಾತು. ಇಡೀ ಭಾಷೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಎಷ್ಟು ಸಿನಿಮಾಗಳು ತಯಾರಾದವು? ತೆಗೆದರೂ ಜನತೆಗೆ ಅವುಗಳನ್ನು ತಲುಪಿಸಲಿಕ್ಕೆ ಯಾಕೆ ಸಾಧ್ಯವಾಗಲಿಲ್ಲ? ಪ್ರೇಮ ಕುರಿತಾದ ಚಿತ್ರವಾದರೂ ಪುಟ್ಟಣ್ಣ ಕಣಗಾಲ್ ತೆಗೆದ ಚಿತ್ರಗಳನ್ನು ನೋಡಿದರೆ ನಮಗೆ ಯಾಕೆ ಹೆಮ್ಮೆ ಎನಿಸುತ್ತದೆ? ಈಗಲೂ 'ಎಲ್ಲೋ ಜೋಗಪ್ಪ ನಿನ್ನ ಅರಮನೆ' ಹಾಡು ಯಾಕೆ ಸಿನಿಮಾದಲ್ಲಿ ಹಿಟ್ ಆಗುತ್ತದೆ, ಇತ್ತೀಚೆಗೆ ಜಾನಪದ ಹಾಡುಗಳನ್ನು ಸಿನಿಮಾದಲ್ಲಿ ತೆಗೆದುಕೊಳ್ಳುವ ಟ್ರೆಂಡ್ ಯಾಕೆ ಶುರುವಾಯಿತು, ಎಂಬಂಥವುಗಳ ಬಗ್ಗೆ ಗಂಭೀರ ಚರ್ಚೆಗಳಾಗಬೇಕು. ಚರ್ಚೆಯ ಫಲಶ್ರುತಿಯನ್ನು




ರಚನಾತ್ಮಕವಾಗಿ ಸಿನಿಮಾಗಳಲ್ಲಿ ಅಳವಡಿಸಬೇಕು. ದೌರ್ಭಾಗ್ಯ ನೋಡಿ! ಕನ್ನಡಿಗ ಯಾವ ಸಿನಿಮಾ ಆದರೂ ನೋಡುತ್ತಾನೆ. ಟಿಕೆಟ್ ತೆಗೆಸುವಾಗ ಲಾಟಿ ಚಾರ್ಜ್ ಆದರೂ ಪರವಾಗಿಲ್ಲ. ಕನ್ನಡದ ಗಂಡುಮೆಟ್ಟಿನ ನೆಲ ಹುಬ್ಬಳ್ಳಿಗೆ ಹೋಗಿ ತೆಲುಗು ಸಿನಿಮಾ ನೋಡಿ ಕನ್ನಡದ ಹುಡುಗಿಯರನ್ನು ನೆನಪಿಸಿಕೊಂಡು ಮಲಗುತ್ತಾನೆ. ಸುವರ್ಣ ಕರ್ನಾಟಕದ ಬಾಗಿಲಲ್ಲಿ ನಿಂತಿರುವ ಕನ್ನಡ ಚಿತ್ರ ಪ್ರೇಮಿಯ ಸ್ಥಿತಿ ಇದು.

ಉತ್ತರ ಭಾರತದವರು ಇಲ್ಲಿ ಬಂದು ಶ್ರೀಮಂತರಾದರು. ಯಾವುದೇ ಚಿಕ್ಕ ಹೋಬಳಿ ಪ್ರದೇಶಕ್ಕೂ ಹೋಗಿ ಅವರು ಒಂದು ಬೇಕರಿ ನಡೆಸುತ್ತಾರೆ. ರೈಲಿನಲ್ಲಿ ಖಾಲಿ ಕೈಯಲ್ಲಿ ನಿನ್ನೆ ಬಂದು ಇಳಿದ ಹುಡುಗನ ಕೈಯಲ್ಲಿ ಇವತ್ತು ಎರಡು ಪಾನಿಪುರಿಯ ಬುಟ್ಟಿಗಳಿವೆ. ಹತ್ತು ವರ್ಷಗಳ ಹಿಂದೆ ಖಾಲಿ ಕೈಯಲ್ಲಿ ಬಂದವರೇ ಈಗ ಊರ ತುಂಬ ಬಡ್ಡಿ ಸಾಲ ಕೊಟ್ಟಿದ್ದಾರೆ. ಅವರಿಗೆ ಬಾಡಿಗೆ ಮನೆ ಕೊಟ್ಟ ಯಜಮಾನ ಇವತ್ತು ಅದೇ ಮನೆ ಕಾಯುವ ಸೆಕ್ಯುರಿಟಿ ಗಾರ್ಡ್. ದುಡಿಯುವುದು ಅವರ ತಪ್ಪೇ? ನಮ್ಮ ಊರಿನಲ್ಲಿ ಅಂಗಡಿ ಹಾಕಿ ವ್ಯಾಪಾರ ಮಾಡಬೇಡಿ ಎಂದು ಕನ್ನಡಿಗರಿಗೆ ಯಾರಾದರೂ ಹೇಳಿದ್ದಾರಾ? ಎರಡು ಖಾಲಿ ದೋಸೆ ತಿನ್ನಲಿಕ್ಕೆ ಎಂಟು ಕಿಲೋ ಮೀಟರ್ ಹಳ್ಳಿಯಿಂದ ಪೆಟ್ರೋಲ್ ಖರ್ಚು ಮಾಡಿಕೊಂಡು ಮಂಡ್ಯಕ್ಕೆ ಬಂದುಹೋಗುವ ಬದಲು ಅದೇ ಊರಿನಲ್ಲಿ ಯಾರಾದರೂ ಚಿಕ್ಕ ಹೋಟೆಲ್ ನಡೆಸಬಹುದಲ್ಲಾ? ಬೋಂಡಾ ಮಾರುವುದು ಕನ್ನಡಿಗರಿಗೆ ಇವತ್ತು ಇಜ್ಜತ್ತಿನ ಪ್ರಶ್ನೆ. ಲೆಕ್ಕ ಹಾಕಿ. ಸುಮ್ಮನೆ, ಬಂದವರನ್ನು ದೂರಿದರೆ ಏನು ಪ್ರಯೋಜನ? ಅಮೆರಿಕಾದಲ್ಲಿ ಒಬ್ಬ ಶ್ರೀಮಂತ ಕನ್ನಡಿಗ ಕಾರ್ಪೊರೇಟರ್ ಆದರೆ ನಾವು ಹೆಮ್ಮೆಪಡುವುದಿಲ್ಲವೇ? ಹಾಗೆ ಇಲ್ಲಿಯೂ ಕನ್ನಡೇತರರು ಶ್ರೀಮಂತರಾದಂತೆ ಭದ್ರತೆಗಾಗಿ ರಾಜಕಾರಣದ ರಂಗಕ್ಕೆ ಧುಮುಕುತ್ತಾರೆ. ಇಂಥವರನ್ನು ತಡೆಯಲಿಕ್ಕೆ ಓಡಿಸಲಿಕ್ಕೆ ಆಗುವುದಿಲ್ಲ. ಮೂಲಭೂತವಾಗಿ ನಮ್ಮ ಮನೋಭಾವನೆಯಲ್ಲಿ ಬದಲಾವಣೆಗಳಾಗಬೇಕು. ದಿಢೀರನೆ ಎದ್ದ ಭಾಷಾ ಪ್ರೇಮ ಇಂಥವುಗಳಿಗೆ ಉತ್ತರವಾಗುವುದಿಲ್ಲ.

ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಇನ್ನೊಂದು ಗಮನಿಸಬೇಕಾದ ಸಂಗತಿ ಎಂದರೆ ಸಮಗ್ರ ಕರ್ನಾಟಕದ ನಡುವಿನ ಮಾನಸಿಕ ಅಂತರ. ಹೈದ್ರಾಬಾದ್ ಕರ್ನಾಟಕ, ಉತ್ತರ ಕರ್ನಾಟಕ, ಮೈಸೂರು ಕರ್ನಾಟಕ ಎಂಬ ಭೇದ ಮುಖ್ಯವಾಗಿ ತೊಲಗಬೇಕು. ಅಸಮಾನತೆಗಳು ಎಲ್ಲ ಕಡೆಯೂ ಇರುತ್ತವೆ. ಒಂದು ಜಿಲ್ಲೆಯ ಎರಡು ತಾಲ್ಲೂಕುಗಳು ಯಾವುದೇ ದೃಷ್ಟಿಯಿಂದಲೂ ಸಂಪೂರ್ಣವಾಗಿ ಸಾಮ್ಯವಾಗಿರಲಿಕ್ಕೆ ಸಾಧ್ಯವಿಲ್ಲ. ಒಂದು ಕಡೆ ನೀರಾವರಿ ಇದ್ದರೆ ಇನ್ನೊಂದು ಕಡೆ ಇರುವುದಿಲ್ಲ. ಧಾರವಾಡದಲ್ಲಿ ಯುನಿವರ್ಸಿಟಿ ಇದೆ. ಪಕ್ಕದ ಖಾನಾಪುರದಲ್ಲಿ ಕನ್ನಡದ ಪರಿಸರವೇ ಕಡಿಮೆ. ಬೆಂಗಳೂರು ಕನ್ನಡದ ರಾಜಧಾನಿ. ಅಲ್ಲಿ ಸರಕಾರಿ ಹಾಗೂ ಸರಕಾರೇತರ ಕನ್ನಡದ ಶಕ್ತಿ ಕೇಂದ್ರಗಳಿವೆ. ಆದರೆ ಅಲ್ಲಿ ಕನ್ನಡದ ವಾತಾವರಣವೇ ಇಲ್ಲ. ಹೆಚ್ಚು ಕಡಿಮೆ ನದಿಗಳೇ ಇಲ್ಲದ ಊರೆಂಬ ಖ್ಯಾತಿ ಪಡೆದ ಚಿತ್ರದುರ್ಗವನ್ನು ಯಾವ ಕರ್ನಾಟಕದ ಸೀಮೆಗೆ ಸೇರಿಸುತ್ತೀರಿ? ಇಡೀ ಮಂಡ್ಯ ಜಿಲ್ಲೆಯೇ ಹಸಿರಿನಿಂದ ಕೂಡಿದೆ. ಆದರೆ ಮಳವಳ್ಳಿಯಂಥ ಊರಿನಲ್ಲಿ ಒಂದು ಅಥವಾ ಎರಡು ಎಕರೆ ಒಣ ಭೂಮಿ ಹೊಂದಿದ ಬಡ ಕುಟುಂಬಗಳಿವೆ. ಮೈಸೂರು ಅಚ್ಚಕನ್ನಡದ ಪ್ರದೇಶ, ಆದರೆ ಅಜೀರ್ಣವಾದ ಬೆಂಗಳೂರಿನ ಆಕರ್ಷಣೆಯಲ್ಲಿ ಅದೂ ಮಂಕಾಗಿದೆ. ವಿಹಾರಕ್ಕೆ ಮಾತ್ರ ಅದು ಈಗ ಉಪಯೋಗವಾಗುತ್ತದೆ. ಈ ಎಲ್ಲ ಅಂತರಗಳನ್ನು ಹೊಡೆದುಹಾಕಿ ಕನಿಷ್ಠ ಪ್ರಮಾಣದ ಒಂದು ಸಮಗ್ರತೆ ಸಾಧ್ಯವಾಗಬೇಕು. ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಈ ಎಲ್ಲ ನಿಟ್ಟಿನಲ್ಲಿ ರಚನಾತ್ಮಕವಾಗಿ ಆಲೋಚಿಸಿದಾಗ ಮಾತ್ರ ಈ ಸಮಗ್ರತೆ ಸಾಧ್ಯವಾಗುತ್ತದೆ.

ಭಾಷೆ, ಸಂಸ್ಕೃತಿಯಂತಹ ಸಮಸ್ಯೆಗಳ ಹಿಂದೆ ಈ ಏನೆಲ್ಲ ಕಾರಣಗಳು ಇವೆ, ಅಲ್ಲವೆ? ಅಭಿವೃದ್ಧಿ ರಾಜಕಾರಣ ನಿಂತುಹೋದಾಗ ಧರ್ಮ ಮತ್ತು ಭಾಷೆಯ ರಾಜಕಾರಣ ಶುರುವಾಗುತ್ತದೆ. ರಾಜಕಾರಣಕ್ಕೆ ಇಂಥವುಗಳನ್ನು ಆಪೋಶನ ತೆಗೆದುಕೊಳ್ಳುವುದಕ್ಕೆ ನಾವು ಬಿಡಬಾರದು. ಕರ್ನಾಟಕಕ್ಕೆ ಐವತ್ತು ವರ್ಷ ತುಂಬಿದ ಸಂದರ್ಭದಲ್ಲಿ ಯಾರನ್ನು ದೂರಿ ಏನು ಪ್ರಯೋಜನ? ಸಮಸ್ಯೆಯ ಮೂಲ ಇರುವುದು ನಮ್ಮಲ್ಲಿಯೇ. ನಿಜವಾದ ಹೋರಾಟ ಸಾಧ್ಯವಾಗಬೇಕಾದದ್ದು ಇಲ್ಲಿಯೇ. ಸುವರ್ಣ ಕರ್ನಾಟಕದ ವರ್ಷಾಚರಣೆಯ ಈ ಕಾಲ ಬರಿ ಆಚರಣೆ ಮಾಡಿ ಕೈತೊಳೆದುಕೊಳ್ಳುವುದಕ್ಕೆ ಅಲ್ಲ. ಇದು ನಿಜವಾಗಿ ಕನ್ನಡಿಗರ ಆತ್ಮಾವಲೋಕನದ ಕಾಲ ಎಂದು ನನಗನ್ನಿಸುತ್ತದೆ.

ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾಮಂದಿರ, ಮಂಡ್ಯ




# ಬುಷ್ ಮತ್ತು ಬ್ಲೇರ್ ಪ್ರಜಾಪ್ರಭುತ್ವದ ರಕ್ಷಕರೇ ?

ಬ್ರಿಟನ್ ಮತ್ತು ಅಮೆರಿಕಾಗಳಲ್ಲಿ ಪ್ರಜಾಪ್ರಭುತ್ವವಿದೆ ಎನ್ನಲಾಗುತ್ತದೆ. ಅದು ವಸ್ತುತಃ ಕಾರ್ಯಗತವಾಗಲು ಹಿಡಿಯುವ ಸಮಯ ಮಾತ್ರ ಅಗಾಧ. ಬ್ರಿಟನ್ನಿನ ನಾಗರಿಕರೆಲ್ಲಾ ಒಟ್ಟಾಗಿ ಕೂಗಿದರೂ ಬ್ಲೇರ್ ಪ್ರಧಾನಿ ಪಟ್ಟದಿಂದ ತೊಲಗಿಲ್ಲ. ಅಮೆರಿಕಾದಲ್ಲಿ ರಕ್ಷಣಾ ಸಚಿವ ರಾಜೀನಾಮೆ ನೀಡಲು ಇಷ್ಟು ದಿನ ಬೇಕಾಯಿತು. ಅಲ್ಲಿಯ ಪ್ರತಿನಿಧಿ ಸಭೆ ಮತ್ತು ಸೆನೆಟ್ ಚುನಾವಣೆಗಳಲ್ಲಿ ಬುಷ್ ಪಕ್ಷವು ಸೋತರೂ ಆತನೇನೂ ಅಧ್ಯಕ್ಷಗಿರಿಯಿಂದ ನಿರ್ಗಮಿಸುವುದಿಲ್ಲ. ಹಾಗೆ ನೋಡಿದರೆ ನಾವೇ ಮೇಲು : ಜಾರ್ಜ್ ಫರ್ನಾಂಡೀಸ್, ಶಿಬೂ ಸೋರೆನ್, ನಟವರ ಸಿಂಗ್ ಮುಂತಾದವರನ್ನು ಅಟ್ಟಿಬಿಡುತ್ತೇವೆ! ಅಮೆರಿಕಾದ ಚುನಾವಣೆಯಲ್ಲಿ ರಿಪಬ್ಲಿಕನ್ನರ ಬದಲು ಡೆಮೋಕ್ರಾಟರು ಬಂದರೆಂದು ನಾವು ಹಿಗ್ಗಲೂ ಬೇಕಾಗಿಲ್ಲ, ಕುಗ್ಗಲೂ ಬೇಕಾಗಿಲ್ಲ. ಆ ಪಕ್ಷಗಳಲ್ಲಿ ಒಂದು ಈಚಲು ಗಿಡವಾದರೆ ಇನ್ನೊಂದು ಕುರುಚಲು ಗಿಡ; ಒಂದು ಕಾರೆಮುಳ್ಳಾದರೆ ಇನ್ನೊಂದು ನೆಗ್ಗಲಮುಳ್ಳು. ಅಂತರ ರಾಷ್ಟ್ರೀಯ ವಿದ್ಯಮಾನಗಳಲ್ಲಿ ಅಗಾಧ ಬದಲಾವಣೆಗಳೇನೂ ಇರವು. ನಿಕ್ಸನ್ ಚಿಲಿಯನ್ನು ನಾಶಮಾಡಿದ್ದ, ಕೆನಡಿ ಕ್ಯೂಬ ಧ್ವಂಸ ಮಾಡಲು ಹೋಗಿ ಸೋತಿದ್ದ. ಅದೇ ಆ ದೇಶದ ಪರಂಪರೆ. ಅದರ ನೆರೆಯವರಿಗೆ ಅದು ಅರ್ಥವಾಗಿದೆ. ದೂರದಲ್ಲಿ ಕೂತು ಬೋಳು ಬೆಟ್ಟವನ್ನು ನೋಡಿ ಪುಲಕಿತರಾಗುವುದು ಅವಾಸ್ತವ ಅನುಭವ ; ಅಮೆರಿಕಾ ಬಗ್ಗೆ ಭಾರತದ ದೃಷ್ಟಿ ಅದು. ಅಮೆರಿಕಾಕ್ಕೆ ನಿಜವಾದ ಅರ್ಹತಾ ಪತ್ರವನ್ನು ನೀಡಲು ಅರ್ಹರೆಂದರೆ ಅಲ್ಲಿಯ ನೆರೆಯವರು. ಅವರಿಗೆ ಬುಷ್ ನೀತಿ ಚೆನ್ನಾಗಿ ಮನದಟ್ಟಾಗಿದೆಯಾದ್ದರಿಂದ ಕ್ರಮೇಣ ಎಲ್ಲ ದಕ್ಷಿಣ ಅಮೆರಿಕಾದ ದೇಶಗಳೂ ವಾಷಿಂಗ್‌ಟನ್ ವೀರರಿಗೆ ಪಾದಪ್ರಹಾರ ಮಾಡಿ ಹೊರ ಹಾಕುತ್ತಿವೆ. ಲೂಟಿಯನ್ನು ಇನ್ನು ಸಹಿಸುವುದಿಲ್ಲವೆಂಬ ಸೂಚನೆ ಬಲವಾಗಿ ಬಂದಿದೆ. ಇತ್ತೀಚಿನ ಸರದಿ ನಿಕರಾಗ್ವದ್ದು. ಸಂದಿನಿಸ್ಟರನ್ನು ಕೊಂದು ಸಂಚಿನಿಂದ ಸೋಲಿಸಿದ್ದ ಅಮೆರಿಕಾ ಪ್ರಭಾವ ಕುಗ್ಗಿ ಅಲ್ಲಿ ಓರ್ಟೆಗಾ ಮತ್ತೆ ಅಧಿಕಾರಕ್ಕೆ ಬಂದಿದ್ದಾನೆ. ಕ್ಯೂಬ, ವೆನಿಝುಯೇಲ, ಬೊಲಿವಿಯ, ಚಿಲಿ, ಬ್ರೆಜಿಲ್, ಕೊಲಂಬಿಯಾ ಮತ್ತು ಈಗ ನಿಕರಾಗ್ವ. ಗ್ವಾಟೆಮಾಲ, ಹೈಟಿ, ಅರ್ಜೆಂಟೈನಾಗಳು ಮಾತ್ರ ಅಮೆರಿಕಾದ ಮುಷ್ಟಿಯಲ್ಲೇ ಉಳಿದಿವೆ. ತನ್ನ ಭಂಟ ಗ್ವಾಟೆಮಾಲವನ್ನು ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಆಯ್ಕೆಯಾಗುವಂತೆ ಮಾಡಲು ಬುಷ್‌ನ ಬಾಂಬುಗಳಿಗೆ ಸಾಧ್ಯವಾಗಲಿಲ್ಲ.

ಆತನಿಗೆ ಸಾಧ್ಯವಾಗುವುದು ಪಶ್ಚಿಮ ಏಷ್ಯಾದ ಇರಾಕಿಗೆ ನುಗ್ಗಿ ಆರು ಲಕ್ಷ ಜನರನ್ನು ಹತ್ಯೆಗೈಯ್ಯುವ ಕೆಲಸ. ಅದನ್ನು ಮಾಡಿದ್ದರೂ ಬುಷ್-ಬ್ಲೇರ್‌ಗಳಿಗೆ ಗಲ್ಲು ಶಿಕ್ಷೆ ಇಲ್ಲ. ಏಕೆಂದರೆ, ಅವರು ಪ್ರಜಾಪ್ರಭುತ್ವ ಸ್ಥಾಪಿಸಲು ಆ ಜನಗಳನ್ನು ಕೊಂದಿದ್ದಾರೆ, ಅಷ್ಟೆ! ಧರ್ಮ ಸಂಸ್ಥಾಪನೆಗೆ ಅದೆಷ್ಟೋ ಅಕ್ಷೋಹಿಣಿ ಸೈನ್ಯವನ್ನು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಸಾಯಿಸಲಿಲ್ಲವೆ, ಹಾಗೆ. ಇಲ್ಲದ ಮಾರಕ ಅಸ್ತ್ರಗಳನ್ನು ಸದ್ದಾಂ ಹುಸೇನನ ಇರಾಕಿನಲ್ಲಿ ''ಸಂಶೋಧಿಸಿ'' ಆಕ್ರಮಣ ಮಾಡಿದ್ದು ಅಮೆರಿಕಾ ಮತ್ತು ಬ್ರಿಟನ್. ಅಂತರರಾಷ್ಟ್ರೀಯ ಭಯೋತ್ಪಾದಕರೆಂದರೆ ನಿಜಕ್ಕೂ ಇವರೇ! ತನ್ನನ್ನು ಕೊಲ್ಲಲು ಸಂಚು ಹೂಡಿದ್ದವರನ್ನು ಮಟ್ಟಹಾಕಲು ಸದ್ದಾಂ ೧೪೮ ಜನರನ್ನು ಕೊಂದನೆಂದು ಅವನಿಗೆ ಮರಣದಂಡನೆ. ಅಂತಹ ಶಿಕ್ಷೆ ಕೂಡಲೆ ವಿಧಿಸಬೇಕೆಂಬ ಆಜ್ಞೆಯನ್ನು ಊಳಿಗ ದೇಶವಾಗಿರುವ ಇರಾಕಿನಲ್ಲಿ ಊಳಿಗ ನ್ಯಾಯಮೂರ್ತಿಯೊಬ್ಬ ಶಿರಸಾವಹಿಸಿ ಪಾಲಿಸಿದ್ದಾನೆ; ಆದರೆ ಅವನಿಗೆ ಬುಷ್ ಪಕ್ಷದ ಚುನಾವಣೆಯ ಸೋಲನ್ನು ತಪ್ಪಿಸಲಾಗಲಿಲ್ಲ. ನಮ್ಮ ದೇಶದಲ್ಲಿ ಬ್ರಿಟಿಷರು ತಮ್ಮನ್ನೊದ್ದೋಡಿಸಲು ''ಸಂಚು'' ಮಾಡಿದ್ದರೆಂದು ಹೇಳಿ ತಿಲಕ್, ಸಾವರ್ಕರ್, ಭಗತ್ ಸಿಂಗ್ ಹಾಗೂ ೨೮ ಕಮ್ಯುನಿಸ್ಟರ ವಿರುದ್ಧ ಮೊಕದ್ದಮೆಗಳನ್ನು ಹೂಡಿ ಅವರಿಗೆಲ್ಲಾ ಶಿಕ್ಷೆ ಕೊಡಿಸಿದ್ದರು; ಆದರೆ ಅವರು ಭಾರತದಲ್ಲಿ ಉಳಿಯಲಂತೂ ಸಾಧ್ಯವಾಗಲಿಲ್ಲ. ಮೊದಲು ಗಲ್ಲಿಗೆ ಹೋಗಬೇಕಾದವರು ಬುಷ್ ಮತ್ತು ಬ್ಲೇರ್. ಸದ್ದಾಂ ತನ್ನ ದೇಶದಲ್ಲಿ ವಿರೋಧಿಗಳನ್ನು ಹತ್ತಿಕ್ಕಿದ; ಆದರೆ ವಿರೋಧವನ್ನೇ ಮಾಡದ ಆರು ಲಕ್ಷ ಜನರೊಂದಿಗೆ ಸದ್ದಾಂನನ್ನು ಕೊಲ್ಲಲು ಅಮೆರಿಕಾಕ್ಕೆ ಹಕ್ಕು ಎಲ್ಲಿಯದು ? ಇಡೀ ವಿಶ್ವವು ಮೂಕ ಪ್ರೇಕ್ಷಕನಂತೆ ಸೊರಗಿ ಹೋಗಿದೆ. ಎಲ್ಲ ದೇಶಗಳಲ್ಲೂ ಬುಷ್ ಆಡಳಿತವೇ ಇರಬೇಕು, ಎಲ್ಲ ಸಂಪತ್ತೂ ಅಮೆರಿಕಾದ್ದೇ ಆಗಬೇಕು! ಹೀಗಿದೆ ನಮ್ಮ ವಿಶ್ವಕಾನನದ ನೀತಿ. ಹಾಗಿದ್ದರೆ ಆಂತರಿಕ ವಿರೋಧಿಗಳನ್ನು ಆಳುವ ಜನ ಹೇಗೆ ನಡೆಸಿಕೊಳ್ಳಬೇಕು ? ಸದ್ದಾಂ ರೀತಿಯಲ್ಲಂತೂ ಅಲ್ಲ. ಕಾಶ್ಮೀರ, ಈಶಾನ್ಯ ಪ್ರದೇಶ, ಮುಂತಾದೆಡೆಗಳಲ್ಲಿ ನಮ್ಮ ದೇಶದ ಆಡಳಿತಾರೂಢರು ವಿರೋಧಿಗಳನ್ನು ಸಿಂಹಾಸನದ ಮೇಲೆ ಕೂಡಿಸಿ ಪೂಜೆಯನ್ನೇನೂ ಮಾಡಿಲ್ಲವಲ್ಲವೆ? ಶ್ರೀಲಂಕಾದಲ್ಲಿ ನೂರಾರು ಮಂದಿ ಪ್ರತ್ಯೇಕತಾವಾದಿಗಳ ಹತ್ಯೆ ನಡೆದಿದೆ. ಬಂಡವಾಳದ ಪ್ರಭುತ್ವದಲ್ಲಿ ಜನಪ್ರಭುತ್ವಕ್ಕಾಗಿ ಬಂಡೇಳುವವರ ವಿರುದ್ಧ ಇಂಥವೆಲ್ಲಾ ಸಾಮಾನ್ಯ ಘಟನೆಗಳು. ಅದಿಲ್ಲವಾಗಲು ಇತಿಹಾಸದ ಚಕ್ರ ಇನ್ನೂ ಉರುಳಬೇಕಾಗಿದೆ. ಇದೆಲ್ಲದರ ಮಧ್ಯೆ ಅಸಹ್ಯ ಹುಟ್ಟಿಸುವ ಸಂಗತಿಯೆಂದರೆ ಅರಬ್ ದೇಶಗಳ ಖಾಲಿ ಬೀದಿಗಳು ಮತ್ತು ಸತ್ತ ಪ್ರಜ್ಞೆ. ಇನ್ನೆಷ್ಟು ಕಾಲ ಅಮೆರಿಕಾದ ಪಾತಕಗಳನ್ನು ವಿಶ್ವದ ಜನ ಸಹಿಸಬೇಕು ?

ಸಶಸ್ತ್ರ ಹೋರಾಟವೊಂದೇ ಅಧಿಕಾರಕ್ಕೆ ಬರಲು ಸಾಧನವಾಗಲಾರದೆಂದು ನೇಪಾಳದ ಕ್ರಾಂತಿಕಾರಿ ನಾಯಕ ಶ್ರೀ. ಪ್ರಚಂಡ ಹೇಳಿಕೆ ನೀಡಿ ಸರ್ಕಾರದಲ್ಲಿ ಭಾಗಿಯಾಗುವ ತೀರ್ಮಾನ ಪ್ರಕಟಿಸಿದ್ದಾರೆ. ಅಂತಹ ಹೋರಾಟ ನಡೆಸಿರದಿದ್ದರೆ ನೇಪಾಳದಲ್ಲಿ ಕಳೆದೆರಡು ವರ್ಷಗಳ ಮಹತ್ವದ ಬದಲಾವಣೆಗಳು ಉಂಟಾಗುತ್ತಿರಲಿಲ್ಲ. ಪ್ರಚಂಡರ ಕಮ್ಯುನಿಸ್ಟ್ ಪಕ್ಷಕ್ಕೆ ಗೌರವದ ಸ್ಥಾನ ದಕ್ಕಿರುವುದು ಹೋರಾಟಗಳ ಫಲವಾಗಿ. ಅಂತೆಯೇ ಈಗ ಸಂವಿಧಾನ ರಚನಾ ಸಭೆಯಲ್ಲೂ ಆ ಪಕ್ಷಕ್ಕೆ ಗಣನೀಯ ಪ್ರಮಾಣದ ಪ್ರಾತಿನಿಧ್ಯ ದೊರಕಲಿರುವುದು ಕಳೆದ ಹತ್ತು ವರ್ಷಗಳ ಹೋರಾಟದ ಫಲವಾಗಿ. ಸದ್ಯಕ್ಕೆ ಶಸ್ತ್ರತ್ಯಾಗ ಮಾಡಲಿರುವ ಪ್ರಚಂಡರ ಪಕ್ಷವು ಜನಪರ ಹೋರಾಟಗಳಲ್ಲಿ ಮಗ್ನವಾಗಿರುವ ಪರಂಪರೆಯನ್ನು ಬಿಟ್ಟುಕೊಡುವುದಿಲ್ಲವೆಂಬ ಘೋಷಣೆ ಹೊರಬಿದ್ದಿದೆ. ರಾಜಶಾಹಿಯಿಂದ ನೈಜ ಪ್ರಜಾಪ್ರಭುತ್ವದತ್ತ ನೇಪಾಳವು ಹೆಜ್ಜೆ ಹಾಕಿದ್ದರೆ ಅದರಲ್ಲಿ ಕಮ್ಯುನಿಸ್ಟ್ ಪಕ್ಷಗಳ ಪಾತ್ರ ಮಹತ್ವದ್ದೆಂಬುದರಲ್ಲಿ ಸಂಶಯವಿಲ್ಲ.

**ಜಿ. ರಾಮಕೃಷ್ಣ**




ನವಕರ್ನಾಟಕ ಪ್ರಕಾಶನ, ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಮತ್ತು ಸಂತ ಜೋಸೆಫರ ಪದವಿ ಪೂರ್ವ ಕಾಲೇಜು ಆಶ್ರಯದಲ್ಲಿ ನಡೆದ 'ವೈದ್ಯ ಪುಸ್ತಕ ವಿಮರ್ಶಾ ಲೇಖನ ಸ್ಪರ್ಧೆ'ಯಲ್ಲಿ ವಿಜೇತರಾದವರಿಗೆ ಡಾ॥ ವಸುಂಧರಾ ಭೂಪತಿ ಬಹುಮಾನ ವಿತರಣೆ ಮಾಡಿದರು.

# ಆಕಾಶದ ಅಲೆಯ ಮೇಲೆ ಪಯಣಿಸಿದ ನಾನಿಕಾಕಾ



ಹದಿನಾಲ್ಕು ವರ್ಷಗಳ ಹಿಂದಿನ ಮಾತು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಶೋಧನ ವಿದ್ಯಾರ್ಥಿಯಾಗಿ 'ಎನ್ಕೆ – ಬದುಕು-ಬರಹ' ವಿಷಯವನ್ನು ಆಯ್ಕೆಮಾಡಿಕೊಂಡಿದ್ದೆ. ಈ ವಿಷಯವನ್ನು ಅವರಿಗೆ ತಿಳಿಸಿ ಮಾತಾಡಿಕೊಂಡು ಬರಲು ಒಂದು ಸಂಜೆ ಎನ್ಕೆ ಅವರ ಮನೆಗೆ ಹೊರಟೆ. ಮೊದಲ ಪರಿಚಯ, ಮೊದಲ ಭೇಟಿಯ ಕಸಿವಿಸಿಯ ಭಾವನೆಯೊಂದಿಗೆ ಎಮ್ಮಿಕೇರಿಯಲ್ಲಿ ಸಿಟಿ ಬಸ್ಸು ಇಳಿದೆ. ಹಿರಿಯ ಸಾಹಿತಿಗಳು, ಹೇಗೆ ಮಾತನಾಡಿಸುವುದು, ಹೇಗೆ ಹೇಳಿಕೊಳ್ಳುವುದು ಎಂಬೆಲ್ಲ ತಲೆಯಲ್ಲಿ ತುಂಬಿದ ವಿಚಾರಗಳನ್ನು ಮನಸ್ಸಿನಲ್ಲಿ ಮೆಲುಕುಹಾಕುತ್ತ ಮಾಳಮಡ್ಡಿಯ ಕಡೆಗೆ ಹೆಜ್ಜೆಹಾಕಿದೆ. ಎಮ್ಮಿಕೇರಿ ಮತ್ತು ಮಾಳಮಡ್ಡಿ ನಡುವಿನ ಇಳಿಜಾರು ರಸ್ತೆಯಲ್ಲಿ ನಾಲ್ಕು ಹೆಜ್ಜೆ ನಡೆಯುವಷ್ಟರಲ್ಲಿ ಕರಿಕೋಟು, ಪ್ಯಾಂಟು ಧರಿಸಿ ಲೀಲಾಜಾಲವಾಗಿ ನಡೆದುಬರುತ್ತಿರುವ ಎನ್ಕೆ ಕಾಣಿಸಿದರು. ರೈಲ್ವೆ ನಿಲ್ದಾಣದ ಹತ್ತಿರವಿರುವ ಮೂರನೆಯ ಮಗ ರವಿಯ ಮನೆ 'ಪರಿಮಳ'ಕ್ಕೆ ಮುಂಜಾನೆ ಹೋಗಿ ಸಂಜೆಗೆ ತಿರುಗಿ ಬರುವುದು ಎನ್ಕೆಯವರ ಅಂದಿನ ಪರಿಪಾಠ. ನಿಂತೆ. ಹತ್ತಿರ ಬಂದೊಡನೆ ನಮಸ್ಕಾರ ಎಂದೆ. ಯಾರು ? ಎಂದರು. ಹೆಸರು ಹೇಳಿದೆ. ಭೇಟಿಯಾಗಲು ಬಂದ ಕಾರಣವನ್ನೂ ಹೇಳಿದೆ. ಹಲವು ವರ್ಷಗಳಿಂದ ಪರಿಚಿತ ಇದ್ದವರೊಂದಿಗೆ ಮಾತನಾಡುವಂತೆ ಸಲುಗೆಯಿಂದ ಮಾತನಾಡುತ್ತ ಕೊಡೆಯೊಳಗೆ ಕರೆದುಕೊಂಡರು. ಧಾರವಾಡದ ತುಂತುರ ಮಳೆಯೊಂದಿಗೆ, ಹಿರಿಯ ಜೀವದ ಪ್ರೀತಿಯ ಸ್ಪರ್ಶ ಮನಸ್ಸಿಗೆ ಇನ್ನಷ್ಟು ತಂಪು ಕೊಟ್ಟಿತು. ನನ್ನ ಮೇಲೆಯೇ ಯಾಕೆ ವಿಷಯ ತೆಗೆದುಕೊಂಡಿರಿ, ಇನ್ನೂ ಸಾಕಷ್ಟು ವಿಷಯ, ವ್ಯಕ್ತಿ ಇದ್ದಾರೆ ಎಂದರು. ನಾನು, ''ನೀವು ಎಲ್ಲ ಪ್ರಕಾರದಲ್ಲಿಯೂ ಬರೆದಿದ್ದೀರಿ. ನಿಮ್ಮ ಕೃತಿಗಳ ಅಭ್ಯಾಸದ ಜೊತೆಗೆ ಕನ್ನಡ ಸಾಹಿತ್ಯದ ಹಲವು ಪ್ರಕಾರಗಳ ಅಭ್ಯಾಸವೂ ಆದಂತಾಗುತ್ತದೆಂದು ಆಯ್ಕೆಮಾಡಿಕೊಂಡೆ'' ಎಂದೆ. ಮನೆಯವರೆಗೂ ಮಾತನಾಡಿಕೊಂಡು ಹೋದೆ. ಮನೆಯ ಮಂದಿಗೆ ಪರಿಚಯ ಮಾಡಿಕೊಟ್ಟರು. ಅವರ ಬದುಕು ಬರಹ ಕುರಿತಂತೆ ಸಂಶೋಧನ ಬರಹಕ್ಕೆ ಒಪ್ಪಿಗೆ ಸೂಚಿಸಿದರು. ಸಂತೋಷ ಮತ್ತು ಧನ್ಯತೆಯ ಭಾವನೆಯೊಂದಿಗೆ ಹಿಂದಿರುಗಿದೆ. ಮೊದಲ ಭೇಟಿಯಲ್ಲಿಯೇ ಎನ್ಕೆಯವರ ಸರಳತೆ, ಸೌಜನ್ಯ, ಸ್ನೇಹಪೂರ್ಣ ಗುಣಗಳನ್ನು ಕಂಡು ಬೆರಗಾದೆ. ಮುಂದೆ ನನ್ನ ಮಹಾ ಪ್ರಬಂಧ ರಚನೆ ಮುಗಿಯುವವರೆಗೂ ನಾನು ಹಲವು ಬಾರಿ ಅವರನ್ನು ಕಂಡಿದ್ದೇನೆ. ಅವರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೇನೆ. ಅವರ ಪ್ರೀತಿ, ಸಹಾಯ ಸಹಕಾರಗಳು ಅನನ್ಯ. ದೊಡ್ಡ ಸಹಾಯವೆಂದರೆ – ಪ್ರಕಟವಾಗಿ ಉಪಲಬ್ಧವಾಗದ ಕೆಲವು ಹಳೆಯ ಕೃತಿಗಳನ್ನು ನನಗೆ ಒದಗಿಸಿದ್ದು. ಸಾಹಿತಿಯಾಗಿ ಮಾತ್ರವಲ್ಲ, ಒಬ್ಬ ಸ್ನೇಹಮಯಿ, ನಿಸ್ಪೃಹ ವ್ಯಕ್ತಿಯಾಗಿಯೂ ಎನ್ಕೆ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿದ್ದಾರೆ.

ಎನ್ಕೆಯವರು ಸಾಹಿತ್ಯದ ಹಲವು ಪ್ರಕಾರಗಳಿಂದ ಚಿರಪರಿಚಿತರು. ನಾಟಕ, ಏಕಾಂಕ, ಪ್ರಬಂಧ, ಕಾದಂಬರಿ, ಸಂಶೋಧನೆ, ವಿಮರ್ಶೆ ಮತ್ತು ಜೀವನ ಚರಿತ್ರೆಗಳಿಗೆ ಸಂಬಂಧಿಸಿದಂತೆ ವಿಪುಲ ಕೃತಿಗಳನ್ನು ರಚಿಸಿದ್ದಾರೆ. ಜನಪ್ರಿಯತೆಯ ದೃಷ್ಟಿಯಿಂದ ಮಾತ್ರವಲ್ಲದೆ ಮೌಲಿಕ ಗುಣದಿಂದಲೂ ಅವರ ಕೃತಿಗಳು ಮುಖ್ಯವೆನಿಸುತ್ತವೆ. ಏಕಾಂಕ ಮತ್ತು ಪ್ರಬಂಧಗಳಲ್ಲಿ ಹಾಸ್ಯಗಾರರಾಗಿ, ನಾಟಕ ಮತ್ತು ಕಾದಂಬರಿಗಳಲ್ಲಿ ಸಮಾಜಚಿಂತಕರಾಗಿ, ಸಂಶೋಧನೆ ಮತ್ತು ವಿಮರ್ಶನ ಕೃತಿಗಳಲ್ಲಿ ಸಮರ್ಥ ಸಂಶೋಧಕ-ವಿಮರ್ಶಕರಾಗಿ ಎನ್ಕೆ ಗಣನೀಯರಾಗುತ್ತಾರೆ. ಅವರು ತಮ್ಮ ಸಾಹಿತ್ಯ ಮತ್ತು ಪ್ರಾಂಜಲ ವ್ಯಕ್ತಿತ್ವ ಎರಡರಿಂದಲೂ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ತಮ್ಮದೇ ಆದ ಪ್ರಭಾವ ಮುದ್ರೆಯೊತ್ತಿದ್ದಾರೆ. ಅವರ ನೂರಾರು ಏಕಾಂಕಗಳು ಕೃತಿರೂಪದಲ್ಲಿಯಲ್ಲದೆ ರಂಗದ ಮೂಲಕ, ಆಕಾಶವಾಣಿಯ ಮೂಲಕ ಕನ್ನಡಿಗರನ್ನು ರಂಜಿಸಿವೆ, ನಗಿಸಿವೆ, ಅಳಿಸಿವೆ. ಹಾಸ್ಯಗುಣದೊಂದಿಗೆ ಸಮಾಜದ ಅರೆಕೊರೆಗಳನ್ನು ತಿದ್ದಿವೆ. ಅವರ ಪ್ರಬಂಧಗಳು ವ್ಯಂಗ್ಯ ವಿಡಂಬನಾತ್ಮಕ ಗುಣದೊಂದಿಗೆ ನಲಿವನ್ನು ಹಂಚುತ್ತಲೇ ಬದುಕಿನ ಹತ್ತುಹಲವು ಸಂಗತಿಗಳ, ಸಮಸ್ಯೆಗಳ ಬಗೆಗೆ ವಿಷಾದದ ಭಾವವನ್ನು ವ್ಯಕ್ತಪಡಿಸುತ್ತವೆ. ಕಾದಂಬರಿಗಳು ನಮ್ಮ ಸುತ್ತಮುತ್ತ ಕಾಣುವ ಜನಸಾಮಾನ್ಯರ ಕೌಟುಂಬಿಕ ಜೀವನಚಿತ್ರಣದಿಂದ ಹೃದ್ಯವಾಗುತ್ತವೆ. ಕನ್ನಡ ಸಾಹಿತ್ಯ ಚರಿತ್ರೆ, ಕುಮಾರವ್ಯಾಸ, ವಿ. ಕೃ. ಗೋಕಾಕ್, ದ. ರಾ. ಬೇಂದ್ರೆ, ಶ್ರೀರಂಗರಿಗೆ ಸಂಬಂಧಿಸಿದ ಸಂಶೋಧನೆ ಮತ್ತು ವಿಮರ್ಶಾ ಕೃತಿಗಳು ಶ್ರಮಪೂರ್ಣ ಮತ್ತು ವಿದ್ವತ್ಪೂರ್ಣ ಅಧ್ಯಯನ ಒಳಗೊಂಡಿವೆ. ಜೀವನ ಚರಿತ್ರೆಯ ಕೃತಿಗಳು ನಾಡಿನ ಹಲವು ಮಹಾನುಭಾವರ ಜೀವನವನ್ನು, ಜೀವನ ದರ್ಶನವನ್ನು ಅರಿತುಕೊಳ್ಳಲು ಸಹಾಯಕವಾಗಿವೆ.

ಎನ್ಕೆಯವರು ೧೯೧೬ನೇ ಆಗಸ್ಟ್ ೪ರಂದು ಗದುಗಿನಲ್ಲಿ ಜನಿಸಿದರು. ತಂದೆ ಕೃಷ್ಣರಾವ್ ಕುಲಕರ್ಣಿ. ತಾಯಿ ಸೋನುಬಾಯಿ. 'ಎನ್ಕೆ' ಎಂದೇ ಪ್ರಸಿದ್ಧರಾದ ಇವರ ಪೂರ್ಣ ಹೆಸರು ನಾರಾಯಣ ಕೃಷ್ಣರಾವ್ ಕುಲಕರ್ಣಿ. ಇವರ ತಂದೆಯವರಿಗೆ ಮೂರು ಜನ ಗಂಡು ಮಕ್ಕಳು. ಅವರಲ್ಲಿ ಎನ್ಕೆಯವರೇ ಚಿಕ್ಕವರು. ಅವರ ಪ್ರಾಥಮಿಕ ವಿದ್ಯಾಭ್ಯಾಸ ಗದುಗಿನಲ್ಲಿಯೇ ಆರಂಭವಾಯಿತು. ಕುಮಟಾ, ಹಳ್ಯಾಳ, ಹುಬ್ಬಳ್ಳಿ, ಧಾರವಾಡಗಳಲ್ಲಿಯೂ ಅವರು ಬೇರೆ ಬೇರೆ ಹಂತದ ಶಿಕ್ಷಣವನ್ನು ಪಡೆದು ಕರ್ನಾಟಕ ಕಾಲೇಜಿನಿಂದ ೧೯೩೮ರಲ್ಲಿ ಬಿ.ಎ. ಪದವಿಯನ್ನು ಆನರ್ಸ್‌ನೊಂದಿಗೆ ಪಡೆದರು. ಬಿ.ಎ. ಮುಗಿಸುವುದರೊಳಗೆ ಮದುವೆ ಸಹ ಆಗಿತ್ತು. ಈ ದಿನಗಳ ಅವರ ಮಧುರ ನೆನಪುಗಳನ್ನು ಅವರ 'ನಾನಿಯ ನೆನಹು' ಕೃತಿಯಲ್ಲಿ ಓದಿ ಆಸ್ವಾದಿಸಬೇಕು. ಮುಂದೆ ಅವರು ಶಿಕ್ಷಕರಾಗಿ, ಆಕಾಶವಾಣಿ ಕಾರ್ಯಕ್ರಮ ನಿರ್ವಾಹಕರಾಗಿ, ಪತ್ರಕರ್ತರಾಗಿ, ಅಂಕಣಕಾರರಾಗಿ ಹಲವು ರೀತಿಯಿಂದ ನಾಡಿನ ಸೇವೆ ಗೈದಿದ್ದಾರೆ. ಆಕಾಶವಾಣಿಯಲ್ಲಿ ಅವರು ಸಲ್ಲಿಸಿದ ಸೇವೆ ಸ್ಮರಣೀಯ.

ಎನ್ಕೆಯವರು ನಾಟಕಕಾರರಾಗಿ, ಹರಟೆಗಾರರಾಗಿ ಹೆಚ್ಚು ಪ್ರಸಿದ್ಧಿ ಪಡೆದವರು. ಶ್ರೀರಂಗ ಮತ್ತು ಕೈಲಾಸಂ ಅವರ ನಂತರ ಏಕಾಂಕ ಸಾಹಿತ್ಯವನ್ನು ಬೆಳೆಸಿದ ಹೆಗ್ಗಳಿಕೆ ಅವರಿಗೆ ಸಲ್ಲುತ್ತದೆ. ಅಲ್ಲದೆ ಅವರ ಏಕಾಂಕ ಸಾಹಿತ್ಯ ಅವರದೇ ಆದ ಎನ್ಕೆತನದ ಛಾಪು ಪಡೆದುಕೊಂಡಿದೆ. ಶ್ರೀರಂಗರ ಏಕಾಂಕಗಳ ವೈಚಾರಿಕತೆ, ಕೈಲಾಸಂ ಏಕಾಂಕಗಳ ವಿಡಂಬನಾ ತೀವ್ರತೆ ಈ ಎರಡೂ ಗುಣಗಳ ಸರಳೀಕೃತ ಮಿಶ್ರಣ ಎನ್ಕೆ ಅವರ ನಾಟಕಗಳಲ್ಲಿ ಕಂಡುಬರುತ್ತದೆ. ಭಾರವೆನಿಸದ ವೈಚಾರಿಕತೆ, ನವಿರಾದ ಹಾಸ್ಯ, ಸಾಮಾಜಿಕ ಕಳಕಳಿ ಇವು ಎನ್ಕೆ ನಾಟಕದ ಮುಖ್ಯ ಲಕ್ಷಣಗಳು. 'ಪ್ರಾಣತುಂಬಿದ ಪಾತ್ರ', 'ಕಸಿ ಹೃದಯ ಕಣ್ದೆರೆದಿತ್ತು', 'ಬೆಳಕು', 'ಕವಿ ಚಿರಂಜೀವಿ', 'ಕಿವಿಮಾತು' ಹಾಗೂ 'ಸಾಲಗಾರ್ತಿ' ಈ ನಾಟಕಗಳನ್ನು ಹೊರತು ಪಡಿಸಿ ಉಳಿದೆಲ್ಲವೂ ಹಾಸ್ಯ ಪ್ರಧಾನವಾದವುಗಳು. ಕೌಟುಂಬಿಕ ಜೀವನ ಚಿತ್ರಣ ಮತ್ತು ಸಮಾಜ ಚಿತ್ರಣದ ಜೊತೆಗೆ ಸ್ತ್ರೀಸಮಾನತೆ ಸ್ಪಂದಿಗುಣ ಎನ್ಕೆಯವರ ನಾಟಕದ ಇನ್ನೊಂದು ವಿಶಿಷ್ಟತೆ. 'ಸತಿವ್ರತ ಶಿರೋಮಣಿ', 'ನಾರೀ ಪ್ರಚಾರ', 'ನಡುಮನೆಯಲ್ಲಿ', 'ಲಟ್ಣೀಚಾರ್ಜು' ಇವು ಪ್ರಸಿದ್ಧ ಸ್ತ್ರೀಸಂವೇದನೆಯ ನಾಟಕಗಳು.

ಹರಟೆ, ಎನ್ಕೆ ಅವರ ಸಾಹಿತ್ಯದ ಇನ್ನೊಂದು ಪ್ರಮುಖ ಪ್ರಕಾರ. ಇವರು ರಚಿಸಿದ ಹರಟೆಗಳು ನಾಲ್ಕು ಸಂಗ್ರಹಗಳಲ್ಲಿ ಪ್ರಕಟವಾಗಿವೆ. ಅಲ್ಲದೆ ವಿವಿಧ ಪತ್ರಿಕೆಗಳ ಮೂಲಕ ಓದುಗರನ್ನು ತಣಿಸಿವೆ, 'ಹರಟೆಮಲ್ಲ' ಎಂಬ ಖ್ಯಾತಿಯನ್ನು ತಂದುಕೊಟ್ಟಿವೆ. ಹರಟೆಗಳಲ್ಲಿಯೂ ಎನ್ಕೆ ದಿನನಿತ್ಯದ ಸಾಮಾನ್ಯ ಜೀವನಕ್ಕೆ ಸ್ಪಂದಿಸುವ ಗುಣವನ್ನು ಕಾಪಾಡಿಕೊಂಡು ಬಂದಿದ್ದಾರೆ. ೧೯೪೪ರಿಂದ ಇಂದಿನ ವರೆಗೆ ಸುಮಾರು ಐದು ದಶಕಗಳ ಅವಧಿಯಲ್ಲಿ ಅವರು ಕನ್ನಡಕ್ಕೆ ಕೊಟ್ಟ ಹರಟೆಗಳು ವೈವಿಧ್ಯಪೂರ್ಣವಾದುವು. ಮೋಡಕಾ ಬಾಜಾರ, ಕಣ್ಮರೆಯಾದ ಕಾಲ್ಮರಿ, ಚಟಗಳು, ಶ್ರಾವಣದ ಕೊಳೆ, ಆ ಧರ್ಮಶಾಲೆ, ಮನವೆಂಬ ಮರ್ಕಟ, ಅತಿಥಿ ದೇವೋ ಭವ, ರದ್ದಿ ಪೇಪರ, ಮುಂಗಾಲ ಪುಟಿಗೆ ಮುಂದಾಳುಗಳು, ಹುಡುಕುವುದು.

ಡಾ॥ ಎಂ. ಬಿ. ರೇವಡಿಗಾರ

ಎನ್ಕೆಯವರ ಹಸ್ತಾಕ್ಷರ

ವೃದ್ಧಾಪ್ಯದ ವೈಭವ, ಅಂತರರಾಷ್ಟ್ರೀಯ ಮಹಾಮೂರ್ಖರ ಸಭೆ ಹಾಗೂ ತಿರಸಪ್ಪಿ ಇವು ಅವರ ಪ್ರಸಿದ್ಧ ಹರಟೆಗಳು. ಕನ್ನಡದಲ್ಲಿ ಉಳಿದ ಸಾಹಿತ್ಯ ಪ್ರಕಾರಗಳಷ್ಟು ವಿಪುಲವಾಗಿ ಬೆಳೆಯದ ಹರಟೆ ಸಾಹಿತ್ಯವನ್ನು ಬೆಳೆಸಿದ ಶ್ರೇಯಸ್ಸು ಎನ್ಕೆಯವರಿಗೆ ಅಗತ್ಯವಾಗಿ ಸಲ್ಲುತ್ತದೆ.

ಎನ್ಕೆಯವರು ನಾಟಕ ಮತ್ತು ಹರಟೆಗಳಲ್ಲಿ ಮೂಡಿಸಿದ ನಗೆಯ ಗುಣ, ಹಾಸ್ಯದ ಸ್ವರೂಪ, ಕನ್ನಡ ಹಾಸ್ಯ ಬರಹಗಾರರ ಹಾಸ್ಯದಿಂದ ಭಿನ್ನವಾಗಿ ನಿಂತು ಎನ್ಕೆತನದ ವಿಶಿಷ್ಟತೆಯನ್ನು ಮೆರೆದಿವೆ. ''ಎನ್ಕೆ ಅಪ್ರಯತ್ನಪೂರ್ವಕವಾಗಿ ತಮ್ಮ ಓದುಗರನ್ನು ನಗಿಸ ಬಲ್ಲರು. ನಗು ನಿಂತಮೇಲೆ ಆ ಕುರಿತು ಆಲೋಚಿಸುವುದು ಅನಿವಾರ್ಯವೆನಿಸುತ್ತದೆ. ಗೊರೂರು, ಕಸ್ತೂರಿ, ರಾಶಿ ಮೊದಲಾದವರ ನಗುವಿನಿಂದ ತೀರ ಬೇರೆಯಾದದ್ದು ಎನ್ಕೆಯವರು ಸೃಷ್ಟಿಸುವ ನಗು. ಅವರ ಹಾಸ್ಯ ಮೀಮಾಂಸೆ ದೀರ್ಘವಾದ ವಿಶ್ಲೇಷಣೆ ಬೇಡುತ್ತದೆ'' ಎಂದು ಹಾ. ಮಾ. ನಾಯಕರು ಒಂದೆಡೆ ಹೇಳಿದ ಅಭಿಪ್ರಾಯದಲ್ಲಿ ಎನ್ಕೆಯವರು ಸೃಜಿಸುವ ಹಾಸ್ಯ ಸ್ವರೂಪದ ನೈಜ ದೃಷ್ಟಿ ಇದೆ.

ನಾಟಕ ಮತ್ತು ಪ್ರಬಂಧ ಸಾಹಿತ್ಯದ ಮೂಲಕ ಎನ್ಕೆಯವರು ಹಂಚಿದ ನಗೆಯನ್ನು ಉಂಡು ತಣಿದ ಕನ್ನಡ ಸಾರಸ್ವತ ಲೋಕ ಅವರಿಗೆ 'ಹಾಸ್ಯ ಸಾಹಿತಿ ಎನ್ಕೆ', 'ನಗೆಗಾರ ಎನ್ಕೆ' ಎಂದು ಪಟ್ಟಗಟ್ಟಿ ಮುಕ್ತವಾಯಿತು. ಆದರೆ ಅವರ ಸಾಹಿತ್ಯದ ಇನ್ನು ಕೆಲವು ಮುಖ ಗಳನ್ನು ಅಷ್ಟಾಗಿ ಗಮನಿಸಲೇ ಇಲ್ಲ. ಎನ್ಕೆಯವರು ರಚಿಸಿದ ಕಾದಂಬರಿಗಳು, ಸಾಹಿತ್ಯ ಚರಿತ್ರೆ, ಕುಮಾರವ್ಯಾಸ ಸಂಬಂಧಿ ಕೃತಿಗಳು, ವಿಮರ್ಶಾ ಗ್ರಂಥಗಳು ಅವರ ಸಾಹಿತ್ಯದ ಬೇರೆ ಮುಖಗಳನ್ನು ಪರಿಚಯಿಸುತ್ತವೆ.

ಎನ್ಕೆಯವರು ಕಾದಂಬರಿ ಸಾಹಿತ್ಯದಲ್ಲಿಯೂ ಮಹತ್ವದ ಕೆಲಸ ಮಾಡಿದ್ದಾರೆ. ಅವರು ಹನ್ನೊಂದು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಇವರ ಎಲ್ಲ ಕಾದಂಬರಿಗಳಲ್ಲಿ ಉತ್ತರ ಕರ್ನಾಟಕದ ಮಧ್ಯಮ ವರ್ಗದ ವ್ಯಕ್ತಿಗಳ ಕೌಟುಂಬಿಕ ಜೀವನ ಅದರಲ್ಲೂ ಮುಖ್ಯವಾಗಿ ಬ್ರಾಹ್ಮಣ ಮನೆತನದ ಚಿತ್ರಣ ಕಂಡುಬರುತ್ತದೆ. ಆದ್ದರಿಂದ 'ಕಾದಂಬರಿಕಾರ ಎನ್ಕೆ' 'ಕೌಟುಂಬಿಕ ಕಾದಂಬರಿಕಾರ' ಎಂದೇ ಗುರುತಿಸಲ್ಪಡುತ್ತಾರೆ. ಜನಸಾಮಾನ್ಯ ಪಾತ್ರಗಳು, ಅವು ಅನುಭವಿಸುವ ದಿನನಿತ್ಯದ ಸರ್ವಸಾಮಾನ್ಯ ಅನುಭವಗಳು ಅವರ ಕಾದಂಬರಿಗಳಲ್ಲಿ ಪ್ರಾಧಾನ್ಯತೆಯನ್ನು ಪಡೆದಿವೆ. ಇದರಿಂದ ಕಾದಂಬರಿಗಳ ಕಥೆ ನಮ್ಮ ಅಕ್ಕ-ಪಕ್ಕದ ಪರಿಸರದಲ್ಲಿಯೇ ನಡೆಯುವ ಅನುಭವವನ್ನು ಉಂಟುಮಾಡುತ್ತವೆ. ಮಧ್ಯಮ ವರ್ಗದ ಜೀವಿಗಳ ಕೌಟುಂಬಿಕ ಜೀವನದ ಬಗೆ, ಎದುರಿಸುವ ಸಮಸ್ಯೆಗಳು ಹಾಗೂ ಆ ಸಮಸ್ಯೆಗಳಿಂದ ಮುಕ್ತವಾಗಲು ಅವರು ನಡೆಸುವ ಹೋರಾಟ ಎಂತಹದೆಂಬುದನ್ನು ತಿಳಿಸುವ ದಿಶೆಯಲ್ಲಿ ಎನ್ಕೆಯವರ ಕಾದಂಬರಿಗಳು ಯಶಸ್ಸು ಕಾಣುತ್ತವೆ. ಎನ್ಕೆಯವರ ಕಾದಂಬರಿಗಳಲ್ಲಿ 'ಗೌರೀಶಂಕರ' ಮತ್ತು 'ಕಲೋಪಜೀವಿ' ಈ ಎರಡು ಕಾದಂಬರಿಗಳು ಕೌಟುಂಬಿಕ ಜೀವನಚಿತ್ರವನ್ನು ಮೀರಿ ಉಚ್ಚ ಧ್ಯೇಯದ ಒಳಗೊಳ್ಳುವಿಕೆಗೆ ಹವಣಿಸುವುದರಿಂದ ಅವು ಉಳಿದ ಕಾದಂಬರಿಗಳಿಗೆ ಭಿನ್ನವಾಗಿ ನಿಲ್ಲುತ್ತವೆ. 'ಗೌರೀಶಂಕರ' ಸ್ವಾತಂತ್ರ್ಯ ಹೋರಾಟದ ೧೯೪೨ರ ಸಂದರ್ಭದ ಮತ್ತು ತರುವಾಯ ೧೯೭೨ರವರೆಗಿನ ಸ್ವತಂತ್ರ ಭಾರತದ ಸ್ಥಿತಿಗತಿಗಳ ಚಿತ್ರಣವನ್ನು ಹೊಂದಿದೆ. 'ಕಲೋಪಜೀವಿ' ನಿಜವಾದ ರಂಗಕಲೆಯೆಂತಹುದು, ಅದನ್ನು ಸಮಾಜದ ಒಳಿತಿಗಾಗಿ ಹೇಗೆ ಬಳಸಿಕೊಳ್ಳಬಹುದೆಂಬುದನ್ನು ಸಾರುತ್ತದೆ. ಎನ್ಕೆಯವರ ಕಾದಂಬರಿಗಳು ಬೀರುವ ಪರಿಣಾಮ ಅವರ ನಾಟಕ ಮತ್ತು ಹರಟೆಗಳ ಪರಿಣಾಮಕ್ಕಿಂತ ಭಿನ್ನವಾದುದು. ಎನ್ಕೆಯವರ ಮಾತಿನಲ್ಲಿಯೇ ಹೇಳುವುದಾದರೆ – ''ಹರಟೆ- ನಾಟಕಗಳ ಎನ್ಕೆ ಹಾಸ್ಯಗಾರನಾಗಿ ನಗಿಸುತ್ತಾನೆ. ಆದರೆ ಕಾದಂಬರಿಕಾರ ಎನ್ಕೆ ಕರುಣೆಯ ಸ್ಪರ್ಶದಿಂದ ಓದುಗರ ಮನಕರಗಿ ಕಂಬನಿ ಮಿಡಿಯುವಂತೆ ಮಾಡುತ್ತಾನೆ.'' ಹಾಗೆ ಅವರ ಕಾದಂಬರಿಗಳು ಕೌಟುಂಬಿಕ ಕರುಣೆಯನ್ನು ಸೃಜಿಸುತ್ತವೆ.

ಎನ್ಕೆಯವರ ಹತ್ತನೆಯ ಕಾದಂಬರಿ 'ದತ್ತಾಮಾಸ್ತರ' ಅವರ ಎಲ್ಲ ಕಾದಂಬರಿಗಳಲ್ಲಿ ವಿಶಿಷ್ಟವಾದುದು. ಮಾತ್ರವಲ್ಲ ಕನ್ನಡ ಕಾದಂಬರಿ ಪ್ರಪಂಚದಲ್ಲಿಯೂ ವಿಶೇಷವಾದುದು. ವರಕವಿ ದ. ರಾ. ಬೇಂದ್ರೆಯವರನ್ನು ಎನ್ಕೆ ಬಹಳ ಹತ್ತಿರದಿಂದ ಕಂಡವರು. ಹಲವು ವರ್ಷಗಳ ಒಡನಾಟ ಹೊಂದಿದವರು. ಬೇಂದ್ರೆಯವರ ಖಾಸಗಿ ಬದುಕು ಮತ್ತು ಸಾಹಿತ್ಯಿಕ ಬದುಕನ್ನು ಅವರು ಚೆನ್ನಾಗಿ ಬಲ್ಲರು. ಅಂತೆಯೇ ಬೇಂದ್ರೆಯವರ ಜೀವನವನ್ನು ಆಧರಿಸಿ ಕಾದಂಬರಿಯನ್ನು ರಚಿಸಿದವರು. ಕಾದಂಬರಿ ಲೋಕದಲ್ಲಿ ಇದೊಂದು ಹೊಸ ಪ್ರಯೋಗ ಎನ್ನಬಹುದು. ಮಹಾಕವಿಯೊಬ್ಬನನ್ನು ಕುರಿತು ರಚಿತವಾದ ಕನ್ನಡದ ಮೊಟ್ಟಮೊದಲ ಕಾದಂಬರಿ ಎಂಬ ಹೆಗ್ಗಳಿಕೆ ಇದಕ್ಕೆ ಸಲ್ಲುತ್ತದೆ.

ಒಬ್ಬ ಲೇಖಕನಲ್ಲಿ ಸೃಜನ ಮತ್ತು ಸೃಜನೇತರ ಪ್ರತಿಭೆಗಳು ಒಟ್ಟಾಗಿ ಇರುವುದು ಅಪರೂಪ. ಆದರೆ ಎನ್ಕೆಯವರಲ್ಲಿ ಈ ಎರಡೂ ಸಾಹಿತ್ಯ ಪ್ರತಿಭೆಗಳು ಸಮ್ಮಿಳಿತವಾಗಿರುವುದನ್ನು ಕಾಣಬಹುದು. ಅವರು ರಚಿಸಿದ 'ಕನ್ನಡ ಸಾಹಿತ್ಯವಾಹಿನಿ' ಹಾಗೂ ಕುಮಾರವ್ಯಾಸ ಭಾರತ ಕುರಿತು ಬರೆದ ಸಂಶೋಧನ ವಿಮರ್ಶನ ಕೃತಿಗಳು ಇದಕ್ಕೆ ನಿದರ್ಶನವಾಗಿವೆ. ರಂ. ಶ್ರೀ. ಅವರ 'ಕನ್ನಡ ಸಾಹಿತ್ಯ ಚರಿತ್ರೆ' ಪ್ರಕಟಗೊಳ್ಳುವ ಪೂರ್ವದಲ್ಲಿ ಅಂದರೆ ೧೯೪೦ರಲ್ಲಿಯೇ ಪ್ರಕಟಗೊಂಡ ಎನ್ಕೆಯವರ 'ಕನ್ನಡ ಸಾಹಿತ್ಯ ವಾಹಿನಿ' ಅಂದು ಸಾಹಿತ್ಯ ಚರಿತ್ರೆ ಅಭ್ಯಾಸಕ್ಕೆ ಉಪಯುಕ್ತ ಕೈಪಿಡಿಯಾಗಿತ್ತು. ಹಾಗೆಯೇ 'ಗದುಗಿನ ಗಂಡು ಕವಿ ಕುಮಾರವ್ಯಾಸ', 'ಕುಮಾರವ್ಯಾಸ ನಿಘಂಟು' ಮತ್ತು 'ಕನ್ನಡ ವ್ಯಾಸಭಾರತ' ಈ ಕೃತಿಗಳು ಕುಮಾರವ್ಯಾಸನ ಬಗ್ಗೆ ಎನ್ಕೆಯವರು ಹೊಂದಿದ ಪ್ರೌಢಿಮೆಗೆ ಸಾಕ್ಷಿಯಾಗಿವೆ. ಗೌರೀಶ ಕಾಯ್ಕಿಣಿಯವರು ಎನ್ಕೆಯವರನ್ನು ''ಗದುಗಿನ ವೀರನಾರಾಯಣನ ಇನ್ನೊಬ್ಬ ಲಿಪಿಕಾರ'' ಎಂದು ಕರೆದಿರುವ ನುಡಿಯಲ್ಲಿ ಅವರ ಸಂಶೋಧನ ಕಾರ್ಯದ ಉನ್ನತಿಕೆಯ ಹೊಳಹು ಇದೆ.

ಎನ್ಕೆಯವರು ರಚಿಸಿದ ಇಪ್ಪತ್ತು 'ವ್ಯಕ್ತಿಪರಿಚಯ' ಅಥವಾ 'ಜೀವನಚರಿತ್ರೆ'ಯ ಕೃತಿಗಳು ಆಯಾ ವ್ಯಕ್ತಿಗಳ ಜೀವನ ಮತ್ತು ಸಾಧನೆಯನ್ನು ತಿಳಿದುಕೊಳ್ಳಲು ಸಹಾಯಕವಾಗಿವೆ. ಅಲ್ಲದೆ ನೂರಾರು ಲೇಖನಗಳು ಸಂಪಾದಿತ ಗ್ರಂಥಗಳಲ್ಲಿ, ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪತ್ರಿಕೆಯ ಅಂಕಣಕಾರರಾಗಿ ರಚಿಸಿದ ಅಂಕಣ ಸಾಹಿತ್ಯ, ಅವರು ಆಕಾಶವಾಣಿ ಸೇವೆಯಲ್ಲಿದ್ದಾಗ ರಚಿಸಿದ್ದ ರೇಡಿಯೋ ಸಾಹಿತ್ಯ ಅಪಾರವಾದುದು. ಅವರು ಆಕಾಶವಾಣಿಗೆ ಸಲ್ಲಿಸಿದ, ಸೇವೆ ಕೊಟ್ಟ ಕೊಡುಗೆ ಅಮೂಲ್ಯವಾದದ್ದು. ಸೇವೆಯಲ್ಲಿ ಇರುವವರೆಗೆ ಅವರು ಆಕಾಶವಾಣಿಯ ಜೀವನಾಡಿಯೇ ಆಗಿದ್ದರು. ರೇಡಿಯೋದಲ್ಲಿ ಪ್ರಸಾರವಾಗುತ್ತಿದ್ದ ಹರಟೆ, ಕವನ, ನಾಟಕ, ರೂಪಕ, ಸಂಭಾಷಣೆ ಇನ್ನಾವುದೇ ಇರಲಿ ಎನ್ಕೆ ಅದರಲ್ಲಿ ಪಾತ್ರಧಾರಿಗಳಾಗಿ ಇರುತ್ತಿದ್ದರು ಇಲ್ಲವೆ ಲೇಖಕರಾಗಿರುತ್ತಿದ್ದರು. ಆಕಾಶವಾಣಿಯಲ್ಲಿ ಇಂದಿಗೂ ತೇಲಿಬರುವ 'ಗೃಹಗೋಷ್ಠಿ', 'ಗಿಳಿವಿಂಡು', 'ಗೃಹಲಕ್ಷ್ಮಿ', 'ವಿಚಾರದೀಪಿಕೆ' ಮೊದಲಾದ ಪದಗಳನ್ನು ಎನ್ಕೆಯವರೇ ಟಂಕಿಸಿದ್ದಾರೆ. ದೇಶದ ಇಲ್ಲವೆ ಜಗತ್ತಿನ ಯಾವುದೇ ಮಹತ್ವದ ಘಟನೆಗೆ ತುರ್ತಾಗಿ ಸ್ಪಂದಿಸುವ ಮತ್ತು ಅದನ್ನು ಕುರಿತು ಕಾರ್ಯಕ್ರಮ ಸಂಯೋಜಿಸಿ ಬಿತ್ತರಿಸುವ ಸಮಯೋಚಿತ ಕೌಶಲ್ಯ ಎನ್ಕೆ ಅವರಲ್ಲಿ ಇತ್ತು. ನೀಲ್ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ಇಳಿಯುತ್ತಿದ್ದಂತೆ ಅವರು ರೇಡಿಯೋದಲ್ಲಿ ಬಿತ್ತರಿಸಿದ 'ತಿಂಗಳ ಲೋಕದ ಅಂಗಳಕೇರಿ' ಕಾರ್ಯಕ್ರಮ ಇದಕ್ಕೆ ಉತ್ತಮ ನಿದರ್ಶನ. ಈ ಕಾರ್ಯಕ್ರಮವನ್ನು ಆಲಿಸಿದವರು ಅಂದು ರೋಮಾಂಚನಕ್ಕೆ ಒಳಗಾಗಿದ್ದರು.

ಹೀಗೆ ಎನ್ಕೆಯವರಿಂದ ಕನ್ನಡ ನಾಡು-ನುಡಿಗೆ ಬಹುಮುಖ ಸೇವೆ ಸಂದಿದೆ. ತಮ್ಮ ಬದುಕಿನ ಕೊನೆಯ ಗಳಿಗೆಯವರೆಗೆ ಅವರ ಕ್ರಿಯಾಶೀಲತೆ, ಮುಖದ ಮೇಲೆ ಲಾಸ್ಯವಾಡುವ ನಗು, ಆಪ್ತರು, ಅಭಿಮಾನಿಗಳೊಂದಿಗೆ ಮುಕ್ತವಾಗಿ ಬೆರೆಯುವ, ಹರಟುವ ಬಗೆ ಬೆರಗುಗೊಳಿಸುವಂತಿತ್ತು. ಅಂತಹ ಸರಳ-ಸಜ್ಜನಿಕೆಯ, ಸ್ನೇಹಜೀವಿ ಎನ್ಕೆ ದೈಹಿಕವಾಗಿ ಅಗಲಿಹೋಗಿದ್ದಾರೆ. ಆದರೆ ಅವರ ಅಪಾರ ಸಾಹಿತ್ಯದಿಂದ ಅವರ ಸಂಬಂಧ, ಅವರ ನೆನಪು ಸದಾ ನಮ್ಮ ಜೊತೆಗೆ ಇರುತ್ತದೆ.

ಡಾ|| ಎಂ. ಬಿ. ರೇವಡಿಗಾರ
ಪ್ರಧಾನ ಅಂಚೆ ಕಚೇರಿ ಹಿಂದೆ, ಬಾಗಲಕೋಟೆ - ೫೮೭ ೧೦೧

# ಕೊನೆಯ ಕೊಠಡಿಯ ಹುಡುಗಿ

ಎ. ಎಸ್. ಎಸ್. ಶಾಸ್ತ್ರಿ

''ನಾನು ಮಿಸೆಸ್ ಆರ್ಮುಗಂ'' ಎಂದು ಮುಂದೆ ಬಂದು ನಿಂತದ್ದು ದರ್ಪವೇ ಮೂರ್ತಿವೆತ್ತಂತಹ ಒಬ್ಬ ಮಹಿಳೆ. ಅವಳನ್ನು ನೋಡಿಯೇ ನೀವು ಬೆಚ್ಚಿಬೀಳುತ್ತೀರಿ. ಬಾಡಿಗೆಗಾಗಿ ಸಣ್ಣ ಕೊಠಡಿಯೊಂದು ನಿಮಗೆ ತುರ್ತಾಗಿ ಬೇಕಾಗಿದೆ. ಅದಕ್ಕೆಂದೇ ಕೋಲಾರದ ಗಲ್‌ಪೇಟೆಯ ಸಂದಿಗೊಂದಿಗಳಲ್ಲಿ ರೂಂ ಹುಡುಕುತ್ತಾ ಅಲೆಯುತ್ತಿದ್ದೀರಿ. ಎಲ್ಲೂ ರೂಂ ಸಿಗದೆ, ''ಮಿಸೆಸ್ ಆರ್ಮುಗಂ ವಠಾರದಲ್ಲಿ ಕೇಳಿದಿರಾ'' ಎಂದು ಹಲವರ ಬಾಯಲ್ಲಿ ಹೇಳಿಸಿಕೊಂಡನಂತರ, ನೋಡಿಯೇ ಬಿಡುವಾ ಎಂಬ ದೃಢ ನಿರ್ಧಾರದಿಂದ, ನೀವು ಅಡ್ರೆಸ್ ಹುಡುಕಿಕೊಂಡು ಬಂದಾಗ ನಿಮ್ಮ ಮುಂದೆ, ''ನಾನು ಮಿಸೆಸ್ ಆರ್ಮುಗಂ'' ಎನ್ನುವ ಮಹಿಳೆ ನಿಂತಿದ್ದಾಳೆ.

ಹೌದು ! ಅವಳು ತನ್ನ ಹೆಸರನ್ನು ಎಂದೂ ಹೇಳಿಲ್ಲ. ಮಿಸೆಸ್ ಸೇರಿಸಿ ತನ್ನ ಗಂಡನ ಹೆಸರನ್ನೇ ಹೇಳುತ್ತಾಳೆ. ಇಂದು ಅವಳಿಗಿರುವ ಆಸ್ತಿಯೆಲ್ಲವೂ ದಿವಂಗತ ಆರ್ಮುಗಂರವರಿಂದಲೇ ಬಂದದ್ದು. ಆದ್ದರಿಂದಲೇ ಹೀಗೆ ಹೇಳಿಕೊಳ್ಳುತ್ತಾಳೋ ಏನೋ ?

ಅದಿರಲಿ, ರೂಂ ಹುಡುಕಿಕೊಂಡು ಬರುವ ನಮ್ಮ ನಿಮ್ಮಂತಹವರಿಗೆ ಮಿಸೆಸ್ ಆರ್ಮುಗಂ ತನ್ನ ವಠಾರದಲ್ಲಿರುವ ರೂಂಗಳನ್ನು ತಾನೇ ನಿಂತು ತೋರಿಸುತ್ತಾಳೆ. ರೈಲಿನ ಬೋಗಿಗಳಂತೆ ಒಂದರ ಹಿಂದೊಂದು ಜೋಡಿಸಿದ ಕೊಠಡಿಗಳನ್ನು ಬಾಡಿಗೆದಾರರಿಗೆ ತೋರಿಸುವ ವೈಖರಿಯನ್ನು ನೀವು ತಿಳಿದುಕೊಳ್ಳಲೇಬೇಕು. ಗೇಟನ್ನು ಹಿಂದೆ ಸರಿಸಿ ಮುಂದಡಿಯಿಟ್ಟರೆ, ಎಡ ಬಲಗಳಲ್ಲಿ ರೂಂಗಳ ಸಾಲು ಕಾಣುತ್ತದೆ. ಎಡಗಡೆಯ ಮೊದಲ ರೂಮನ್ನು ಮಿಸೆಸ್ ಆರ್ಮುಗಂ ವಿವರಿಸುವುದು ಹೀಗೆ : ''ಇದು ವಾಸ್ತುವಿನ ಪ್ರಕಾರ ಅತ್ಯಂತ ಅದೃಷ್ಟದ ರೂಂ. ಇಲ್ಲಿ ವಾಸವಾಗಿದ್ದವರೆಲ್ಲರೂ ಜೀವನದಲ್ಲಿ ಯಶಸ್ಸು ಗಳಿಸಿದ್ದಾರೆ. ಡೆಂಟಿಸ್ಟ್ ಬದರಿಯವರು ಈಗ ಹೇಗಿದ್ದಾರೆ ನೋಡಿ.''

''ಯಾರು ? ಪ್ರಸಿದ್ಧ ಡೆಂಟಿಸ್ಟ್ ಬದರಿನಾಥ್‌ರವರೇ'' ಎಂದು ನೀವು ಕೇಳಬೇಕೆಂದು ಮಿಸೆಸ್ ಆರ್ಮುಗಂ ಬಯಸುತ್ತಾರೆ. ನೀವು ಕೇಳದಿದ್ದರೂ ಅವರೇ ಮುಂದುವರೆದು, ''ಅವರಿಗೆ ಈಗ ವಾರಕ್ಕೆ ೨೫,೦೦೦ ರೂಪಾಯಿಗಳ ವರಮಾನವಿದೆ. ಈ ರೂಂ ಬಿಟ್ಟುಕೊಡಲು ಅವರಿಗೆ ಇಷ್ಟವೇ ಇರಲಿಲ್ಲ. ಆದರೆ ಈಗ ಕಮ್ಯುನಲ್ ಪ್ರಾಬ್ಲಮ್ ಜಾಸ್ತಿ ಆಗಿಬಿಟ್ಟಿದ್ದರಿಂದ ಅವರು ಹೊರಟುಹೋದರು.

ಹೌದು, ಕಮ್ಯುನಲ್ ಪ್ರಾಬ್ಲಂನಿಂದಾಗಿಯೇ ಅನೇಕರು ರೂಂಗಳನ್ನು ಬದಲಾಯಿಸುತ್ತಿದ್ದಾರೆ. ಅದೇನೋ ಹೆದರಿಕೆ. ತಮ್ಮವರೊಂದಿಗೆ ಇದ್ದರೆ ಪೂರ್ಣ ರಕ್ಷಣೆಯಿದ್ದ ಹಾಗೆಂದು ಅವರಿಗೆ ಅನ್ನಿಸಿರಬಹುದು. ''ಇದಕ್ಕೆ ಬಾಡಿಗೆ ತಿಂಗಳಿಗೆ ೨೦೦೦ ರೂಪಾಯಿ.'' ಆಗ ಮಿಸೆಸ್ ಆರ್ಮುಗಂ ನಿಮ್ಮ ಮುಖ ನೋಡುತ್ತಾರೆ. ನಿಮ್ಮ ಮುಖದ ಬಣ್ಣದಲ್ಲಿಯೇ ಅವರು, ನಿಮಗೆ ಇಷ್ಟು ಬಾಡಿಗೆ ತೆರುವ ಯೋಗ್ಯತೆಯಿಲ್ಲ ಎಂದು ತೀರ್ಮಾನಿಸಿ, ಮುಂದಡಿಯಿಡುತ್ತಾರೆ.

ನೀವು ಮೌನವಾಗಿ ಹಿಂಬಾಲಿಸುತ್ತೀರಿ.



''ಈ ರೂಂನಲ್ಲಿ ಸಿನೆಮಾ ಸ್ಕ್ರಿಪ್ಟ್ ರೈಟರ್ ಇದ್ದಾರೆ. ಶಂಕರಮೂರ್ತಿ ಎಂದು ಅವರ ಹೆಸರು'' ಎನ್ನುತ್ತಾರೆ ಮಿಸೆಸ್ ಆರ್ಮುಗಂ.

ನೀವು, ''ಓಹೋ ! ಧಾರಾವಾಹಿಗಳ ಡೈಲಾಗ್ ರೈಟರ್ ಮೂರ್ತಿಗಳೇ'' ಎಂದೆನ್ನುವಿರಿ.

''ಮಿಸ್ಟರ್ ಮೂರ್ತಿ'' ಎಂದು ಆರ್ಮುಗಂ ಕರೆಯುವರು.

ಆಗ ಮುಗಳ್ನಗೆಯ, ಧೋತಿ ಉಟ್ಟ ಮೂರ್ತಿ ಕಿಟಕಿಯಿಂದ 'ಹಲ್ಲೋ' ಎನ್ನುತ್ತಾರೆ. ಆದರೆ ಮಿಸೆಸ್ ಆರ್ಮುಗಂ ಪ್ರತಿಯಾಗಿ ಉತ್ತರಿಸದೆ, ಕೇರ್ ಮಾಡದಂತೆ ಇರುತ್ತಾರೆ. ಮೂರ್ತಿಯವರು ಮೂರು ತಿಂಗಳ ಬಾಡಿಗೆ ಉಳಿಸಿಕೊಂಡಿರುವ ಸಂಗತಿ ಅವರಿಗೆ ನೆನಪಿನಲ್ಲಿದೆ.

''ಈ ರೂಂಗೆ ೧೦೦೦ ರೂಪಾಯಿ ಬಾಡಿಗೆ'' ಎನ್ನುತ್ತಾರೆ ಮಿಸೆಸ್ ಆರ್ಮುಗಂ. ಮತ್ತೆ ನಿಮ್ಮ ಮುಖ ನೋಡಿ ಇದು ನಿಮ್ಮ ಕಿಸೆಗೆ ಭಾರವಾಗುತ್ತದೆಂದು ಅನ್ನಿಸಿದರೆ ಮುಂದೆ ಕರೆದೊಯ್ಯುತ್ತಾರೆ.

ಇನ್ನುಳಿದ ಎರಡು ರೂಂಗಳಲ್ಲಿ ಪ್ರೈಮರಿ ಶಾಲೆಯ ಟೀಚರುಗಳಿದ್ದಾರೆ. ಒಬ್ಬಳು ವಿಧವೆ. ಇನ್ನೊಬ್ಬರು ಮದುವೆಯಾಗದ ೫೦ ವರ್ಷದ ಮೇಸ್ಟ್ರು. ಇವರಿಬ್ಬರೂ ತಲಾ ೭೫೦ ರೂಪಾಯಿ ಬಾಡಿಗೆ ತೆರುತ್ತಾರೆ. ಇನ್ನೊಂದು ರೂಂ ಇಲ್ಲಿ ಖಾಲಿ ಇದೆ. ಅದಕ್ಕೂ ೭೫೦ ರೂಪಾಯಿ ಬಾಡಿಗೆಯೆಂದು ಮಿಸೆಸ್ ಆರ್ಮುಗಂ ತಿಳಿಸುತ್ತಾರೆ. ಈ ರೂಂನ ನಂತರ ಟಾಯ್ಲೆಟ್ ಸಂಕೀರ್ಣ ಇದೆ. ಇಲ್ಲಿಂದ ಮುಂದಕ್ಕೆ ಮಿಸೆಸ್ ಆರ್ಮುಗಂ ಬರುವುದಿಲ್ಲ. ಕೊನೆಯಲ್ಲೊಂದು ರೂಂ ಇದೆ. 'ಲಕ್ಷ್ಮೀ' ಎಂದು ಆರ್ಮುಗಂ ಕಿರಿಚುತ್ತಾರೆ. ಮನೆ ಕೆಲಸ ಮಾಡುತ್ತಿರುವ ಲಕ್ಷ್ಮಿ ಬರುತ್ತಾಳೆ. ''ಇವರಿಗೆ ಆ ಕೊನೆಯ ಕೊಠಡಿಯನ್ನು ತೋರಿಸು'' ಎಂದು ಹೇಳಿ ಮಿಸೆಸ್ ಆರ್ಮುಗಂ ಹೊರಡುತ್ತಾರೆ.

ಕೆಲಸದವಳು ಕೊಠಡಿಯ ಬಾಗಿಲು ತೆರೆಯುವಾಗಲೇ, ಬಹಳ ವರ್ಷಗಳಿಂದ ರೂಮಿನಲ್ಲಿ ಯಾರೂ ವಾಸಿಸದಿರುವ ಸಂಗತಿ ನಿಮಗೆ ಗೊತ್ತಾಗುತ್ತದೆ. ಜೊತೆಗೆ ಬೇಯಿಸಿದ ರೇಷ್ಮೆಗೂಡಿನ ದರಿದ್ರ ವಾಸನೆ ಮೂಗಿಗೆ ಬಡಿಯುತ್ತದೆ. ಏಕೆಂದರೆ ಈ ವಠಾರದ ಹಿಂದೆ ರೇಷ್ಮೆ ಗೂಡುಗಳನ್ನು ನೀರಿಗೆ ಹಾಕಿ ಬೇಯಿಸಿ ದಾರ ತೆಗೆಯುವ ಉದ್ದಿಮೆಯೊಂದಿದೆ. ''ಈ ರೂಮಿಗೆ ೩೦೦ ರೂಪಾಯಿ ಬಾಡಿಗೆ, ಅಯ್ಯಾ'' ಎಂದು ಲಕ್ಷ್ಮಿ ಹಲ್ಲುಕಿರಿಯುತ್ತಾಳೆ.

* * *

ಮಿಸೆಸ್ ಆರ್ಮುಗಂಳ ವಠಾರವಿರುವುದು ಗಲ್‌ಪೇಟೆಯ ಕೊನೆಯಲ್ಲಿ. ಅಂದರೆ ಮುಸಲ್ಮಾನರು ವಾಸಿಸುವ ಮೊಹಲ್ಲಾದ ಹತ್ತಿರ. ಕೋಲಾರದಲ್ಲಿ ರೇಷ್ಮೆ ಉದ್ದಿಮೆ ನಗರದ ಅರ್ಧ ಜನದ ಕಸುಬು. ಇವರಲ್ಲಿ ಮುಸಲ್ಮಾನರದ್ದೇ ಮೇಲುಗೈ. ರೇಷ್ಮೆಗೂಡಿನಿಂದ ದಾರ ತೆಗೆಯುವುದರಿಂದ ದಾರ ಸುತ್ತುವವರೆಗೆ ಬೇರೆ

ಯಾರ ಕೈಯೂ ಇರುವುದಿಲ್ಲ. ನಂತರ ದಾರವನ್ನು ಹುರಿ ಮಾಡುವುದು, ಬಣ್ಣ ಹಾಕುವುದು ಇನ್ನಿತರ ಹಂತಗಳಲ್ಲಿ ಎಲ್ಲ ಜಾತಿಯ ಜನರೂ ಇರುತ್ತಾರೆ. ರೇಷ್ಮೆದಾರವನ್ನು ಟ್ವಿಸ್ಟಿಂಗ್ ಮಾಡುವುದು ಬಲು ನಾಜೂಕಿನ ಕೆಲಸ. ಭಾರಿ ಯಂತ್ರಗಳನ್ನು ಬಳಸಲಾಗುವ, ಬಂಡವಾಳ ಜಾಸ್ತಿ ಬೇಕಾಗುವ ಉದ್ದಿಮೆ. ರೇಷ್ಮೆನೂಲು ಬಿಕರಿಯಾಗುವುದು ಬೆಂಗಳೂರಿನಲ್ಲಿ. ಹಾಗಾಗಿ ನೂಲು ತಯಾರಿಸುವವರು, ನೂಲನ್ನು ದಾಸ್ತಾನು ಮಾಡುವವರು, ಬೆಂಗಳೂರಿಗೆ ಹೊತ್ತು ಕೊಂಡುಹೋಗಿ, ಬಿಕರಿ ಮಾಡುವವರು – ಹೀಗೆ ರೇಷ್ಮೆ ಉದ್ದಿಮೆ ಸಹಸ್ರಾರು ಜನರಿಗೆ ಕೈತುಂಬ ಕೆಲಸ ನೀಡುತ್ತದೆ. ಇಲ್ಲೆಲ್ಲೂ ಜಗಳ ಬಾರದು, ಇವರೆಲ್ಲರೂ ಸಹಸ್ರಾರು ರೂಪಾಯಿ ಬಂಡವಾಳ ಹೂಡುವ ಸಾಹುಕಾರರು. ಜಗಳ ಕದನಗಳೆಲ್ಲಾ ಕೆಳ ಹಂತದ – ರೇಷ್ಮೆಗೂಡು ತಂದು ಮಾರುವ, ಮಾರುಕಟ್ಟೆಗೆ ಮೀಸಲು.

ಹಿಪ್ಪುನೇರಳೆ ಸೊಪ್ಪನ್ನು ರೇಷ್ಮೆ ಹುಳುಗಳಿಗೆ ತಿನ್ನಿಸಿ, ಅದಕ್ಕೆ ರೋಗ ಬರದಂತೆ, ಊಜಿ ನೊಣ ಬೀಳದಂತೆ ಕಾಪಾಡಿ, ಗೂಡು ಕಟ್ಟಿಸಿ ಮಾರುಕಟ್ಟೆಗೆ ತರುವವರು ಸುತ್ತಲಿನ ಹಳ್ಳಿಯ ರೈತಾಪಿ ಜನ. ಇವರೆಲ್ಲ ಭೂಮಿ ಇರುವ, ನೀರಾವರಿ ಇರುವ ಹಿಂದೂ ರೈತರು. ರೇಷ್ಮೆಗೂಡನ್ನು ಮಾರ್ಕೆಟ್‌ನಲ್ಲಿ ಕೊಳ್ಳುವ ಜನ ರೀಲರ್‌ಗಳು. ರೇಷ್ಮೆಗೂಡನ್ನು ಖರೀದಿಸಿ, ನೀರಿನಲ್ಲಿ ಹಾಕಿ ಬೇಯಿಸಿ, ರೇಷ್ಮೆದಾರ ಹೊರಗೆಳೆದು ಅದನ್ನು ಸುತ್ತಿ ಇಡುವ ಜನ ಮುಸಲ್ಮಾನರು. ಇದು ಕಷ್ಟದ ಕೆಲಸ. ಗಂಟೆಗಟ್ಟಲೆ ಒಲೆಯ ಮುಂದೆ ಕೂತು, ತಲೆ ಸುತ್ತಿ ಬರುವವರೆಗೂ ಚಕ್ರ ಗರಗರನೆ ತಿರುಗಿಸಿ, ದಾರ ತೆಗೆಯುವ ಕೆಲಸವನ್ನು ನೋಡಿಯೇ ತಿಳಿಯಬೇಕು. ಕುದಿಯುವ ನೀರಿನಲ್ಲಿ ಕೈಹಾಕಿ ಕಣ್ಣಿಗೆ ಕಾಣಸಿಗದ ರೇಷ್ಮೆದಾರ ಹಿಡಿಯುವ ಕೌಶಲ್ಯವನ್ನು ವಿವರಿಸಲು ಅಸಾಧ್ಯ. ಇಂತಹ ಕೂಲಿಯಾಳುಗಳಿಗೆ ಉಗುರು ಬೆಳೆಯುವುದಿಲ್ಲ. ಇವರು ಕೈ ಬೆರಳುಗಳಲ್ಲಿ ಊಟ ಮಾಡಲಾಗುವುದಿಲ್ಲ. ಖಾರ ಕೈಗೆ ಸೋಕಿದರೆ ಬಾಯಿ ಬಡಿದುಕೊಂಡಾರು. ಹೀಗೆ ತಯಾರಾಗುತ್ತದೆ ನಮ್ಮ ಕೋಲಾರದ ರೇಷ್ಮೆ. ಊರ ಹೊರಗೆ ಮುನಿಸಿಪಾಲಿಟಿಯವರು ಬರೆಸಿದ ಬೋರ್ಡು ಹೀಗಿದೆ: ''ರೇಷ್ಮೆ, ಹಾಲು ಮತ್ತು ಚಿನ್ನದ ನಾಡು.''

ರೇಷ್ಮೆ ಮಾರ್ಕೆಟ್‌ನಲ್ಲೇ ಶುರುವಾದದ್ದು ಗಲಾಟೆ. ಗೂಡು ಮಾರುವ ರೈತರು, ಸರಿಯಾದ ತ್ರಾಸುಗಳಿಲ್ಲ, ಮೋಸವಾಗುತ್ತಿದೆ ಎಂದು ಕೂಗಿದರು. ಕೊಳ್ಳುವ ರೀಲರ್‌ಗಳು ಎಲ್ಲ ಕಡೆಗೂ ಇದೇ ರೀತಿ ಇದೆ ಎಂದರು. ಇಬ್ಬರೂ ಕೈ ಕೈ ಮಿಲಾಯಿಸಿದರು. ಇವರ ಜೊತೆಗೆ ನಾವೆಲ್ಲಿ ತೂರೋಣ ಎಂದು ಕಾಯುತ್ತಿದ್ದ ರಾಮಮಂದಿರ ಚಳುವಳಿಯ ರಾಮ ಭಕ್ತರು ಕೂಡಿಕೊಂಡರು. ನಂತರ ಆದದ್ದು ೭೦ ದಿನದ ಕರ್ಫ್ಯೂ. ಕೋಲಾರದ ಜನಜೀವನವೇ ಅಸ್ತವ್ಯಸ್ತವಾಗಿ ಹೋಯ್ತು. ಹೀಗೆ ಶುರುವಾಯ್ತು ಕಮ್ಯುನಲ್ ಪ್ರಾಬ್ಲಮ್ಮು.

ಆಗ ವಠಾರಗಳಲ್ಲಿ ಬಾಡಿಗೆಗೆ ಇದ್ದವರೂ ಇದರಿಂದ ಪ್ರಭಾವಿತರಾಗಬೇಕಾಯ್ತು. ಹಿಂದೂಗಳ ಬಡಾವಣೆಗಳಲ್ಲಿ ವಾಸವಾಗಿದ್ದ ಮುಸಲ್ಮಾನರು ಮನೆ ಬಿಟ್ಟರು. ಅದೇನೋ ಹೆದರಿಕೆ ತಾಂಡವವಾಡತೊಡಗಿತು. ಎಲ್ಲಕ್ಕೂ ಮಿಗಿಲಾಗಿ ಸುಳ್ಳು ಸುದ್ದಿಗಳು ಬಹಳ ಬೇಗ ಜನತೆಯನ್ನು ಆವರಿಸಿಕೊಂಡವು.

ಹೀಗೆ ಯಾವಾಗಲೂ ಖಾಲಿಯಿರದ ಮಿಸೆಸ್ ಆರ್ಮುಗಂಳ ವಠಾರದಲ್ಲಿ ಕೆಲವು ರೂಂಗಳು ಭಣಗುಟ್ಟ ತೊಡಗಿದವು. ಇದರ ಜೊತೆಗೆ ಮಿಸೆಸ್ ಆರ್ಮುಗಂಳ ತಲೆಯಲ್ಲಿ ಮೊದಲೆಂದೂ ಇರದ ಆಲೋಚನೆ ನುಸುಳಿತ್ತು. ''ನಾನು ಇನ್ನು ಮುಂದೆ ಮುಸಲ್ಮಾನರಿಗೆ ಬಾಡಿಗೆಗೆ ರೂಂ ಕೊಡುವುದಿಲ್ಲ'' ಎಂದು ಹೇಳಿದ ಮಿಸೆಸ್ ಆರ್ಮುಗಂಗೆ, ಯಾವ ಮುಸಲ್ಮಾನ ಬಾಡಿಗೆದಾರರೂ ತೊಂದರೆ ಮಾಡಿರಲಿಲ್ಲ. ಆದರೆ ಅವಳಿಗೆ ಕೋಮುವಾದಿಗಳ ಭಯವಿತ್ತು. ರೂಂ ನೀಡಿದರೆ ಇವರು (ಕೋಮುವಾದಿಗಳು) ಎಲ್ಲಿ ಬಂದು ತಗಾದೆ ತೆಗೆಯುವರೋ ಎಂಬ ಹೆದರಿಕೆ.

* * *

''ನನ್ನ ಹೆಸರು ಭಾನು'' ಎಂದು ತೆಳ್ಳಗೆ, ಬೆಳ್ಳಗೆ ಬಿಳಿಚಿಕೊಂಡ ಹುಡುಗಿ ಮಿಸೆಸ್ ಆರ್ಮುಗಂ ಮುಂದೆ ನಿಂತು, ''ನನಗೊಂದು ವಾಸದ ಕೊಠಡಿ ಬೇಕಾಗಿತ್ತು'' ಎಂದಳು ಜೊತೆಯಲ್ಲಿ ಅವಳ ತಂದೆಯೆನ್ನಬಹುದಾದ ವ್ಯಕ್ತಿ ಇದ್ದ. ಅವನೇನೂ ಮಾತನಾಡಲಿಲ್ಲ.

ಯಥಾಪ್ರಕಾರ ಮಿಸೆಸ್ ಆರ್ಮುಗಂ ತನ್ನ ದರ್ಪ ಪ್ರದರ್ಶಿಸುತ್ತಾ ರೂಂಗಳನ್ನು ತೋರಿಸಿ ವ್ಯಾಖ್ಯಾನ ಶುರು ಮಾಡಿದಳು.

''ಅಯ್ಯೋ ನನಗೆ ಅಷ್ಟೊಂದು ಅದೃಷ್ಟವಿಲ್ಲ'' ಎಂದಳು ಮೊದಲ ರೂಂ ನೋಡಿದ ಭಾನು.

ಮಿಸೆಸ್ ಆರ್ಮುಗಂನ ತಾತ್ಸಾರದ ಮುಖಭಾವನೆಯನ್ನು ಭಾನು ಗಮನಿಸಿದಳು.

ನಂತರ ೧೦೦೦ದ ಹಾಗೂ ೭೫೦ ರೂಪಾಯಿಗಳ ಬಾಡಿಗೆಯ ರೂಂಗಳು ತನಗೆ ಬೇಡವೆಂದಳು. 'ಲಕ್ಷ್ಮೀ' ಎಂದು ಕೆಲಸದವಳನ್ನು ಮಿಸೆಸ್ ಆರ್ಮುಗಂ ಕರೆದಾಗ ಭಾನು ಕೊನೆಯ ಕೊಠಡಿಗೆ ತೆರಳಿದ್ದಾಳೆಂದು ಖಾತ್ರಿಯಾಯ್ತು. ''ಇದಕ್ಕೆ ೩೦೦ ರೂಪಾಯಿ ಬಾಡಿಗೆ ಕಣಮ್ಮಾ'' ಎಂದಳು ಲಕ್ಷ್ಮಿ.

''ಇರಲಿ ಬಿಡಿ, ಇದೇ ರೂಂ ಸಾಕು'' ಎಂದು ನಿಟ್ಟುಸಿರುಬಿಟ್ಟಳು ಭಾನು.

ಅಂದಿನಿಂದ ವಠಾರದ ನಿವಾಸಿಗಳಿಗೆ ಮಿಸೆಸ್ ಆರ್ಮುಗಂಳ ದರ್ಪದ ಮಾತುಗಳಿಗಿಂತಲೂ, ಮುಗ್ಧ ಮನಸ್ಸಿನ ಯುವತಿಯ ಅರಳು ಹುರಿದಂತಹ ಮಾತುಗಳು ಆಪ್ಯಾಯಮಾನವಾದವು. ಭಾನುವಿನ ತಂದೆಯಂತಿದ್ದವನು ಮತ್ತೆ ಬರಲಿಲ್ಲ.

ಪ್ರತಿದಿನ ಸಂಜೆ ೪ ಗಂಟೆಗೆ ರೂಂ ತಲುಪಿ ತನ್ನ ಕೆಲಸ ಮುಗಿಸಿ, ಬೇಯಿಸಿದ ರೇಷ್ಮೆಯ ಗೂಡುಗಳ ವಾಸನೆಯನ್ನು ತಪ್ಪಿಸಿಕೊಳ್ಳಲು ವಠಾರದ ಮಧ್ಯಭಾಗಕ್ಕೆ, ಅಂದರೆ ಮೂರ್ತಿ (ಫಿಲ್ಮ್ ಸ್ಕ್ರಿಪ್ಟ್ ರೈಟರ್) ರೂಮಿನ ಹತ್ತಿರ ಕುಳಿತು (ಆಗ ಮೂರ್ತಿ ಇರುವುದಿಲ್ಲ. ಅವನ ಬೆಳಗಿನಿಂದ ಧಾರಾವಾಹಿಗಳಿಗೆ ಬರೆದ ಕಂತುಗಳನ್ನು ಕೊರಿಯರ್ ಮಾಡಲು ಹೋಗಿರುತ್ತಾನೆ) ಇಬ್ಬರು ಟೀಚರುಗಳೊಂದಿಗೆ ಹರಟುವುದು ನಿತ್ಯದ ಕಾರ್ಯಕ್ರಮವಾಯ್ತು. ಸುಮಾರು ಏಳು ಗಂಟೆಗೆ ಮೂರ್ತಿಯವರೂ ಬಂದು ಹರಟೆಗೆ ಸೇರುತ್ತಿದ್ದರು. ಮಾತು ಎಂದರೆ ಅಂದಿನ ದಿನಗಳಲ್ಲಿ ಕೋಮುಗಲಭೆಗಳದ್ದೇ ಮಾತು. ಅಲ್ಲಿ ಹೀಗಾಯಿತಂತೆ, ಇಲ್ಲಿ ರಾಮಭಕ್ತರು ಮೆರವಣಿಗೆ ಮಾಡಿದರಂತೆ, ಅಲ್ಲಿ ಹೊಡೆದರಂತೆ – ಇತ್ಯಾದಿ.

ವಠಾರದಲ್ಲಿಯೂ ಎಲ್ಲರಿಗೂ ಮುಸಲ್ಮಾನರ ಬಗ್ಗೆ ಒಳ್ಳೆಯ ಅಭಿಪ್ರಾಯಗಳೇನೂ ಇರದಿರುವುದನ್ನು ಭಾನು ಗಮನಿಸಿದಳು. ಭಾನುವಿಗೆ ಮುಸಲ್ಮಾನರ ಬಗ್ಗೆ ಇದ್ದ ಸಹಾನುಭೂತಿಯೂ ಇತರರಿಗೆ ಗೋಚರವಾಯ್ತು.

''ನೀವೆಲ್ಲಿ ಕೆಲಸ ಮಾಡುತ್ತಿದ್ದೀರಿ'' ಎಂದು ವಿಧವೆ ಕಮಲ ಭಾನುವನ್ನು ಕೇಳಿದರು.

''ನಾನು ಸಿಲ್ಕ್ ರೀಲರ್ಸ್ ಕೋ - ಆಪರೇಟೀವ್ ಸೊಸೈಟಿಯಲ್ಲಿ ಗುಮಾಸ್ತೆಯಾಗಿದ್ದೇನೆ'' ಎಂದಳು ಭಾನು.

''ಓ, ಅದಕ್ಕೇ ನಿಮಗೆ ಮುಸಲ್ಮಾನರನ್ನು ಕಂಡರೆ ಅಯ್ಯೋ ಪಾಪ ಅನ್ನಿಸುತ್ತೆ'' ಎಂದರು ಮೂರ್ತಿ.

''ಹಾಗೇನಿಲ್ಲ, ಅವರನ್ನು ಪ್ರತಿನಿತ್ಯ ನೋಡುವ ಅವಕಾಶವಿದೆ ನನಗೆ, ಅವರೂ ಎಲ್ಲರಂತೆಯೇ'' ಎಂದಳು ಭಾನು.

''ಓ, ನೀನು ಆ ವಾಸನೆ ರೂಮಿನಲ್ಲಿ ಹೇಗಿದ್ದೀಯಾ ಎಂದು ಯೋಚಿಸುತ್ತಿದ್ದೆ. ಈಗ ಅರ್ಥವಾಯ್ತು. ನಿನಗೆ ರೇಶಿಮೆ ಗೂಡಿನ ವಾಸನೆ ಅಭ್ಯಾಸವಾಗಿದೆ. ಸೊಸೈಟಿ ಕೂಡ ಇಲ್ಲಿಗೆ ಬಹಳ ಹತ್ತಿರ'' ಎಂದರು ಕಮಲ.

''ಹೌದು ಮೇಡಂ, ಕೆಲಸ ಮಾಡೋ ಜಾಗ ಬಹಳ ಹತ್ತಿರ ಅಂತಲೇ ನಾನಿಲ್ಲಿ ರೂಂ ತೆಗೆದುಕೊಂಡಿದ್ದು. ಸೊಸೈಟಿಗೆ ಹೋಗೋದಕ್ಕೆ ನಾನು ಮೈನ್ ರೋಡಿಗೆ ಹೋಗೋದೇ ಇಲ್ಲ. ಪಕ್ಕದ ಗಲ್ಲಿಯಲ್ಲಿನುಗ್ಗಿ ನಾಲ್ಕು ಮನೆ ದಾಟಿದರಾಯ್ತು'' ಎಂದಳು ಭಾನು.

''ಏನೇ ಹೇಳಿ, ಅವರು ಬಹಳ ಜಗಳಗಂಟರು. ನೀವು ಹೇಗೆ ಏಗ್ತೀರಿ'' ಎಂದಳು ಕಮಲ.

''ಆದರೆ ಮೇಡಂ, ಮೊನ್ನೆ ಹೇಳಿದ ಸುಗಟೂರಿನ ಬಸ್ ಘಟನೆಯಲ್ಲಿ ಹಾಗೆ ಹೇಳಲಿಲ್ಲವಲ್ಲ ನೀವು'' ಎಂದಳು ಭಾನು.

ಇದಕ್ಕೆ ಕಮಲ, ''ಒಬ್ಬೊಬ್ಬರು ಒಳ್ಳೆಯವರೂ ಇರ್ತಾರೆ'' ಎಂದಳು.

ಮೂರ್ತಿ ಕೇಳಿದರು, ''ಅದೇನು ಘಟನೆ, ಹೇಳಿ. ನನ್ನ ಯಾವುದಾದರೂ ಸ್ಕ್ರಿಪ್ಟ್‌ಗೆ ಅನುಕೂಲವಾಗುತ್ತದೆ'' ಎಂದರು.

ಕಮಲ ಅವರು ತಾವು ಶಾಲೆಗೆ ಹೋಗುತ್ತಿದ್ದ ಬಸ್ ಅಡ್ಡಗಟ್ಟಿದ ರಾಮಭಕ್ತರ ಬಗ್ಗೆ ಹೇಳಿದರು. ಅವರು ಕೂಗುತ್ತಿದ್ದ ಘೋಷಣೆಗಳು ''ಮುಸಲ್ಮಾನರಿದ್ದರೆ ಇಳಿಯಿರಿ'' ಎಂಬ ಹೂಂಕಾರಗಳನ್ನು ಕೇಳಿ, ತಾವು ತಮ್ಮ ಪಕ್ಕದಲ್ಲಿದ್ದ ಮುಸಲ್ಮಾನರ ಹೆಂಗಸಿಗೆ, ತಮ್ಮಲ್ಲಿದ್ದ ಕುಂಕುಮ ಕೊಟ್ಟುದನ್ನು ವಿವರಿಸಿದರು.

''ಆ ಮಹಿಳೆ ಕುಂಕುಮ ಇಟ್ಟುಕೊಂಡಳೇ'' ಎಂದರು ಮೇಷ್ಟ್ರು.

''ಇನ್ನೇನು ಮಾಡ್ತಾಳೆ ಪಾಪ, ನಡುಗಿಹೋಗಿದ್ದಳು ಅವಳು. ನಾನು ಹೆದರಬೇಡ ಬುರ್ಖಾ ತೆಗೆದು ಬ್ಯಾಗಿನಲ್ಲಿಡು, ಕುಂಕುಮ ಇಟ್ಟುಕೋ ಎಂದೆ'' ಎಂದರು ಕಮಲ.

''ನೋಡಿ, ಪ್ರಾಣ ಭಯ ಬಂದಾಗ ಧರ್ಮವೂ ಇಲ್ಲ ಆಚರಣೆಯೂ ಇಲ್ಲ'' ಎಂದರು ಮೂರ್ತಿ.

''ಅದೇನು ಧರ್ಮ ಬಿಡಿ ಸಾರ್. ಈ ರಾಮಭಕ್ತರಿಗೆ ಯಾವ ಧರ್ಮ ಇದೆ. ಕೆಲಸವಿಲ್ಲದ ಪುಂಡರು. ಅವರು ರೌಡಿಗಳು ಅಷ್ಟೇ'' ಎಂದರು ಕಮಲ.

ಯಾರೋ ಗೊತ್ತಿಲ್ಲದ ವ್ಯಕ್ತಿಗೆ ಕನಿಕರಿಸಿ ಉಪಕಾರ ಮಾಡಿದ ಕಮಲಳ ಬಗ್ಗೆ ಭಾನುವಿಗೆ ಅಭಿಮಾನ ಮೂಡಿತು. ಆದರೆ ಮರುಕ್ಷಣದಲ್ಲೇ, ''ನೀವು ಏನೇ ಹೇಳಿ ಮುಸಲ್ಮಾನರು ಗಲೀಜು ಜನ'' ಎಂದು ಒಕ್ಕಣಿಸಿದಾಗ, ಭಾನುವಿಗೆ ಗೊಂದಲವಾಯ್ತು. ರೇಷ್ಮೆದಾರ ತೆಗೆಯುವವರ ಬಡತನ, ಸುಟ್ಟ ಬೆರಳುಗಳಿಗೆ ಮುಲಾಮು ಹಚ್ಚಲಾಗದೆ ಆಲೂಗಡ್ಡೆ ಹೆಚ್ಚಿ ಬೆರಳಿಗಿಡುವ



ಅಸಹಾಯಕತೆ, ಇವೆಲ್ಲ ಕಮಲಳಿಗೆ ಯಾಕೆ ಗೊತ್ತಾಗುವುದಿಲ್ಲ.

''ಏನೂ ಮಾಡುವುದಕ್ಕಾಗದು, ಇದು ಮುಸಲ್ಮಾನರಿಗೆ ಕೆಟ್ಟ ಕಾಲ'' ಎಂದು ತನ್ನೂರಿನ ಉಸ್ಮಾನ್ ಸಾಹೇಬರು ಹೇಳಿದ್ದನ್ನು ಜ್ಞಾಪಿಸಿಕೊಂಡಳು ಭಾನು. ಆದರೆ ಹೆಚ್ಚು ಪ್ರತಿಕ್ರಿಯೆ ಮಾಡಲಿಲ್ಲ. ಅವಳಿಗೆ ತನ್ನ ಕಥೆ ಎಲ್ಲಿಯಾದರೂ ತನ್ನ ಬಾಯಿಂದಲೇ ಹೊರಬೀಳುವುದೋ ಎಂಬ ಭಯ.

ಹೌದು ! ಭಾನುವಿಗೂ ಮುಚ್ಚಿಡಲು ಕಥೆಯೊಂದಿತ್ತು. ಕೋಲಾರದಿಂದ ಕೇವಲ ಎಂಟು ಕಿಲೋಮೀಟರ್ ದೂರದ ತನ್ನೂರಿಗೆ ಬರಲಾಗದ ಪರಿಸ್ಥಿತಿ ಕೋಮುಗಲಭೆಗಳಿಂದ ಉಂಟಾಗಿತ್ತು. ಕರ್ಫ್ಯೂ ಇರುತ್ತಿದ್ದುದರಿಂದ ಬಸ್ ಸ್ಟ್ಯಾಂಡಿನಲ್ಲಿ ಬಸ್ಸುಗಳು ಇರದೆ, ಊರ ಹೊರಗೆ ಬಸ್ಸುಗಳಿಗಾಗಿ ಕಾಯಬೇಕಾಗುತ್ತಿತ್ತು. ಅಲ್ಲಿ ಆ ಹುಡುಗ ಎಸ್‌ಎನ್‌ನಿಂದ ತಪ್ಪಿಸಿಕೊಳ್ಳಲು ಭಾನು ರೂಂ ಮಾಡಿದ್ದಳು.

''ನಿಮಗೆ ಸಂಬಳ ಎಷ್ಟು ಕೊಡ್ತಾರೆ'' ಎಂದರು ಮೂರ್ತಿ.

''೧೫೦೦ ರೂಪಾಯಿ ಸಾರ್'' ಎಂದಳು ಭಾನು.

''ಎಷ್ಟು ಗಂಟೆ ಕೆಲಸ ಮಾಡ್ತೀರಿ'' ಎಂದರು ಮೇಸ್ಟ್ರು.

''ಒಂದೊಂದು ಸಲ ಕೆಲಸ ಜಾಸ್ತಿ. ಒಂದೊಂದು ಸಲ ಕಡಿಮೆ ಇರುತ್ತೆ. ಮುಖ್ಯವಾಗಿ ರೀಲರ್‌ಗಳೆಲ್ಲಾ ಮುಸಲ್ಮಾನರು. ಓದೋಕ್ಕೆ ಬರೆಯೋಕ್ಕೆ ಬರೋಲ್ಲ. ಅವರು ತಂದ ರೇಷ್ಮೆ ನೂಲನ್ನು ಲೆಕ್ಕಕ್ಕೆ ತೆಗೆದುಕೊಳ್ಳೋದು ಮತ್ತೆ ಬೆಂಗಳೂರಿನಿಂದ ಬಂದ ಹಣವನ್ನು ಅವರವರಿಗೆ ಹಂಚೋದು. ಅವರ ಪಾಸ್‌ಬುಕ್‌ಗಳಲ್ಲಿ ಮತ್ತು ಲೆಡ್ಜರ್‌ಗಳಲ್ಲಿ ಬರೆಯೋದು. ಇಷ್ಟೇ ಕೆಲಸ'' ಎಂದಳು ಭಾನು.

''ಅದ್ಹೇಗೆ ಏಗ್ತೀಯಮ್ಮಾ ಆ ರೀಲರ್‌ಗಳ ಜೊತೆಗೆ'' ಎಂದರು ಕಮಲ.

''ಅವರೂ ಮನುಷ್ಯರೇ. ಅಲ್ಲದೆ ಸಂಬಳಕ್ಕೋಸ್ಕರ ಯಾವುದಾದರೂ ಕೆಲಸ ಮಾಡಲೇಬೇಕಲ್ಲ. ಇಲ್ಲದಿದ್ದರೆ ಸಂಸಾರ ತೂಗಿಸೋದು ಹೇಗೆ. ಅವರೆಲ್ಲ ವ್ಯಾಪಾರಿಗಳು, ಮಿಕ್ಕ ವ್ಯಾಪಾರಿಗಳ ಹಾಗೆ ಲಾಭದ ಬಗ್ಗೆ ಮಾತ್ರ ಯೋಚಿಸ್ತಾರೆ'' ಎಂದಳು ಭಾನು.

''ಹೌದಮ್ಮ, ನಿನಗೆ ಯಾಕಿನ್ನೂ ಮದುವೆಯಾಗಿಲ್ಲ'' ಎಂದು ಕೇಳಿದರು ಮೇಸ್ಟರು.

''ಹೀಗೆ ಯಾವುದೂ ಸೆಟ್ ಆಗಿಲ್ಲ, ಮನೇಲಿ ಹುಡುಕ್ತಾ ಇದ್ದಾರೆ'' ಎಂದಳು ಭಾನು.

ಭಾನು ತನ್ನ ಮದುವೆಯ ಬಗ್ಗೆ ಹೆಚ್ಚು ಮಾತನಾಡಲು ಇಷ್ಟಪಡಲಿಲ್ಲ. ಏಕೆಂದರೆ ಈಗ ತನಗಿಷ್ಟವಾದ ಎಸ್‌ಎನ್‌ನನ್ನು ಮದುವೆಯಾಗುವಂತಿಲ್ಲ. ಜೊತೆಯಲ್ಲೇ ಶಾಲೆ ಮುಗಿಸಿದ ಎಸ್‌ಎನ್ ಈಗ ಸರ್ಕಾರಿ ಕೆಲಸದಲ್ಲಿದ್ದ. ಪ್ರತಿದಿನ ಬಸ್ ಇಳಿಯುವಾಗ ಬೈಕಿನಲ್ಲಿ ಬರುತ್ತಿದ್ದ. ಇಬ್ಬರೂ ಖುಷಿಯಾಗಿ ಯಾವುದಾದರೊಂದು ಹೋಟೆಲಿನಲ್ಲಿ ತಿಂಡಿ ತಿಂದು ಮುಂದಿನ ಜೀವನದ ಬಗ್ಗೆ ಯೋಜನೆಗಳನ್ನು ಹಾಕುತ್ತಿದ್ದರು. ಹತ್ತು ಗಂಟೆಗೆ ಸರಿಯಾಗಿ ತಾಲ್ಲೂಕ್ ಆಫೀಸಿನ ಬಳಿ ಬಿಡುತ್ತಿದ್ದ. ಅಲ್ಲಿ ಟೆಂಪೊರರಿ ಟೈಪಿಸ್ಟ್ ಕೆಲಸವಿತ್ತು ಭಾನುವಿಗೆ.

ಆದರೆ ಎಲ್ಲ ಯೋಜನೆಗಳಿಗೂ ಕಲ್ಲು ಬಿತ್ತು. ರೇಷ್ಮೆಗೂಡು ಮಾರ್ಕೆಟ್ ಗಲಾಟೆ ಶುರುವಾದಾಗಿನಿಂದ ಜೀವನವೇ ಬದಲಾಗಿಹೋಯ್ತು.

''ನಾನು ಗೂಡನ್ನು ಮಾರ್ಕೆಟ್‌ಗೆ ತೆಗೆದುಕೊಂಡು ಹೋಗಿದ್ದಕ್ಕೆ, ನನ್ನ ಮೇಲೆ ಕೇಸ್ ಹಾಕಿದ್ದಾನೆ ಅವನು'' ಎಂದು ಚಿಕ್ಕಪ್ಪ ಹಲ್ಲು ಕಡಿದಿದ್ದ ದೃಶ್ಯ ನೆನೆದರೆ ಮೈ ನಡುಗುತ್ತಿತ್ತು ಭಾನುವಿಗೆ. ''ನೀನು ಅವನ ಹಿಂದೆ ಸುತ್ತುತ್ತೀಯಂತೆ'' ಎಂದು ಕೇಳಿದಾಗ ಏನೂ ಹೇಳಲಾಗದೆ ಮೌನವಾಗಿದ್ದಳು.

''ನಿನಗೆ ರೀಲರ್ಸ್ ಸೊಸೈಟಿಯಲ್ಲಿ ಕೆಲಸ ಹುಡುಕಿದ್ದೇನೆ. ಅವನ ಸಹವಾಸ ಬಿಡು. ಅವನ ಕಣ್ಣಿಗೆ ಬೀಳದಹಾಗೆ ಕೋಲಾರದಲ್ಲೇ ರೂಂ ಮಾಡು. ಈ ಗಲಾಟೆಗಳಲ್ಲಿ ನಿನ್ನನ್ನು ಏನಾದರೂ ಮಾಡಿಯಾನು'' ಎಂದು ಗುಡುಗಿದ್ದರು ಅವಳ ಚಿಕ್ಕಪ್ಪ. ತಂದೆಯಿಲ್ಲದ ಭಾನು ಚಿಕ್ಕಪ್ಪನ ಮಾತನ್ನು ಕೇಳಲೇಬೇಕಿತ್ತು.

ಅಂದಿನಿಂದ ಬಸ್ ಸಂಚಾರ ಇಲ್ಲ. ಪೋಲಿ ಹುಡುಗರ ''ಎಸ್‌ಎನ್–ಭಾನು'' ಎಂದು ಕಿಚಾಯಿಸುವ ಘಟನೆ ಗಳಿಲ್ಲ. ಎಸ್‌ಎನ್‌ನ ಮುಖ ಅಂದಿನಿಂದ ನೋಡಿಯೂ ಇಲ್ಲ. ಪರಿಸ್ಥಿತಿ ವಿವರಿಸಿ, ನನ್ನನ್ನು ಮರೆತುಬಿಡು ಎಂದು ಕಾಗದ ಹಾಕಿದ್ದಷ್ಟೇ. ಎಸ್‌ಎನ್‌ನ ಕಣ್ಣಿಗೆ ಬೀಳಬಹುದೇನೋ ಎಂದು ಕೆಲಸ ಮುಗಿಸಿ ರೂಂಗೆ ಬಂದ ನಂತರ ಎಲ್ಲೂ ಹೊರಗೆ ತಲೆ ಹಾಕುತ್ತಿರಲಿಲ್ಲ.

* * *

ಆ ದಿನ ಮಿಸೆಸ್ ಆರ್ಮುಗಂ ಉದ್ವಿಗ್ನರಾಗಿದ್ದರು. ಮೂರ್ತಿಯವರು ಅವರನ್ನು ಸಮಾಧಾನಪಡಿಸುತ್ತಿದ್ದರು. ವಠಾರದ ಮಿಕ್ಕವರೆಲ್ಲರೂ ಜಮಾಯಿಸಿದಾಗ ಭಾನು ಹೊರಗಡೆ ಬಂದಳು. ಹತ್ತಿರದ ಪೊಲೀಸ್ ಸ್ಟೇಷನ್‌ನಿಂದ ಎಸ್. ಐ. ಬಂದಿದ್ದನಂತೆ. ''ಮುಸಲ್ಮಾನರಿಗೆ ಬಾಡಿಗೆ ರೂಂ ಇಲ್ಲ ಎನ್ನುತ್ತೀಯಂತೆ.'' ''ಹೊಸ ಕಾನೂನು ಬಂದಿದೆ. ಹಾಗೆಲ್ಲಾ ಹೇಳಲಾಗದು. ಕೇಸ್ ಬುಕ್ ಮಾಡ್ತೀವಿ ನೋಡು'' ಎಂದು ಜೋರು ಮಾಡಿದನಂತೆ. ಅದಕ್ಕೇ ಮಿಸೆಸ್ ಆರ್ಮುಗಂ ತಲೆ ಕೆಡಿಸಿಕೊಂಡಿದ್ದಾರಂತೆ. ಭಾನುವಿಗೆ ಉಸಿರೇ ಹೋದಂತಾಯ್ತು. ಇಲ್ಲೊಂದು ಕೇಸಾದರೆ ಏನಪ್ಪಾ ಗತಿ ಎಂದುಕೊಂಡಳು. ಈ ರಾಮನ ಗಲಾಟೆ ನನ್ನ ಜೀವನವನ್ನು ಎಷ್ಟು ಕೆಡಿಸ್ತಾ ಇದೆ ಎಂದು ಕಣ್ಣೀರಿಡುತ್ತಾ ರೂಂ ಹೊಕ್ಕು ಬಾಗಿಲು ಹಾಕಿಕೊಂಡಳು.

''ಇದೇನು ಈ ಹುಡುಗಿ ಇಷ್ಟು ಬೇಗ ಲೈಟಾರಿಸಿ ಮಲಗಿಕೊಂಡಳಲ್ಲ'' ಎಂದು ಕಮಲ ಹೇಳಿದ್ದನ್ನು ಕೇಳಿಸಿಕೊಂಡಳು.

* * *

''ಅಯ್ಯೋ, ಅಮ್ಮಾವ್ರೆ ಇಲ್ಲಿ ನೋಡಿ'' ಎಂದು ಲಕ್ಷ್ಮಿ ಬೆಳಿಗ್ಗೆ ೮ ಗಂಟೆಗೆ ಕಿರುಚಿದಾಗ ಎಲ್ಲರೂ ಹೊರಗೆ ಬಂದರು.

''ಹೌದು ಉಸಿರು ನಿಂತುಹೋಗಿದೆ.''

''ಇಲ್ಲ, ನಾಡಿ ಬಡೀತಾ ಇದೆ''

''ಫೋನ್ ಮಾಡಿದ್ದಾಯ್ತು, ಅಂಬುಲೆನ್ಸ್ ಬರಲಿಲ್ಲ.''

''ಅದೇನೋ ರೇಷ್ಮೆ ವಿಷವಂತೆ.''

''ಪೊಲೀಸರಿಗೆ ಹೇಳಿ, ಅವರು ಫೋನ್ ಮಾಡಿದರೆ ಅಂಬುಲೆನ್ಸ್ ತಕ್ಷಣ ಬರುತ್ತೆ.''

ಕೊನೆಗೂ ಪೊಲೀಸ್ ಜೀಪ್‌ನೊಂದಿಗೆ ಅಂಬುಲೆನ್ಸ್ ಬಂತು. ಸಬ್‌ಇನ್ಸ್‌ಪೆಕ್ಟರ್ ಕೊನೆಯ ಕೊಠಡಿಗೆ ಹೋದವನೇ ಭಾನುವಿನ ಮುಖ ನೋಡಿದ ತಕ್ಷಣ ತಾನೇ ಅವಳನ್ನು ಹೊತ್ತು ತನ್ನ ಜೀಪಿನಲ್ಲೇ ಮಲಗಿಸಿಕೊಂಡ. ''ಹೊರಡು ಬೇಗ'' ಎಂದು ಕಿರುಚಿದ.

''ಇದೇನು ನೆನ್ನೆ ತಾನೇ ರೋಫು ಹಾಕಿದ ಈ ಕ್ರೂರಿ ಎಸ್.ಐ.ಗೆ ಇಷ್ಟು ಕರುಣೆ ? ಭಾನುವನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಆಸ್ಪತ್ರೆಗೆ ಹೊರಟಿದ್ದಾನೆ'' ಎಂದಳು ಮಿಸೆಸ್ ಆರ್ಮುಗಂ.

* * *

ಕೊನೆಯ ಕೊಠಡಿಗೆ ಬಾಡಿಗೆಗೂ ಯಾರೂ ಬಂದಿಲ್ಲ.

ಆದರೆ ನಗರದ ಪತ್ರಿಕೆಯೊಂದರಲ್ಲಿ, ಈ ಘಟನೆಯಾದ ಎರಡು ತಿಂಗಳ ನಂತರ, ವರದಿಯೊಂದು ಪ್ರಕಟವಾಗಿತ್ತು.

''ಇತ್ತೀಚಿನ ಕೋಮುಗಲಭೆಯನ್ನು ಅತ್ಯಂತ ಚಾಣಾಕ್ಷತನದಿಂದ ನಿಯಂತ್ರಿಸಿದ ಸಬ್‌ಇನ್ಸ್‌ಪೆಕ್ಟರ್ ಸಯ್ಯದ್ ನಸುರಲ್ ಅಹಮದ್‌ರವರ ವಿವಾಹವು, ತಮ್ಮ ಬಾಲ್ಯದ ಗೆಳತಿ ಭಾನುರವರೊಂದಿಗೆ ಸರಳ ರೀತಿಯಲ್ಲಿ ಜರುಗಿತು.''

(ಮೂಲ : ಓ. ಹೆನ್ರಿ ಅವರ 'ದಿ ಸ್ಕೈಲೈಟ್ ರೂಂ')

ಕನ್ನಡ ರೂಪಾಂತರ : ವಿ. ಎಸ್. ಎಸ್. ಶಾಸ್ತ್ರಿ, ನಂ. ೫೨೦, ೨ನೇ ಕ್ರಾಸ್, ಜಯನಗರ, ಕೋಲಾರ - ೫೬೩ ೧೦೧

# ಕೃಷ್ಣ ಭಟ್ಟರು ಕಂಡ ಎರಡು ಕನಸು




ಕೃಷ್ಣ ಭಟ್ಟರು ಮುಚ್ಚಿದ್ದ ಕಣ್ಣು ತೆರೆದರು. ಕೆಳಗೆ ಅಂಗಳದಲ್ಲಿ ಕುಕ್ಕರುಗಾಲಿನಲ್ಲಿ ಕುಳಿತಿದ್ದ ಸಿದ್ಧ, ಭಟ್ಟರ ಮಾತಿಗಾಗಿಯೇ ಕಾಯುತ್ತಿದ್ದ. ಪಕ್ಕದಲ್ಲಿಟ್ಟುಕೊಂಡಿದ್ದ ಪಂಚಾಂಗವನ್ನೊಮ್ಮೆ ತಿರುವಿ, ಕವಡೆಯನ್ನು ಹರಡಿ, ಬೆರಳಿನಲ್ಲಿಯೇ ಏನನ್ನೋ ಎಣಿಸಿ-ಗುಣಿಸಿದ ಕೃಷ್ಣಭಟ್ಟರು, ''ಸಿದ್ಧ, ನಿನ್ನ ದನ ಊರಿನ ಪೂರ್ವ ದಿಕ್ಕಿನಾಗೇ ಎಲ್ಲೋ ಹೋಗದೆ. ನೀ ಎನ್ ತಲಬಿಸಿ ಮಾಡ್ಕಣಾದು ಬ್ಯಾಡ. ನೀ ಹುಡ್ಕರೂ-ಹುಡ್ಕದಿದ್ರೂ ಇನ್ನೆರ್ಡ ದಿನದಾಗೆ ದನ ಕೊಟ್ಟಿಗೆಗೆ ವಾಪಸ್ಸಾಗುತ್ತೆ. ಒಂದು ಪುಟ್ಟ ಕಂಟ್ಕ ಇತ್ತು, ಕಳೀತು ತಗಾ... ಈ ಅಂತ್ರದ ತಗ್ಡನ್ನ ತಕ್ಕೊಂಡ್ಹೋಗಿ ಕೊಟ್ಟಿಗೆಲೆಲ್ಲಾದ್ರೂ ಕಟ್ಟು.. ಎಲ್ಲ ಸರಿ ಹೋದಹಾಗೇನೇ'' ಎಂದು ತೆಳುವಾದ ತಾಮ್ರದ ತಗಡೊಂದನ್ನು ಜಗುಲಿ ಮೇಲಿಂದಲೇ ಸಿದ್ಧನ ಕೈಗೆಸೆದರು. ಅಂತ್ರದ ತಗಡನ್ನು ಕೈಯಲ್ಲಿ ಹಿಡಿದುಕೊಂಡು, ಹತ್ತು ರೂಪಾಯಿ ನೋಟೊಂದನ್ನು ಭಟ್ಟರೆದುರಿಟ್ಟು ಕೈ ಮುಗಿದ ಸಿದ್ಧ, ''ಬತ್ತೀನಿ ಭಟ್ರೇ'' ಎಂದು ಬೆನ್ನು ಹಾಕುವುದಕ್ಕೂ, ಎದೆಗೂಡು ಒಡೆದುಹೋಗುವಂತೆ ಕೆಮ್ಮಿ, ''ರೀ... ರೀ... ಸ್ವಲ್ಪ ನೀರ್ಕೊಡ್ರಿ...'' ಎಂದು ಕೃಷ್ಣ ಭಟ್ಟರ ಹೆಂಡತಿ ಭಟ್ಟರನ್ನು ಕರೆಯುವುದಕ್ಕೂ ಸರಿಹೋಯಿತು.

ಪಂಚಾಂಗವನ್ನೆಲ್ಲ ಮಡಿಚಿಟ್ಟು, ಈ ಕರ್ಮ ತಪ್ಪಿದ್ದಲ್ಲವೆಂದು ಶಪಿಸುತ್ತ ಎದ್ದ ಕೃಷ್ಣ ಭಟ್ಟರು, ಅಡಿಗೆ ಮನೆಯಲ್ಲಿದ್ದ ನೀರಿನ ಪಾತ್ರೆಯಲ್ಲಿ ಲೋಟ ಮುಳುಗಿಸಿಕೊಂಡು ಬಂದು, ''ಸುಬ್ಬು... ಏಳು ನೀರ್ಕುಡಿ'' ಎಂದು ಹಾಸಿಗೆಯಲ್ಲಿ ಮಲಗಿಕೊಂಡಿದ್ದ ಹೆಂಡತಿಯ ಕೈ ಹಿಡಿದು ನಿಧಾನವಾಗಿ ಅಲುಗಾಡಿಸಿದರು.

ಕೃಷ್ಣ ಭಟ್ಟರ ಹೆಂಡತಿ ಸುಬ್ಬಮ್ಮ ಹಾಸಿಗೆಗೆ ಹತ್ತಿಹೋಗಿ ಒಂದು ವರ್ಷದ ಮೇಲಾಯಿತು. ಕೆಮ್ಮಿನ ರೀತಿ ಆರಂಭವಾದ ಕಾಯಿಲೆ, ಕ್ರಮೇಣ ಸುಬ್ಬಮ್ಮನನ್ನು ಹಾಸಿಗೆಯಲ್ಲಿ ಮಲಗಿಸಿಬಿಟ್ಟಿತ್ತು. ಗಂಡ ಕೈ ಹಿಡಿದು ಕರೆದುಕೊಂಡು ಹೋದರೆ ಮಾತ್ರ ಸುಬ್ಬಮ್ಮ ಮನೆಯಿಂದ ಹೊರಗೆ ಬರುತ್ತಿದ್ದದ್ದು; ಅದೂ ಒಂದು ಎರಡಕ್ಕೆ ಮಾತ್ರ. ಉಳಿದಿದ್ದೆಲ್ಲ ಹಾಸಿಗೆಯಲ್ಲಿಯೇ. ಇದರೊಂದಿಗೆ ಇದ್ದೊಬ್ಬ ಮಗಳು ವಾಣಿಗೆ ಮೂವತ್ತೆರಡಾದರೂ ಮದುವೆಯಾಗಲಿಲ್ಲವೆಂಬ ಕೊರಗು ಸುಬ್ಬಮ್ಮನನ್ನು ಮತ್ತಷ್ಟು ಹಿಂಡಿಹಾಕಿತ್ತು. ಹಾಸಿಗೆ ಹಿಡಿದ ಸುಬ್ಬಮ್ಮನನ್ನು ಎಬ್ಬಿಸುವುದರಿಂದ ಆರಂಭಿಸಿ, ಸ್ನಾನ ಮಾಡಿಸಿ, ಸೀರೆ ಉಡಿಸಿ ಉಣ್ಣಿಸಿ... ಬಾಚುವುದು, ತೊಳೆಯುವುದು ಎಲ್ಲವೂ ಕೃಷ್ಣ ಭಟ್ಟರ ಕೆಲಸವೇ ಆಗಿತ್ತು. ಅಪ್ಪಯ್ಯ ಅಮ್ಮನ ಮಧ್ಯೆ ತಾನೇಕೆ ಎಂದೋ ಏನೋ ವಾಣಿ ಇತ್ತ ತಲೆ ಹಾಕುತ್ತಲೇ ಇರಲಿಲ್ಲ. ವಾಣಿಯ ಬಗ್ಗೆ ಸುಬ್ಬಮ್ಮನೇ ಒಮ್ಮೆ ಕೇಳಿದ್ದಕ್ಕೆ, ಕೃಷ್ಣ ಭಟ್ಟರು, ''ಸುಬ್ಬು, ಯಾರಿಂದಲಾದರೂ ಸೇವೆ ಮಾಡ್ಸಿಕೊಳ್ಳೋವಾಗ ಹೇಳಿ-ಕೇಳಿ ಮಾಡ್ಸಿಕೊಳ್ಳಬಾರದು ಕಣೇ. ಸೇವೆ ಮಾಡ್ಬೇಕು ಎನ್ನುವ ಮನೋಭಾವ ಅವರೊಳಗಿನಿಂದ ಹುಟ್ಟಿ ಬರ್ಬೇಕು. ಅದು ನಮ್ಮ ಮಗಳಿಗಿಲ್ಲ ಬಿಡು. ನೀನ್ಯಾಕೆ ಕೊರಗ್ತಿ? ನಾನಿಲ್ಲವಾ ನಿನ್ನ ಗಂಡ... ಗಂಡ ಆಗಿ ಇಷ್ಟೂ ಮಾಡದಿದ್ರೆ ಹೇಗ್ಹೇಳು ?'' ಎಂದು ಸಮಾಧಾನಿಸಿದ್ದರು. ಪ್ರಾರಂಭದಲ್ಲಿ ಕೃಷ್ಣ ಭಟ್ಟರು ತಮ್ಮ 'ಸುಬ್ಬು' ಒಂದೆರಡು ವಾರದಲ್ಲಿ ಸರಿಹೋಗಬಹುದು ಎಂದುಕೊಂಡು ಅವಳ ಸೇವೆಯನ್ನು ಹುರುಪಿನಿಂದಲೇ ಮಾಡಿದ್ದರು. ಆದರೆ ಅವಳು ಒಂದೆರಡು ವಾರಗಳು ಕಳೆದು, ತಿಂಗಳುಗಟ್ಟಲೆ ಹಾಸಿಗೆ ಹಿಡಿದಾಗ ಕೃಷ್ಣ ಭಟ್ಟರಿಗೆ ಕಿರಿಕಿರಿ ಎನ್ನಿಸಲಾರಂಭಿಸಿತ್ತು.

ದಿನವಿಡೀ ಕಾದಂಬರಿಯಂತಹ ಪುಸ್ತಕವನ್ನೇನಾದರೂ ಹಿಡಿದುಕೊಂಡು ಮನೆಯ ಯಾವುದಾದರೊಂದು ಮೂಲೆಯಲ್ಲಿ ಕುಳಿತಿರುತ್ತಿದ್ದ, ಇಲ್ಲವೇ 'ಅಪ್ಪಯ್ಯ ನಾ ಲಕ್ಷ್ಮಿ ಮನೆಗೆ ಹೋಬತ್ತೆ', 'ಅಪ್ಪಯ್ಯ... ನಾಗು ಮನೆಗೆ ಹೋಬತ್ತೆ' ಎಂದು ಸ್ನೇಹಿತೆಯರ ಮನೆಗೆ ಹೋಗುತ್ತಿದ್ದ ಮಗಳು ವಾಣಿಗೆ, 'ಸ್ವಲ್ಪ ಅಮ್ಮನ ಜೊತೆಗಿರೇ' ಎಂದು ಹೇಳೋಣವೆಂದರೆ ಕೃಷ್ಣ ಭಟ್ಟರ ಆದರ್ಶ ಅಡ್ಡಬಂದು ನಿಲ್ಲುತ್ತಿತ್ತು. ಅಲ್ಲದೆ ಇಷ್ಟು ದೊಡ್ಡ ಮಗಳಿಗೆ ಹೇಳೋದೆಂತ, ಗೊತ್ತಾಗೋದಿಲ್ವಾ ಎನ್ನುವ ಭಾವನೆ. ಮನೆಗೆ ಬಂದವರಿಗೆ ನಿಮಿತ್ತ ಹೇಳೋದು, ತಾಯಿತ ಮಾಡಿಕೊಡೋದು, ದಿನ ಇಟ್ಟು ಕೊಡೋದು, ಪೌರೋಹಿತ್ಯಕ್ಕೆ ಹೋಗೋದು ಎಂದು ಸದಾ ತಮ್ಮ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದ ಕೃಷ್ಣ ಭಟ್ಟರಿಗೆ, ಈಗೀಗ ಹೆಂಡತಿಯ ಸೇವೆ ಮಾಡುವುದು ದೊಡ್ಡ.ತಲೆಬಿಸಿಯಾಗಿ ಕಾಣುತ್ತಿತ್ತು. ನಾನು ಪಡೆದುಕೊಂಡು ಬಂದಿದ್ದೇ ಇಷ್ಟು.. ಅನುಭವ್ಸಲೇ ಬೇಕು ಎಂದು ತಮ್ಮಷ್ಟಕ್ಕೆ ತಾವೇ ಸಮಾಧಾನ ಹೇಳಿಕೊಂಡರೂ ಹೆಂಡತಿ ಕೆಮ್ಮಿದಾಗ ಕರೆದಾಗ ಸಿಟ್ಟು ಉಕ್ಕಿ ಬಂದುಬಿಡುತ್ತಿತ್ತು.

''ತಗಳೇ ಸುಬ್ಬು... ನೀರ್ಕುಡಿ'' ಕೃಷ್ಣ ಭಟ್ಟರು ಮತ್ತೊಮ್ಮೆ ಮಲಗಿಕೊಂಡಿದ್ದ ಹೆಂಡತಿಗೆ ಹೇಳಿದರು. ಗಂಡನ ನೆರವಿನಿಂದ ನಿಧಾನವಾಗಿ ಹಾಸಿಗೆಯಿಂದೆದ್ದ ಸುಬ್ಬಮ್ಮ ಗೋಡೆಗೊರಗಿಕೊಂಡು, ಬಿಳಿಚಿಕೊಂಡಿದ್ದ ತುಟಿಯನ್ನು ನಾಲಿಗೆಯಿಂದ ಸವರಿಕೊಂಡಳು. ಕೃಷ್ಣ ಭಟ್ಟರು ಹಿಡಿದುಕೊಂಡ ನೀರಿನ ಲೋಟದಿಂದ, ಸ್ವಲ್ಪ ಸ್ವಲ್ಪವೇ ನೀರು ಹೀರಿದ ಸುಬ್ಬಮ್ಮ, ''ರೀ... ವಾಣಿ ಎಲ್ಲಿ ಕಾಣ್ತಿಲ್ಲಲ್ಲ...'' ನೀರಿನ ಲೋಟದಿಂದ ತುಟಿ ತೆಗೆದು ಕೇಳಿ, ಜೋರಾಗಿ ಕೆಮ್ಮಲಾರಂಭಿಸಿದಳು. ತಕ್ಷಣವೇ ಹೆಗಲ ಮೇಲಿದ್ದ ಟವಲನ್ನು ಬಾಯಿ ಮತ್ತು ಮೂಗಿಗೆ ಅಡ್ಡ ಇಟ್ಟುಕೊಂಡ ಕೃಷ್ಣ ಭಟ್ಟರು, ಹೆಂಡತಿ ಕೆಮ್ಮು ನಿಲ್ಲಿಸಿದ ನಂತರ ಟವಲನ್ನು ಬದಿಗಿಟ್ಟು, ''ಇಲ್ಲೇ ಸ್ನೇಹಿತ್ರ ಮನೆಗೋಗ್ಬರ್ತೀನಿ ಅಂತ ಹೋಗ್ಯಾಳೇ...'' ಎಂದರು. ''ಅದು...'' ಎಂದೇನೋ ಹೇಳಲು ಹೊರಟ ಸುಬ್ಬಮ್ಮನನ್ನು ತಡೆದ ಕೃಷ್ಣ ಭಟ್ಟರು, ''ಸುಬ್ಬು... ನೀ ಅದ್ನೆಲ್ಲ ಎಂತಕ್ಕೇ ತಲೆಗೆ ಹಚ್ಕಂತಿ ? ಸುಮ್ನೆ ಮಲಕ್ಕಾ...'' ಎಂದು ಹೆಂಡತಿಯನ್ನು ಸಮಾಧಾನಿಸಿ ಹೊರಬಂದರು. ಹೆಂಡತಿ ಮಲಗಿದಲ್ಲೇ ಏನೋ ಗೊಣಗುತ್ತ ಜೋರಾಗಿ ಕೆಮ್ಮುತ್ತಿದ್ದದ್ದು ಕೃಷ್ಣ ಭಟ್ಟರ ಕಿವಿಗೆ ಕೇಳಿಸುತ್ತಿತ್ತು.

ಕೃಷ್ಣ ಭಟ್ಟರಿಗೆ ಕೆಲವೊಮ್ಮೆ ಹೆಂಡತಿಯ ಬಗ್ಗೆ ಎಷ್ಟು ಹೇಸಿಗೆ ಹುಟ್ಟಿಬಿಡುತ್ತಿತ್ತೆಂದರೆ... ಯಾರೋ ಒಂದಿಬ್ಬರು ಮಗುವಿನ ನಾಮಕರಣಕ್ಕೆ ದಿನ ಕೇಳಲು ಬಂದಿದ್ದರು. ಪಂಚಾಂಗ ತಿರುವುತ್ತಿದ್ದಾಗ ಸುಬ್ಬಮ್ಮ ಒಳಗಿನಿಂದ ಜೋರಾಗಿ ಕರೆದಳು. ಭಟ್ಟರು ಎದ್ದು ಒಳ ಹೋದರೆ, ''ಹೊರಗೋಗ್ಬೇಕಣ್ರೀ...'' ಎಂದು ಸುಬ್ಬಮ್ಮ ಮುಖವನ್ನು ಮತ್ತಷ್ಟು ಸಣ್ಣಕ್ಕೆ ಮಾಡಿಕೊಂಡಳು. ಭಟ್ಟರು ಮುಖ ಕಿವುಚಿಕೊಂಡು, ಹೆಂಡತಿಯನ್ನು ಎಬ್ಬಿಸಿಕೊಂಡು ಬಂದು ತೋಟದ ಬದಿಗೆ ಒಂದು ಮರೆಯಲ್ಲಿ ಕೂರಿಸಿ, ಮನೆ ಕಡೆ ನೋಡಿದರೆ... ದಿನ ಕೇಳಲು ಬಂದವರು ಏನೋ ಗುಸು ಗುಸು ಮಾತನಾಡಿಕೊಳ್ಳುತ್ತಿದ್ದರು... ಭಟ್ಟರಿಗೆ ಮೈಯೆಲ್ಲಾ ಉರಿದುಬಿಟ್ಟಿತ್ತು. ಆದರೆ ಮಾಡುವುದೇನು ? ಕರ್ಮ ಎಂದುಕೊಂಡು ತೊಳೆಸಿ, ಹೆಂಡತಿಯನ್ನು ಒಳ ಕಳಿಸಿ ಹೊರಬಂದರೆ, ಎದುರು ಕುಳಿತವರು ಕಿಸಕ್ಕನೆ ನಕ್ಕಂತೆ... ಅವ್ಳು ಅತ್ಲಾಗೆ ಸತ್ತಿದ್ದರಾದ್ರೂ ಈ ನಾಚ್ಕೆ, ಅವ್ಮಾನ ಎಲ್ಲಾ ಕಳೀತಿತ್ತು ಎಂದು ಗೊಣಗುತ್ತಲೇ ಕೃಷ್ಣ ಭಟ್ಟರು ಪಂಚಾಂಗದೆಡೆ ಕಣ್ಣುಹಾಯಿಸಿದ್ದರು. ಹೆಂಡತಿಗೆ ಸೀರೆ ಉಡಿಸುವಾಗಲಂತೂ... ಸುಕ್ಕುಗಟ್ಟಿದ ಚರ್ಮ, ಜೋಲು ಬಿದ್ದ ಮೊಲೆ, ಬೆನ್ನಿಗೆ ಹಿಡಿದ

ಹೊಟ್ಟೆ, ತೊಡೆಯೆಂಬುದು ಬರೀ ಮೂಳೆ... ಕಣ್ಣುಮುಚ್ಚಿಕೊಂಡು ಒಟ್ಟೊಟ್ಟು ಸೀರೆ ಸುತ್ತಿ ಬಿಡುತ್ತಿದ್ದರು. ಕೆಲವೊಮ್ಮೆ ಊಟ ಮಾಡಿಸುವಾಗ ಕೆಮ್ಮಿನೊಂದಿಗೆ ಬುಳಕ್ಕನೆ ವಾಂತಿ... ಅಲ್ಲಾಗೇ ಅವಳು ಸತ್ತಿದ್ದರಾದರೂ ಈ ತಾಪತ್ರಯ ತಪ್ಪುತ್ತಿತ್ತು. ಆಮೇಲೆ ನಿಮಿತ್ತ ಹೇಳುತ್ತ, ಪೌರೋಹಿತ್ಯ ಮಾಡಿಕೊಂಡು ಆರಾಮವಾಗಿ ಇರಬಹುದು. ವಾಣಿಗೆ ಆದರೆ ಮದುವೆ... ಇಲ್ಲದಿದ್ದರೆ ನನ್ನೊಂದಿಗೆ ಇರ್ತಾಳೆ... ಏನೀಗ ? ಪೌರೋಹಿತ್ಯದಿಂದ ಬರುವ ದುಡ್ಡಿನಲ್ಲಿ ಇಬ್ಬರು ನಗುನಗುತ್ತ ಬಾಳಬಹುದು... ಕೃಷ್ಣ ಭಟ್ಟರು ಹಗಲುಗನಸು ಕಾಣುತ್ತಿದ್ದರು.

ಕೃಷ್ಣ ಭಟ್ಟರು ಹಾಸಿಗೆಯಿಂದ ದಿಡಗ್ಗನೆದ್ದು ಕುಳಿತರು. ಥೂ! ಎಂತಹ ಕನಸು ?! ತೆಂಗಿನ ಮರದ ಮೇಲೆ ಕುಳಿತ ಕಾಗೆ ಕೂಗುತ್ತಿತ್ತು. ಬೆವರುತ್ತಿದ್ದ ಕೃಷ್ಣ ಭಟ್ಟರು ಅಂಗೈಗಳೆರಡನ್ನು ಉಜ್ಜಿಕೊಂಡು, ಮುಖದೆದುರಿಗೆ ತಂದು, 'ಕರಾಗ್ರೇ ವಸತೇ ಲಕ್ಷ್ಮೀ...' ಮಂತ್ರ ಹೇಳಿಕೊಂಡು, ಮಂಚದಿಂದ ಕೆಳಗೆ ಕಾಲಿಟ್ಟರೆ ಕಾಲು ನಡುಗುತ್ತಿತ್ತು. ಯಾವತ್ತೂ ಇಲ್ಲದ್ದು ಇವತ್ತೇಕೆ ಹೀಗೆ ? ಇಲ್ಲ ಅದು ಬರೀ ಕನಸು... ಕೆಟ್ಟ ಕನಸು, ಅದೆಲ್ಲ ನಿಜಜೀವನದಲ್ಲಿ ಘಟಿಸಲು ಸಾಧ್ಯವೇ ಇಲ್ಲ ಎಂದುಕೊಂಡರೂ, ಹೆಂಡತಿ ಮಲಗಿದ ಕೋಣೆಗೆ ಹೋಗಲು ಧೈರ್ಯ ಸಾಲಲಿಲ್ಲ. ನಿಂತಲ್ಲಿಂದಲೇ ಬಗ್ಗಿ ನೋಡಿದರು. ಸುಬ್ಬು ಮಲಗಿಕೊಂಡೇ ಇದ್ದಳು. ಇಲ್ಲ ಸತ್ತಿರಲು ಸಾಧ್ಯವೇ ಇಲ್ಲ... ಅದು ಕೇವಲ ಕನಸು. ಅವಳು ಮಲಗಿಕೊಂಡಿದ್ದಾಳಷ್ಟೇ. ''ಸುಬ್ಬು... ಸುಬ್ಬು...'' ಕರೆಯುತ್ತ ಬಾಗಿಲು ದಾಟಿದರು. ಸುಬ್ಬಮ್ಮ ಅಲುಗಾಡಲೇ ಇಲ್ಲ, ಮೂಗಿನ ಹತ್ತಿರ ಬೆರಳಿಟ್ಟರು. ಉಸಿರಿಲ್ಲ... ಮೂಗು ಮಂಜುಗಡ್ಡೆಯಂತೆ ತಣ್ಣಗೆ! ''ಸುಬ್ಬುऽऽऽ...'' ಕೃಷ್ಣ ಭಟ್ಟರು ಜೋರಾಗಿ ಕಿರುಚಿಕೊಂಡು ಹೆಂಡತಿಯ ದೇಹವನ್ನು ಗಟ್ಟಿಯಾಗಿ ತಬ್ಬಿಕೊಂಡರು. ಅಪ್ಪಯ್ಯನ ಕೂಗು ಕೇಳಿ ಓಡಿ ಬಂದ ವಾಣಿ, ''ಅಮ್ಮಾ...'' ಎಂದು ಅಲ್ಲಿಯೇ ಕುಸಿದಳು.

ವಾಣಿಯೂ ಒಂದು ವಾರ ಹೊರಗೆಲ್ಲೂ ಹೋಗಲಿಲ್ಲ. ಕೃಷ್ಣ ಭಟ್ಟರಿಗೆ ಕುಳಿತಲ್ಲಿ ನಿಂತಲ್ಲಿ ಹೆಂಡತಿಯದ್ದೇ ನೆನಪು. ಬಚ್ಚಲು ಮನೆಯಲ್ಲಿ ಕೈಕಾಲು ತೊಳೆಯುತ್ತಿದ್ದರೆ, ಒಳ ಕೋಣೆಯಲ್ಲಿ ಜೋರಾಗಿ ಕೆಮ್ಮಿ... 'ನೀ... ನೀರು' ಎಂದಂತೆ. ಕೃಷ್ಣ ಭಟ್ಟರ ಕಣ್ಣುಗಳಲ್ಲಿ ನೀರಾಡುತ್ತಿತ್ತು. ''ಸುಬ್ಬು... ಸುಬ್ಬು, ಯಾಕಾರೂ ನನ್ನ ಬಿಟ್ಟು ಹೋದ್ಯೆ...'' ಎಂದು ಸುಬ್ಬಮ್ಮ ಮಲಗುತ್ತಿದ್ದ ಕೋಣೆಯಲ್ಲಿದ್ದ ಕಂಬವನ್ನು ಹಿಡಿದುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದರು.

ಓಡಿ ಬಂದ ನಿಂಗ, ''ಭಟ್ರೆ... ನಿಮ್ಮ ದನಿನ್ನ ಹುಲಿ ಹಿಡೀತಂತೆ...'' ಎಂದು ಹೇಳಿದಾಗ, ಕೃಷ್ಣ ಭಟ್ಟರು ಹೆಂಡತಿಯ ನೆನಪಿನಲ್ಲಿ ಕಂಬಕ್ಕೊರಗಿ ಕುಳಿತಿದ್ದರು. ನಿಂಗ ಮತ್ತೊಮ್ಮೆ ಕೂಗಿಕೊಂಡ. ಭಟ್ಟರಿಗೆ ತಕ್ಷಣ ನಂಬಲಾಗಲಿಲ್ಲ. ಸುಬ್ಬಮ್ಮ ಪ್ರೀತಿಯಿಂದ ಸಾಕಿದ ಗಂಗೆಯನ್ನು ಹುಲಿ ಹಿಡಿದಿದೆಯೆಂದರೆ... ಇಲ್ಲ ಸಾಧ್ಯವೇ ಇಲ್ಲ ಎಂದುಕೊಳ್ಳುತ್ತ ಭಟ್ಟರು ನಿಂಗನ ಹಿಂದೆಯೇ ಓಡಿದರು. ಗುಡ್ಡದ ತುದಿಯಲ್ಲಿ ಗಂಗೆ ರಕ್ತದ ಮಡುವಿನಲ್ಲಿ ಪ್ರಾಣ ಬಿಟ್ಟಿತ್ತು. ಒಂದು ತಿಂಗಳ ಹಿಂದೆಯಷ್ಟೇ ಕರು ಹಾಕಿದ್ದ ಗಂಗೆ ಸತ್ತರೆ... ಕರುವಿನ ಗತಿಯೇನು ? ''ಸುಬ್ಬು, ನಿನ್ನ ನೆನಪಿಗೆ ಗಂಗೆಯೊಂದಾದ್ರೂ ಇತ್ತಲ್ಲೇ... ಅದ್ನೂ ಕರ್ಕಂಡ ಹೋದ್ಯಲ್ಲಾ, ಇನ್ನು ನಂಗ್ಯಾರೂ...?'' ಕೃಷ್ಣ ಭಟ್ಟರ ಕಣ್ಣಿನಿಂದಿಳಿದ ನೀರು, ಎದೆಯ ಮೇಲೆ ಮೂಡಿದ್ದ ಬೆವರ ಹನಿಗಳೊಂದಿಗೆ ಬೆರೆತುಹೋಯಿತು. ಸಂಜೆಯಾದರೂ ತಾಯಿ ಬಾರದಿದ್ದನ್ನು ನೋಡಿದ ಕರು ಕೊಟ್ಟಿಗೆಯಲ್ಲಿ ಕೂಗಿಕೊಳ್ಳುತ್ತಿತ್ತು.

''ಅಪ್ಪಯ್ಯ, ನಾಂಚೂರು ಶಾರ್ದೆ ಮನಿಗೆ ಹೋಬತ್ತೀನಿ'' ಎಂದು ವಾಣಿ ಕೂಗಿ ಹೇಳಿದಳು. ಕಪಾಟಿನಲ್ಲಿ ಏನನ್ನೋ ಹುಡುಕುತ್ತಿದ್ದ ಕೃಷ್ಣ ಭಟ್ಟರು, ಅಲ್ಲಿಂದಲೇ ಆಯ್ತೆಂದು ತಲೆಯಾಡಿಸಿದವರು, ಸುಮ್ಮನೆ ತಿರುಗಿನೋಡಿದರು. ವಾಣಿಯ ಕೈಯಲ್ಲೊಂದು ಚೀಲವಿತ್ತು. ''ವಾಣಿ, ಕೈಯಲ್ಲೆಂತದೇ ಅದು ಚೀಲ ?'' ಕೃಷ್ಣ ಭಟ್ಟರು ಕುತೂಹಲದಿಂದ ಕೇಳಿದರು. ''ಎಂತಿಲ್ಲ ಅಪ್ಪಯ್ಯ... ಚಪ್ಪರದಲ್ಲಿ ಸೌತೆಕಾಯಿ ಬಿಟ್ಟಿತಲ್ಲ, ನಮ್ಮನೆಗೆ ತಿನ್ನೋರ್ಯಾರಂತ ಶಾರ್ದನ ಮನೆಗೆ ತಕ್ಕಂಡ ಹೊರ್ಟೆ ಅಷ್ಟೇ'' ಎಂದು ಹೇಳಿ ಅಪ್ಪಯ್ಯನ ಮುಖ ನೋಡಿದಳು. ದಿನ ಉಡುತ್ತಿದ್ದ ಸೀರೆಗಿಂತ, ಇವತ್ತು ವಾಣಿ ಉಟ್ಟ ಸೀರೆ ಸ್ವಲ್ಪ ಹೊಸದರಂತೆ ಕಂಡಿತು. ಕೇಳಬೇಕೆಂದುಕೊಂಡವರು, ಪಾಪ ಅವಳಾದ್ರೂ ಮನೇಲಿ ಕೂತು ಏನು ಮಾಡ್ತಾಳೆ ? ಹೋಗಿಬರ್ಲಿ ಎಂದುಕೊಂಡು ಸುಮ್ಮನಾದರು. ವಾಣಿ ಮೆಟ್ಟಿಲಿಳಿದಳು.

ಕತ್ತಲಾವರಿಸಿ, ದೀಪ ಹಚ್ಚಿದರೂ ವಾಣಿ ಬರದಿದ್ದಾಗ ಕೃಷ್ಣ ಭಟ್ಟರಿಗೆ ಭಯವಾಗ ತೊಡಗಿತು. ನೋಡಿಯೇ ಬರೋಣ ಎಂದುಕೊಂಡು ಶಾರದಾಳ ಮನೆಗೆ ಹೋದರೆ ಅವಳು ಬಂದೇ ಇಲ್ಲ ಎಂದಳು. ಮತ್ತೊಂದೆರಡು ಮನೆಯಲ್ಲಿ ಕೇಳಿದರೂ ಅದೇ ಉತ್ತರ. ಹಾಗಾದರೆ ವಾಣಿ ಹೋದದ್ದಾದರೂ ಎಲ್ಲಿಗೆ ? ಎಂತಹದ್ದೋ ಒಂದು ಅನುಮಾನ ಹುಟ್ಟಿ, ಬಾವಿಯೊಳಗೆ ಬ್ಯಾಟರಿ ಬಿಟ್ಟು ನೋಡಿದರು... ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಅವಳಿಗೆಂತಾಗಿದೆ ಎಂದು ತಮ್ಮಷ್ಟಕ್ಕೆ ನಕ್ಕರು. ಬ್ಯಾಟರಿ ಬೆಳಕು ಸೌತೆ ಚಪ್ಪರದೆಡೆಗೆ ಸರಿಯಿತು... ಸೌತೆಕಾಯಿಗಳು ಹಾಗೇ ಇದ್ದವು. ಕೃಷ್ಣ ಭಟ್ಟರು ನಡುಗಿಬಿಟ್ಟರು. ಎಣ್ಣೆ ಖಾಲಿಯಾಗಿರಬೇಕು. ದೀಪ ಮಂಕಾಗಿ ಉರಿಯುತ್ತಿತ್ತು. ಆಚೀಚೆ ಓಡಾಡಿದ ಕೃಷ್ಣ ಭಟ್ಟರಿಗೆ, ತಾವು ಮಲಗುತ್ತಿದ್ದ ಮಂಚದ ಮೇಲಿನ ದಿಂಬಿನ ಕೆಳಗೆ ಬಿಳಿಹಾಳೆಯೊಂದು ಕಂಡಂತಾಗಿ ಕೈಗೆತ್ತಿಕೊಂಡು ದೀಪದ ಮಂದ ಬೆಳಕಿನಲ್ಲಿ ನೋಡಿದರು. ವಾಣಿಯದ್ದೇ ಅಕ್ಷರ !! 'ಪ್ರೀತಿಯ ಅಪ್ಪಯ್ಯನಿಗೆ, ಎಲ್ಲ ಹೆಣ್ಣು ಮಕ್ಕಳಿಗಿರುವಂತೆ ನನಗೂ ನನ್ನದೇ ಸಂಸಾರ ಗಂಡ-ಮಕ್ಕಳು ಬೇಕೆಂಬ ಕನಸಿತ್ತು. ಆದರೆ ತಂದೆಯಾದ ನೀವು, ಈ ಮಗಳ ಕನಸನ್ನು ನನಸಾಗಿಸಲಿಲ್ಲ. ಇನ್ನು ನೀವು ನನ್ನ ಕನಸನ್ನು ನನಸಾಗಿಸುತ್ತೀರೆಂಬ ನಂಬಿಕೆ ನನಗಿಲ್ಲ. ಅದಕ್ಕೇ ನನ್ನ ಕನಸನ್ನು ನಾನೇ ನನಸಾಗಿಸಿಕೊಳ್ಳಲು ನಿರ್ಧರಿಸಿ ಡ್ರೈವರ್ ನಾಗರಾಜನೊಂದಿಗೆ ಹೋಗುತ್ತಿದ್ದೇನೆ. ಅವನು ಬೇರೆ ಜಾತಿಯವನೆಂದು ತಿಳಿದಿದೆ. ಆದರೆ ಕನಸಿಗೆ ಜಾತಿ-ಬಣ್ಣ-ಅಂತಸ್ತಿನ ಹಂಗಿರುವುದಿಲ್ಲ ಎಂದುಕೊಂಡಿದ್ದೇನೆ. ನನಸಿಗೆ ? ಅದು ನನಗೆ ತಿಳಿದಿಲ್ಲ. ದಯವಿಟ್ಟು ನನ್ನನ್ನು ಹುಡುಕುವ ಪ್ರಯತ್ನ ಮಾಡಬೇಡಿ. ನಿಮ್ಮ ಮಗಳು ಚೆನ್ನಾಗಿರಬೇಕೆಂದಿದ್ದರೆ, ಅಲ್ಲಿಂದಲೇ ಆಶೀರ್ವಾದ ಮಾಡಿ. ನಾನು ಚೆನ್ನಾಗಿರುತ್ತೇನೆ. ನಿಮ್ಮ ಮಗಳು ವಾಣಿ'. ಕೃಷ್ಣ ಭಟ್ಟರ ದೇಹ ಕಂಪಿಸುತ್ತಿತ್ತು. ''ವಾಣಿ, ಎಂತಹ ಕೆಲ್ಸ ಮಾಡಿದೆಯಮ್ಮಾ...'' ಜೋರಾಗಿ ಚೀರಿಕೊಂಡ ಕೃಷ್ಣ ಭಟ್ಟರಿಗೆ ಥಟ್ಟನೆ ಎಚ್ಚರವಾಯಿತು.

ಇದೂ ಕೂಡ ಕನಸು. ಕೆಟ್ಟ ಕನಸು! ಕೃಷ್ಣ ಭಟ್ಟರು ಮಲಗಿದಲ್ಲೇ ಬೆವರಿನಿಂದ ತೊಯ್ದುಹೋಗಿದ್ದರು. ದೇಹವಿನ್ನೂ ಕಂಪಿಸುತ್ತಿತ್ತು. ಭಟ್ಟರಿಗೆ ಕಣ್ಣು ತೆರೆಯಲು ಭಯವಾಯಿತು. ಗಡಿಯಾರ ಆರುಗಂಟೆ ಹೊಡೆದು ಮೌನವಾಯಿತು. ಆಗಲೇ ಬೆಳಗಾಗಿದೆ! ಬೆಳಗಿನ ಜಾವ ಕಾಣೋ ಕನ್ಸು - ನನ್ಸಾಗುತ್ತೆ ಎಂದು ಅಪ್ಪ ಹೇಳಿದ ಮಾತು ನೆನಪಾಗಿ, ಕೃಷ್ಣ ಭಟ್ಟರು ಭಯದಿಂದ ಮತ್ತಷ್ಟು ಹೊದಿಕೆಯೊಳಗೆ ಹುದುಗಿಕೊಳ್ಳಲು ಪ್ರಯತ್ನಿಸಿದರು. ಸುಬ್ಬು ಕನಸು ಕೂಡ ಹೀಗೆ ಬೆಳಗಿನ ಜಾವವೇ ಕಂಡಿದ್ದು... ಸುಬ್ಬು ನನಸಿನಲ್ಲಿ ಸತ್ತೇಹೋಗಿದ್ದಳು. ಈಗ ವಾಣಿ... ಓಡಿ ಹೋಗಿದ್ದರೆ ?! ಕಲ್ಪಿಸಿಕೊಂಡ ಕೃಷ್ಣ ಭಟ್ಟರ ಎದೆ ಜೋರಾಗಿ ಹೊಡೆದುಕೊಳ್ಳಲಾರಂಭಿಸಿತು. ಮುಖದವರೆಗೆ ಹೊದಿಕೆ ಹೊದ್ದುಕೊಂಡೇ ತಮ್ಮ ದಿಂಬಿನ ಬಳಿ ಕೈಯಾಡಿಸಿದರು. ಕೈಗೆ ಚೀಟಿಯೊಂದು ತಗುಲಿತು! ಕೃಷ್ಣ ಭಟ್ಟರ ನಾಲಿಗೆಯಲ್ಲಿ ಪಸೆಯೆಲ್ಲ ಆರಿತು. ಹೊದಿಕೆಯನ್ನು ನಿಧಾನವಾಗಿ ದೂರ ತಳ್ಳಿ, ಮಲಗಿಕೊಂಡಲ್ಲೇ ಚೀಟಿಯನ್ನು ಬಿಚ್ಚಿ ನೋಡಿದರು. ವಾಣಿಯದ್ದೇ ಅಕ್ಷರ, ಕನಸಿನಲ್ಲಿ ಕಂಡ ವಿಷಯವೇ! ಕೃಷ್ಣ ಭಟ್ಟರ ಕಣ್ಣಿನಿಂದ ಒಂದು ಹನಿ ಕಣ್ಣೀರೂ ಹೊರಬರಲಿಲ್ಲ. ಕೃಷ್ಣ ಭಟ್ಟರು ತುಂಬಾ ಹೊತ್ತು ಹಾಸಿಗೆಯಲ್ಲಿ ಮಲಗಿಯೇ ಇದ್ದರು.

ಊರಿನ ಕಲ್ಲು ಕ್ವಾರಿಗೆ ಬರುತ್ತಿದ್ದ ಲಾರಿ ಡ್ರೈವರ್ ನಾಗರಾಜನೊಂದಿಗೆ ಕೃಷ್ಣ ಭಟ್ಟರ ಮಗಳು ವಾಣಿ ಓಡಿಹೋಗಿದ್ದು, ಊರಿಡೀ ಸುದ್ದಿಯಾಗಿತ್ತು. ತುಂಬಾ ದಿನದ ನಂತರ ಪೇಟೆಯ ಕಡೆ ಹೋಗಿದ್ದ ಕೃಷ್ಣ ಭಟ್ಟರನ್ನು ಯಾರೂ ಏನು ? ಎತ್ತ ? ಎಂದು ಕೇಳಲಿಲ್ಲ. ಎಲ್ಲರೂ ಮರೆಯಲ್ಲಿ ನಗುವವರೇ. ಬೆನ್ನಹಿಂದೆ ಆಡುತ್ತಿದ್ದ ಮಾತುಗಳು ತಣ್ಣಗೆ ಕೃಷ್ಣ ಭಟ್ಟರ ಕಿವಿ ಹೊಕ್ಕು, ಕಾದ ಸೀಸದಂತೆ ಕರಗಿ... ಎಲ್ಲವೂ ಬದಲಾಗಿದೆ ಎನ್ನಿಸಿತು. ತಿಂಗಳು ಕಳೆದರೂ ಪೌರೋಹಿತ್ಯಕ್ಕೆ ಕರೆ ಬರಲಿಲ್ಲ. ನಿಮಿತ್ತ ಕೇಳಲು ಒಬ್ಬರೂ ಭಟ್ಟರ ಮನೆ ಉಣಗೋಲು ದಾಟಲಿಲ್ಲ. ಇಡೀ ಮನೆಯೊಳಗೆ ಕೃಷ್ಣ ಭಟ್ಟರೊಬ್ಬರೇ... ಮನೆಯೊಳಗೆಲ್ಲ ಓಡಾಡಿದರೂ ಬೇಕೆಂದುಕೊಂಡದ್ದು ಸಿಗದೆ... ಬರಿಗೈಯಲ್ಲಿ ಭಣಗುಡುತ್ತಿರುವಂತೆ... ಮತ್ತೆ ಮತ್ತೆ ಹೆಂಡತಿಯ ನೆನಪು... ಅಂಗಳದಲ್ಲಿ ನಿಂತ ಕೃಷ್ಣ ಭಟ್ಟರು ಸುತ್ತೆಲ್ಲ ನೋಡಿದರು. ಮತ್ತೆ ಹೆಂಡತಿಯ ನೆನಪು ಕಣ್ಣುಗಳಲ್ಲಿ ನೀರಾಡಿಸಿತು. ''ಸುಬ್ಬು... ಬೇಡ ಕಣೇ, ನನ್ನ ಒಂಟಿ ಮಾಡ್ಬೇಡ. ಮಗಳಿಲ್ಲದೇ ಬದ್ಕಬಲ್ಲೆ, ಆದರೆ ನೀನಿಲ್ಲದೇ... ಇಲ್ಲ ಸುಬ್ಬು, ನನಗಾಗೋದಿಲ್ಲ... ಸುಬ್ಬು ನೀ ಸುಮ್ನೆ ಮಲಗಿರು. ನಿಂಗೆ ಸ್ನಾನ ಮಾಡಿಸ್ತೀನಿ, ಸೀರೆ ಉಡಿಸ್ತೀನಿ, ಊಟ ಮಾಡಿಸ್ತೀನಿ... ಜೋಗುಳ ಹಾಡ್ತೀನಿ... ಸುಬ್ಬು ನೀ ಬೇಕು ಕಣೇ... ನೀನಿದ್ದರೆ ನನಗೆಲ್ಲರೂ ಇದ್ದಾಗೆ... ಬಾ ಸುಬ್ಬು... ಬಾರೆ... ಬಾರೆ...'' ಕೃಷ್ಣ ಭಟ್ಟರು ಎಲ್ಲಾ ದಿಕ್ಕಿಗೂ ಮುಖ ಮಾಡಿ ಜೋರಾಗಿ ಕೂಗಿಕರೆದರು. ಕೊಟ್ಟಿಗೆಯಲ್ಲಿ ತಾಯಿಯಿಲ್ಲದ ಕರು ಹಸಿವಿನಿಂದ ಕ್ಷೀಣ ಧ್ವನಿಯಲ್ಲಿ ಕೂಗಿಕೊಂಡಿತು. ಕೃಷ್ಣ ಭಟ್ಟರು ಕರುವನ್ನೇ ನೋಡುತ್ತ ನಿಂತುಬಿಟ್ಟರು.

ಕೆ. ಗಣೇಶ್ ಕೋಡೂರು
ನಂ. ೩೨೫೩, ಮೊದಲನೇ ಮುಖ್ಯರಸ್ತೆ, ನಾಲ್ಕನೇ ತಿರುವು, ಮರಿಯಪ್ಪನ ಪಾಳ್ಯ
ರಾಜಾಜಿನಗರ ೨ನೇ ಹಂತ, ಬೆಂಗಳೂರು - ೫೬೦ ೦೧೦

# ನಮ್ಮ ಶಿಕ್ಷಣ ವಸಾಹತುಶಾಹಿಯೇ ?

ಡಾ॥ ಮಹಾಬಲೇಶ್ವರ ರಾವ್

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಯಾವ ಹಂತದಿಂದಲೇ ಆರಂಭಿಸಿದರೂ ಜಾಗತೀಕರಣ ಮತ್ತು ಉದಾರೀಕರಣದ ಈ ದಿನಗಳಲ್ಲಿ ಸಾಮಾಜಿಕ ಆರ್ಥಿಕ ತಾರತಮ್ಯಗಳು ಹೆಚ್ಚುತ್ತಲೇ ಹೋಗುತ್ತವೆ ಎಂಬುದು ನಿರ್ವಿವಾದ. ಇಂಗ್ಲಿಷ್ ತಾರತಮ್ಯವನ್ನು ಸೃಷ್ಟಿಸುವ ಹಾಗೆಯೇ ವಿಮೋಚನೆಯ ಸಾಧನವೂ ಆಗಬಲ್ಲುದು; ಆಗಿದೆ. ಹೀಗಿರುವಾಗ ವಸಾಹತುಶಾಹಿ ಶಿಕ್ಷಣದಿಂದ ಲಾಭಗಳನ್ನು ಪಡೆದು ಈಗ 'ವಸಾಹತುಶಾಹಿ' ಶಿಕ್ಷಣ ಎಂದು ಹಳಿಯುವುದೇಕೆ ? ವಸಾಹತುಶಾಹಿ ಶಿಕ್ಷಣ ಅನ್ನುವಾಗ ಅದರಲ್ಲಿ ಇಂಗ್ಲಿಷ್ ಅಂತರ್ಗತವಾಗಿದೆ. ಈ ಶಿಕ್ಷಣ ಬೇಡ ಎನ್ನುವಿರಾದರೆ ಸದ್ಯ ಇಂಗ್ಲಿಷ್ ರಹಿತವಾದ ಶಿಕ್ಷಣವನ್ನು ಅಪ್ಪಿಕೊಳ್ಳಲು ವಸಾಹತುಶಾಹಿ ಶಿಕ್ಷಣ ವಿರೋಧಿಗಳು ಸಿದ್ಧರಿದ್ದಾರಾ ?

"ವಸಾಹತುಶಾಹಿ ನೀತಿಯ ನಮ್ಮ ಶಿಕ್ಷಣ ಕ್ರಮ ಸಾಮಾಜಿಕ ಅರಿವನ್ನು ಮೂಡಿಸುವಲ್ಲಿ ವಿಫಲವಾಗಿದೆ" ಎಂಬ ಸವಕಲು ಮಾತುಗಳನ್ನು ಹೆಚ್ಚು ಕಡಿಮೆ ಎಲ್ಲ ವೇದಿಕೆಗಳಿಂದ ಕೇಳುತ್ತೇವೆ. ನಮ್ಮ ಶಿಕ್ಷಣ ವ್ಯವಸ್ಥೆಯನ್ನು ತೆಗಳುವ ಈ ಅಸ್ತ್ರ ಮೊಂಡಾಗಿದೆ, ನಿರುಪಯುಕ್ತವಾಗಿದೆ ಎಂಬುದನ್ನು ಬಳಸುವ ಮಂದಿ ಅರಿತಿಲ್ಲ. ಜನ ರಂಜನೆಯ ಬೀಸು ಹೇಳಿಕೆಗಳನ್ನು ನೀಡಿದರೆ ಪರಿಣತರಾಗಬಹುದು ಎಂದು ಕೆಲವರು ಭಾವಿಸಿದಂತಿದೆ. ಅಧ್ಯಯನಶೀಲತೆಯ ಕೊರತೆ ಈ ಮಾತುಗಳ ಹಿಂದಿದೆ.

ವಸಾಹತುಶಾಹಿ ಈ ನೆಲದಿಂದ ಕಾಲ್ಕಿತ್ತು ಅದಾಗಲೆ ಐವತ್ತೊಂಬತ್ತು ವರ್ಷಗಳು ಕಳೆದಿವೆ. ಬ್ರಿಟಿಷರಿಗೂ ಮೊದಲು ಭಾರತದಲ್ಲಿ ದೇಶೀಯ ಶಿಕ್ಷಣ ವ್ಯವಸ್ಥೆ ರೂಢಿಯಲ್ಲಿತ್ತು. ಬ್ರಿಟಿಷರ ದೆಸೆಯಿಂದಾಗಿ ಆಂಗ್ಲ ವಿದ್ಯಾಭ್ಯಾಸ, ಐರೋಪ್ಯ ಸಾಹಿತ್ಯ ಹಾಗೂ ಮಾನವಿಕ ಮತ್ತು ವಿಜ್ಞಾನಗಳ ಅಧ್ಯಯನಕ್ಕೆ ಪ್ರಾಶಸ್ತ್ಯ ಲಭಿಸಿತು. ಈ ನಡುವೆ ಗಾಂಧೀಜಿ ವಾರ್ಧಾ ಶಿಕ್ಷಣ ಯೋಜನೆ ಹೆಸರಿನಲ್ಲಿ ನಮ್ಮ ನೆಲಕ್ಕೆ ಹೊಂದಬಹುದಾದ ಒಂದು ಶಿಕ್ಷಣನೀತಿಯನ್ನು ರೂಪಿಸಿದರು.

ಸ್ವಾತಂತ್ರ್ಯಾನಂತರದಿಂದ ಇದು ತನಕ ನಾವು ನಮ್ಮದೇ ಆದ ಒಂದು ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವ ನಿಟ್ಟಿನಲ್ಲಿ ಹೆಣಗಾಡುತ್ತಾ ಬಂದಿದ್ದೇವೆ. ವಸಾಹತುಶಾಹಿ ನೀತಿಯನ್ನು ದೂರ ಮಾಡುತ್ತಾ ಬಂದಿದ್ದೇವೆ. ಶಿಕ್ಷಣದಲ್ಲಿ ವಸಾಹತುನೀತಿ ಏನೆಂಬುದನ್ನು ಗಮನಿಸಿ :

೧. ಈ ಶಿಕ್ಷಣ ಕೇವಲ ಕೆಲವು ವರ್ಗಗಳಿಗೆ, ವ್ಯಕ್ತಿಗಳಿಗೆ ಸೀಮಿತವಾಗಿತ್ತು.

೨. ದೇಶದ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಿಂತಲೂ ಪರಕೀಯರ ಆಡಳಿತ ಯಂತ್ರಕ್ಕೆ ಸಹಕಾರಿಯಾಗಿತ್ತು.

೩. ಶಿಕ್ಷಣದ ವಿವಿಧ ಹಂತಗಳಲ್ಲಿ ಮೇಲ್ಮುಖ ಚಲನೆಯ ಪ್ರಮಾಣ ತುಂಬ ಸೀಮಿತವಾಗಿತ್ತು.

೪. ವಸಾಹತುಶಾಹಿ ಶಿಕ್ಷಣ ನಗರಕೇಂದ್ರಿತವಾಗಿತ್ತು. ಗ್ರಾಮೀಣ ಭಾಗಗಳ ಜನರು ಶಿಕ್ಷಣಾವಕಾಶಗಳಿಂದ ವಂಚಿತರಾಗಿದ್ದರು.

೫. ವಸಾಹತುಶಾಹಿ ಶಿಕ್ಷಣ ದುಡಿಯುವ ವರ್ಗದವರನ್ನು, ಸಾಮಾಜಿಕವಾಗಿ ಹಿಂದುಳಿದವರನ್ನು ದೂರವೇ ಇಟ್ಟಿತು. ಅವರಿಗೆ ಅದು ಎಟುಕುವಂತಿರಲಿಲ್ಲ.

೬. ಶಿಕ್ಷಕ ಕೇಂದ್ರಿತವಾದ ಈ ಶಿಕ್ಷಣ ರಾಷ್ಟ್ರೀಯ ಭಾವೈಕ್ಯವನ್ನು ಮುರಿಯುವ ಹುನ್ನಾರ ಹೊಂದಿತ್ತು. ಭಾರತೀಯತೆ ಬಗ್ಗೆ ಗೌರವ ಮೂಡಿಸುವಂತಿರಲಿಲ್ಲ.

ಸ್ವಾತಂತ್ರ್ಯಾನಂತರ ರೂಪುಗೊಂಡ ನಮ್ಮ ಶಿಕ್ಷಣ ವ್ಯವಸ್ಥೆ ಜಗತ್ತಿನಲ್ಲೇ ಅತ್ಯಂತ ದೊಡ್ಡ ಶಿಕ್ಷಣ ಪದ್ಧತಿ ಎಂದು ಹೆಸರಾಗಿದೆ. ಕಳೆದ ಆರು ದಶಕಗಳಲ್ಲಿ ನಮ್ಮ ಶಿಕ್ಷಣವು ತನ್ನದೇ ಒಂದು ಚಹರೆಯನ್ನು ಪಡೆಯಲು ಪ್ರಯತ್ನಿಸಿ ತಕ್ಕ ಮಟ್ಟಿಗೆ ಸಫಲವಾಗಿದೆ. ಸ್ವಾತಂತ್ರ್ಯದ ಬಳಿಕ ರೂಪುಗೊಂಡ ನಮ್ಮ ಶಿಕ್ಷಣ ವ್ಯವಸ್ಥೆ ಖಂಡಿತಕ್ಕೂ ವಸಾಹತುಶಾಹಿ ನೀತಿಯಲ್ಲ. ಇಂಗ್ಲಿಷ್ ಕಲಿಕೆ ಹಾಗೂ ಆಧುನಿಕ ವಿಷಯಗಳ ಕಲಿಕೆ ಮುಂದುವರಿದಿದೆ ಎಂದ ಮಾತ್ರಕ್ಕೆ ಅದು ವಸಾಹತು ನೀತಿ ಆಗಬೇಕಿಲ್ಲ. ಈ ನೀತಿಗಿಂತ ಭಿನ್ನವಾಗಿ ಈ ಕೆಳಗೆ ನಮೂದಿಸಿದಂತೆ ನಾವು ನಮ್ಮದೇ ಹಾದಿ ತುಳಿದಿದ್ದೇವೆ.

೧. ವರ್ಗ ಶಿಕ್ಷಣದ ಕಲ್ಪನೆಯನ್ನು ದೂರಮಾಡಿ ಸಮೂಹ ಶಿಕ್ಷಣದ ಪರಿಕಲ್ಪನೆಯನ್ನು ಜಾರಿಗೊಳಿಸಿ ಗುಣ, ಪರಿಮಾಣ ಹಾಗೂ ಸಮತೆಯನ್ನು ಕಾಯ್ದುಕೊಳ್ಳುವ ಪ್ರಯತ್ನ ಮಾಡಿದ್ದೇವೆ.

೨. ಪ್ರಾದೇಶಿಕ ಭಾಷಾ ಮಾಧ್ಯಮಗಳಿಗೆ, ಅವುಗಳ ಅಧ್ಯಯನಕ್ಕೆ ಅವಕಾಶ ನೀಡಿದ್ದೇವೆ.

೩. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ, ಶಿಕ್ಷಣದ ಔದ್ಯೋಗೀಕರಣ ಹಾಗೂ ಉನ್ನತ ಶಿಕ್ಷಣದ ವಿಸ್ತರಣೆ. ವೈದ್ಯಕೀಯ, ಯಂತ್ರಜ್ಞಾನ, ತಂತ್ರಜ್ಞಾನ ಮೊದಲಾದ ವೃತ್ತಿಪರ ಶಿಕ್ಷಣಕ್ಕೆ ಸಂಶೋಧನೆಗೆ ಪ್ರಾಶಸ್ತ್ಯ ನೀಡಿದ್ದೇವೆ.

೪. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ದೇಶಾದ್ಯಂತ ಏಕರೀತಿ ಶಿಕ್ಷಣಕ್ರಮ ಜಾರಿಗೊಳಿಸಿದ್ದೇವೆ.

೫. ನಿಮ್ನ ಹಾಗೂ ಬಡವರ್ಗಗಳಿಗೆ, ಶೋಷಿತರಿಗೆ, ಪರಿಶಿಷ್ಟ ಜಾತಿ/ವರ್ಗದವರಿಗೆ ವಿವಿಧ ಪ್ರೋತ್ಸಾಹನ ಯೋಜನೆಗಳು, ಶಿಷ್ಯವೇತನಗಳು, ಶುಲ್ಕ ವಿನಾಯಿತಿ ಮತ್ತು ಮೀಸಲಾತಿ ಸೌಲಭ್ಯ ಒದಗಿಸಲಾಗಿದೆ.

೬. ವಿದ್ಯಾರ್ಥಿ ಕೇಂದ್ರಿತ, ಕಲಿಕೆ ಆಧಾರಿತ ಶಿಕ್ಷಣ ಕ್ರಮ ನಿರೂಪಣೆಗೆ ಗಂಭೀರ ಯತ್ನಗಳು, ಕಲಿಯುವ ಸಮಾಜದ, ಜ್ಞಾನಸಮಾಜದ ನಿರ್ಮಾಣ.

೭. ರಾಷ್ಟ್ರೀಯ ಭಾವೈಕ್ಯ, ಮಾನವೀಯತೆ ಹಾಗೂ ಪ್ರಕೃತಿ ಪ್ರೇಮ, ಸಮಾನತೆ, ಭ್ರಾತೃತ್ವ, ಸಮಾಜವಾದ, ಪ್ರಜಾಪ್ರಭುತ್ವ ಹಾಗೂ ಮತ ನಿರಪೇಕ್ಷತೆ ಮುಂತಾದ ಮೌಲ್ಯಗಳನ್ನು ಬೆಳೆಸುವ ಯತ್ನ ನಡೆದಿದೆ.



ಹೀಗೆ ಕಳೆದ ಆರು ದಶಕಗಳಲ್ಲಿ ದೇಶದಲ್ಲಿ ಹಮ್ಮಿಕೊಂಡ ಶೈಕ್ಷಣಿಕ ಕಾರ್ಯಕ್ರಮಗಳನ್ನು, ಶೈಕ್ಷಣಿಕ ನೀತಿಗಳನ್ನು ಸರಿಯಾಗಿ ಪರಿಶೀಲಿಸಿದರೆ ವಸಾಹತುಶಾಹಿ ನೀತಿಯಿಂದ ಮುಕ್ತರಾಗಿ ನಮ್ಮದೇ ಆದ ಶಿಕ್ಷಣ ವ್ಯವಸ್ಥೆ ರೂಪಿಸಿಕೊಳ್ಳಲು ದೇಶ ಮಾಡಿರುವ ಪ್ರಯತ್ನ ಯಾರಿಗಾದರೂ ಅರಿವಿಗೆ ಬಂದೀತು. ಈ ಪ್ರಯತ್ನಗಳು ಉಗ್ರರಾಷ್ಟ್ರಾಭಿಮಾನಿಗಳಿಗೆ, ಸನಾತನಿಗಳಿಗೆ ಹಿತಕರ ಅನ್ನಿಸದಿರುವುದು ಬೇರೆ ಮಾತು.

ಈ ಹಿನ್ನೆಲೆಯಲ್ಲೇ ನಮ್ಮ ಶಿಕ್ಷಣವು ಸಾಮಾಜಿಕ ಅರಿವು ಮೂಡಿಸಲು ವಿಫಲವಾಗಿದೆ ಎಂಬ ಮಾತನ್ನು ಪರಿಶೀಲಿಸಬೇಕು. ಸಾಮಾಜಿಕ ಅರಿವು ಮೂಡಿಸುವ ಪ್ರಯತ್ನವು ಇದುವರೆಗೆ ಬಂದಿರುವ ಎಲ್ಲ ಶಿಕ್ಷಣ ದಾಖಲೆಗಳಲ್ಲಿ ಪ್ರಖರವಾಗಿ ವ್ಯಕ್ತವಾಗಿದೆ. ೧೯೪೮-೪೯ರ ರಾಧಾಕೃಷ್ಣನ್ ಅವರ ವಿಶ್ವವಿದ್ಯಾನಿಲಯ ಶಿಕ್ಷಣ ಆಯೋಗದ ವರದಿಯಿಂದ ತೊಡಗಿ ೨೦೦೫ರ ರಾಷ್ಟ್ರೀಯ ಶಿಕ್ಷಣ ಪಠ್ಯಕ್ರಮ ಚೌಕಟ್ಟುವರೆಗಿನ ಯಾವುದೇ ಶಿಕ್ಷಣ ದಾಖಲೆಯನ್ನು ಪರಿಶೀಲಿಸಿದರೂ ಅಲ್ಲಿ ಮತ್ತೆ ಮತ್ತೆ ವ್ಯಕ್ತಿತ್ವ ವಿಕಸನ, ಸರ್ವಾಂಗೀಣ ವ್ಯಕ್ತಿತ್ವ ವಿಕಾಸ, ಸಮಾಜ ಜೀವನಕ್ಕಾಗಿ ಶಿಕ್ಷಣ, ಪೌರತ್ವಕ್ಕಾಗಿ ಶಿಕ್ಷಣ, ಪ್ರಜಾಪ್ರಭುತ್ವಕ್ಕಾಗಿ ಶಿಕ್ಷಣ, ಸಮಾಜ-ಸಮುದಾಯ ಸೇವೆ, ರಾಷ್ಟ್ರ ನಿರ್ಮಾಣದಲ್ಲಿ ಯುವ ಜನತೆಯ ಪಾತ್ರ, ಉತ್ಪಾದಕತ್ವ, ನಾಯಕತ್ವ, ಸಾಂಸ್ಕೃತಿಕ ಗೌರವ ಮುಂತಾದ ಕಾಳಜಿಗಳು ಹಾಗೂ ಆ ಕಾಳಜಿಗಳ ಸಂಗೋಪನದ ಕಾರ್ಯಕ್ರಮಗಳು ನಿರೂಪಿತವಾಗಿವೆ. ಹೀಗಾಗಿ ಶಿಕ್ಷಣ ನೀತಿ ವಸಾಹತುಶಾಹಿ




ಧೋರಣೆಯದು ಎನ್ನುವಂತಿಲ್ಲ.

ಶಿಕ್ಷಣ ನೀತಿಯಲ್ಲಿ ನಿರೂಪಿತವಾದ ಎಷ್ಟೋ ವಿಚಾರಗಳನ್ನು ತಳಮಟ್ಟದ ಶಿಕ್ಷಕರು ಅರ್ಥಮಾಡಿಕೊಳ್ಳುವುದಿಲ್ಲ. ಅವರಿಗೆ ಅವನ್ನು ಸರಿಯಾಗಿ ಮನದಟ್ಟುಮಾಡಿಸುವ ಪ್ರಯತ್ನಗಳು ಸರಿಯಾಗಿ ಆಗುವುದಿಲ್ಲ. ಹೀಗಾಗಿ ಶಿಕ್ಷಕರು ಶಾಲೆ-ಕಾಲೇಜುಗಳಲ್ಲಿ ವಿವಿಧ ವಿಷಯಗಳನ್ನು ಯಾಂತ್ರಿಕವಾಗಿ ಬೋಧಿಸುತ್ತಾರೆಯೇ ಹೊರತು ಯಾವುದೇ ವಿಷಯ, ಪಾಠ ಇತ್ಯಾದಿಗಳನ್ನು ವಿದ್ಯಾರ್ಥಿಗಳು ಏಕೆ ಅಧ್ಯಯನ ಮಾಡಬೇಕು, ಯಾವ ಉದ್ದೇಶಗಳ ಸಾಧನೆಗಾಗಿ ನಿರ್ದಿಷ್ಟ ಪಾಠಗಳನ್ನು ನಿಗದಿಪಡಿಸಲಾಗಿದೆ, ಶಿಕ್ಷಣನೀತಿ ನಿರೂಪಕರು ಕಂಡ ಕನಸುಗಳನ್ನು ತರಗತಿಯ ಸಂದರ್ಭದಲ್ಲಿ ಶಿಕ್ಷಕನಾಗಿ ಸಾಕಾರಗೊಳಿಸುವುದು ಹೇಗೆ, ತನ್ನ ನಿಜ ಪಾತ್ರವೇನು, ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳದೆ ಪಠ್ಯಪುಸ್ತಕ ಆಧರಿಸಿ ಅಭ್ಯಾಸ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಮಾದರಿಯಲ್ಲಿ ಬೋಧನೆ ಮಾಡುತ್ತಿರುವುದರಿಂದ ಶಿಕ್ಷಣ ನೀತಿ ನಿರೂಪಣಾ ಕಡತಗಳಲ್ಲಿ ಪಡಿಮೂಡಿಸಿದ ಆದರ್ಶಗಳು ವಾಸ್ತವ ಶೈಕ್ಷಣಿಕ ಸಂದರ್ಭದಲ್ಲಿ ಸಾಕಾರಗೊಳ್ಳುತ್ತಿಲ್ಲ.

ಮೇಲಾಗಿ ಎಲ್ಲ ಹಂತಗಳ ಬೋಧನೆ-ಕಲಿಕೆಯಲ್ಲಿ ನಾವು ನೀಡುವ ಒತ್ತುಗಳು ಕೂಡ ಈ ದುಃಸ್ಥಿತಿಗೆ ಕಾರಣ. ಪರೀಕ್ಷೆ, ಉತ್ತೀರ್ಣತೆ, ಅಂಕಗಳು, ರ್‍ಯಾಂಕುಗಳು, ಸ್ಪರ್ಧೆ-ಯಶಸ್ಸು-ಉದ್ಯೋಗ-ಸಂಪಾದನೆ ಈ ಅಂಶಗಳಿಗೆ ಮಹತ್ವ ನೀಡಲಾಗುತ್ತಿದೆ. ಶಿಕ್ಷಣವೇತ್ತರು, ಚಿಂತಕರು ಇವುಗಳ ಬಗ್ಗೆ ಎಚ್ಚರಿಕೆ ನೀಡಿದಾಗ್ಯೂ ಇಡೀ ಸಮಾಜ ಅದರಲ್ಲೂ ಜಾಗತೀಕರಣ ಹಾಗೂ ಉದಾರೀಕರಣದ ಸಂದರ್ಭದಲ್ಲಿ ಸ್ಪರ್ಧಾತ್ಮಕತೆಗೆ, ಯಶಸ್ಸಿಗೆ ಹಾಗೂ ವೈಭವದ ಜೀವನಕ್ಕೆ ಒತ್ತು ನೀಡುತ್ತಿದೆ. ಇದು ಶಿಕ್ಷಣ ವ್ಯವಸ್ಥೆಯ ಹೊರಗಿನ ಸಮಾಜವು ಶಿಕ್ಷಣ ವ್ಯವಸ್ಥೆಯ ಮೇಲೆ ಹೇರುತ್ತಿರುವ ಒತ್ತಡ. ಹೀಗಾಗಿ ಮೌಲ್ಯಗಳು, ಸಾಮಾಜಿಕ ಅರಿವು ಇತ್ಯಾದಿಗಳೆಲ್ಲ ಶಿಕ್ಷಣ ನೀತಿಯಲ್ಲಿ ನಿರೂಪಿತವಾಗಿದ್ದರೂ ಬೋಧನೆ-ಕಲಿಕೆಯ ಸಂದರ್ಭದಲ್ಲಿ ಮತ್ತು ಕಣ್ಣೆದುರಿನ ಸಮಾಜ ಜೀವನದಲ್ಲಿ ಆಚರಣೆಯಲ್ಲಿ ಇಲ್ಲದಿರುವಾಗ ಅದನ್ನು ಕೇವಲ ಪಾಠಗಳ ಮೂಲಕ ಬೆಳೆಸುವುದೆಂತು ?

ನಮ್ಮ ಮಾತುಗಳು, ಹೇಳಿಕೆಗಳು, ಚಿಂತನೆಗಳು ಎಷ್ಟೊಂದು ವಿಪರ್ಯಾಸಕರವಾಗಿವೆಯೆಂದರೆ ಆಂಗ್ಲ ವಿದ್ಯಾಭ್ಯಾಸಕ್ರಮ ವಸಾಹತುಶಾಹಿ ಶಿಕ್ಷಣದಿಂದ ಉದ್ಭವಿಸಿ ನಮ್ಮ ಪರಂಪರಾಗತ ವಸ್ತುಗಳು ನಶಿಸಿವೆ ಎಂದು ಬೊಬ್ಬಿರಿದ ಬಾಯಲ್ಲೇ ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸಿ, ಬಡಮಕ್ಕಳಿಗೆ, ಗ್ರಾಮೀಣ ಮಕ್ಕಳಿಗೆ ಹೇಗಾದರೂ ಸರಿ ಇಂಗ್ಲಿಷ್ ಕಲಿಸಿ ಎಂದೂ ಒತ್ತಾಯಿಸಲಾಗುತ್ತಿದೆ.

ಇಂಗ್ಲಿಷ್ ವಿದ್ಯಾಭ್ಯಾಸವನ್ನು ಯಾವ ಹಂತದಿಂದಲೇ ಆರಂಭಿಸಿದರೂ ಜಾಗತೀಕರಣ ಮತ್ತು ಉದಾರೀಕರಣದ ಈ ದಿನಗಳಲ್ಲಿ ಸಾಮಾಜಿಕ ಆರ್ಥಿಕ ತಾರತಮ್ಯಗಳು ಹೆಚ್ಚುತ್ತಲೇ ಹೋಗುತ್ತವೆ ಎಂಬುದು ನಿರ್ವಿವಾದ. ಇಂಗ್ಲಿಷ್ ತಾರತಮ್ಯವನ್ನು ಸೃಷ್ಟಿಸುವ ಹಾಗೆಯೇ ವಿಮೋಚನೆಯ ಸಾಧನವೂ ಆಗಬಲ್ಲುದು; ಆಗಿದೆ. ಹೀಗಿರುವಾಗ ವಸಾಹತುಶಾಹಿ ಶಿಕ್ಷಣದಿಂದ ಲಾಭಗಳನ್ನು ಪಡೆದು ಈಗ 'ವಸಾಹತುಶಾಹಿ' ಶಿಕ್ಷಣ ಎಂದು ಹಳಿಯುವುದೇಕೆ ? ವಸಾಹತುಶಾಹಿ ಶಿಕ್ಷಣ ಅನ್ನುವಾಗ ಅದರಲ್ಲಿ ಇಂಗ್ಲಿಷ್ ಅಂತರ್ಗತವಾಗಿದೆ. ಈ ಶಿಕ್ಷಣ ಬೇಡ ಎನ್ನುವಿರಾದರೆ ಸದ್ಯ ಇಂಗ್ಲಿಷ್ ರಹಿತವಾದ ಶಿಕ್ಷಣವನ್ನು ಅಪ್ಪಿಕೊಳ್ಳಲು ವಸಾಹತುಶಾಹಿ ಶಿಕ್ಷಣ ವಿರೋಧಿಗಳು ಸಿದ್ಧರಿದ್ದಾರಾ ?

ಡಾ|| ಮಹಾಬಲೇಶ್ವರ ರಾವ್
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಮಹಾವಿದ್ಯಾಲಯ
ಕುಂಜಿಬೆಟ್ಟು, ಉಡುಪಿ - ೫೭೬ ೧೦೨



# ಪುತಿನ

## ಕಾವ್ಯ ಆವಾಹಿತ ಸ್ಮೃತಿ ವಾಙ್ಮಯ

ಈ ಒಂದು ಭೂಮಿಕೆಯಿಂದ ಪುತಿನ ಅವರ ಕಾವ್ಯವನ್ನು ನಾವು ಪ್ರವೇಶಿಸುವುದಾದರೆ, ಅದು ಹೆಗ್ಗೋಡಿನ ಕೆ. ವಿ. ಸುಬ್ಬಣ್ಣನವರು ಈಗಾಗಲೇ ಸಾದರಪಡಿಸಿರುವಂತೆ ಆದು ಆವಾಹಿತ ಸ್ಮೃತಿ ವಾಙ್ಮಯವೇ ಸರಿ. ಈ ಮಾತನ್ನು ಅವರ 'ಹಣತೆ' ಎಂಬ ಕವನ ಸಂಗ್ರಹದಿಂದ ಮೊದಲುಗೊಂಡು ಶ್ರೀಹರಿ ಚರಿತೆ ಎಂಬ ದೀರ್ಘ ಕಾವ್ಯ ಹಾಗೂ ಗೋಕುಲ ನಿರ್ಗಮನ, ಆಹಲ್ಯೆ ಮುಂತಾದ ನಾಟಕಗಳು, ಪ್ರಬಂಧ ಸಂಕಲನಗಳು ಮತ್ತು ಅವರ 'ಕಾವ್ಯ ಕುತೂಹಲ'ವೆಂಬ ವಿಮರ್ಶೆಯೂ ಸಹ ಸಮರ್ಥಿಸುತ್ತವೆ.

**ಪ್ರೊ॥ ಶಿವರಾಮಯ್ಯ**

**ಪು**ತಿನ ಅವರ ಪನ್ನು ಓದುತ್ತಿದ್ದರೆ ನನಗ್ಯಾಕೋ ಇತ್ತೀಚೆಗೆ ಓದಿದ ದೇವಚಂದ್ರ (೧೭೭೦-೧೮೪೧) ನೆಂಬ ಕವಿಯ ರಾಜಾವಳೀ ಕಥಾಸಾರವೆಂಬ ಕಾವ್ಯದ ಒಂದು ಪ್ರಸಂಗ ನೆನಪಾಗುತ್ತಿದೆ. ಅದು ಹೀಗಿದೆ: ಮೈಸೂರು ಅರಸು ಚಿಕ್ಕದೇವರಾಜ (೧೬೭೩-೧೭೦೪)ರ ಕಾಲದಲ್ಲಿ ಶ್ರೀವೈಷ್ಣವರು ಪ್ರಬಲರಾಗಿ ನಾಮವಿರದವರ ಮುಖ ನೋಡಬಾರದೆಂದು ರಾಜಾಜ್ಞೆಯನ್ನು ಮಾಡಿಸಿದರು. ಆದುದರಿಂದ ಅನೇಕ ಜನ ನಾಮಧಾರಿಗಳಾದರು. ಕೆಲವು ಜೈನ ಪಂಡಿತರು ಸಹ ವೈಷ್ಣವರೊಡನೆ ನಂಟನ್ನು ಬೆಳೆಸಿ ರಾಜನ ದಯೆಗೆ ಪಾತ್ರರಾಗಿ ಬಹಳ ಸಿರಿವಂತರಾದರು. ಅಲ್ಲದೆ ಪರಸ್ಥಳದ ಜನರಿಗೆಲ್ಲ ಬಲಾತ್ಕಾರದಿಂದ ನಾಮವನ್ನು ಹಾಕಲು ಕೆಲವರು ಒಪ್ಪಿದರು; ಒಪ್ಪದಿದ್ದ ಕೆಲವರು ಎದುರುಬಿದ್ದು ಸರ್ವಥಾ ಆಗದೆಂದರು; ಬಲಾತ್ಕಾರದಿಂದ ಇಕ್ಕಿದರೆ ಉಜ್ಜಿಬಿಟ್ಟರು; ಕೆಲವರು ಇಕ್ಕಿದರೇನು, ಎಂದು ಹೊಳೆಯಲ್ಲಿ ತೊಳೆದುಕೊಂಡರು. ಮತ್ತೆ ಕೆಲವರನ್ನು ಹಿಡಿದು ಮುದ್ರಾಧಾರಣೆ ಮಾಡುವಾಗ ಅಯ್ಯೋ ಎಂದು ಪ್ರಲಾಪಿಸಿಕೊಂಡುಹೋದರು. ಒಬ್ಬಿಬ್ಬರು ಇಷ್ಟಕ್ಕೇ ಸಾಕೆಂದು ಒಂದು ನಾಮದಲ್ಲಿಯೇ ಓಡಿದರು. ಕೆಲವರು ಭುಜವನ್ನೇಕೆ ಸುಡುವುದು, ಈ ಹೊಟ್ಟೆಗೋಸ್ಕರ ತಾನೇ, ಎಂದು ತಮ್ಮ ಡೊಳ್ಳನ್ನು ಒಡ್ಡಿದರು. ಹೀಗೆ ಅನೇಕ ರೀತಿಯಲ್ಲಿ ಬಾಯಿಗೆ ಬಂದುದನ್ನು ಹೇಳಿ ಹೋದರು. ಭಾಗ್ಯವನ್ನು ಪಡೆಯುತ್ತೇವೆಂದು ಆಸೆಯಿಂದ ನಾಮವಿಕ್ಕಿಸಿಕೊಂಡ ಜನರನ್ನು ಆದರಿಸದೆ, ವಿಚಾರಿಸದೆ ಹೋದುದರಿಂದ ನಾಮವನ್ನು ಹಾಕಿಸಿಕೊಂಡು ಕೆಟ್ಟರೂ, ಕಾರ್ಯವನ್ನು ಕೆಡಿಸಿದರೂ, ನಂಬಿಸಿಕೊಡದಿದ್ದರೂ ನಾಮ ವಿಕ್ಕಿದನೆಂಬ ಮಾತು ಲೋಕಪ್ರಸಿದ್ಧವಾಯಿತು. (ರಾಜಾವಳೀ ಕಥಾಸಾರ, ಪು. ೨೮೬). ಬಲಾತ್ಕಾರದ ಮತಾಂತರ, ರಾಜ ಮತ್ತು ಪುರೋಹಿತರ ಹುನ್ನಾರ ಹಾಗೂ ಲೌಕಿಕ ಆಮಿಷಗಳಿಗೆ ಬಲಿಯಾದ ಜನವರ್ಗದ ಕರುಣಾಜನಕವೂ, ಅವರ ದೀನಬಾಳಿನ ಜೀವಂತವೂ ಆದ ನಾಟಕೀಯ ಚಿತ್ರವಿದು. ದೇವಚಂದ್ರನ ಹಾಸ್ಯ-ವಿನೋದ, ಸಾಮಾಜಿಕ ವಿಡಂಬನೆ-ಕಟಕಿ ಹಾಗೂ ಕರುಣಾರ್ದ್ರ ದೃಷ್ಟಿಗೆ ಈ ಒಂದು ಪ್ರಸಂಗ ಸಾಕ್ಷಿಯಂತಿದೆ. ಅದಿರಲಿ.

ರಾಜಾವಳಿಯ ಇಷ್ಟು ದೀರ್ಘ ಪ್ರಸಂಗವನ್ನು ಇಲ್ಲಿ ಉದ್ಧರಿಸಲು ಕಾರಣ, ಪುತಿನ ಅವರ ಕಾವ್ಯ ಲೋಕವನ್ನು ಹೊಕ್ಕಾಡುವ ನಾವು ಮೇಲಿನಂತೆ ಯಾವುದೇ ಬಹಿರಂಗದ, ಬಲವಂತದ, ಬಲಾತ್ಕಾರ ಎಂಬುದಿಲ್ಲದೆ ಸ್ವತಃ ನಾವೇ ಖುದ್ದಾಗಿ ಅವರ ಪವಿತ್ರ ಹಸ್ತದಿಂದ ನಾಮ ಹಾಕಿಸಿಕೊಳ್ಳುತ್ತೇವೆ ಹಾಗೂ ಮುದ್ರೆ ಒತ್ತಿಸಿಕೊಳ್ಳುತ್ತೇವೆ. ಅವರ ಆವಾಹಿತ ಸ್ಮೃತಿ ವಾಙ್ಮಯ ಅಷ್ಟು ಪ್ರಭಾವಶಾಲಿಯೂ ನಾದಮಯವೂ ಸುಸಂಸ್ಕೃತವೂ ಸಜ್ಜನಶೀಲವೂ ಆಗಿದೆ. ಅದು ಎಂಥ ನಾಸ್ತಿಕನಲ್ಲೂ ಆಸ್ತಿಕತೆಯ ಕಿಂಚಿತ್ ಸೆಲೆಯೊಡೆಯಿಸುವಂತಹುದು. ಅವರು 'ಕೃಷ್ಣನ ಕೊರಳಿನ ಕರೆ' ಎಂದು ಕೊಳಲು ನುಡಿಸಿದರೆ ಮುಖ ತಿರುಗಿಸುವ ವ್ಯಕ್ತಿ ಅರಸಿಕನೇ ಇರಬೇಕು. ಪುತಿನ ಅವರ ವಿಶಿಷ್ಟಾದ್ವೈತದ ಆನುಸಯ ಸುಡಿಗೆ ಸಹೃದಯ ಸ್ವಯಂಪ್ರೇರಿತನಾಗಿ ಮತಾಂತರಗೊಳ್ಳುತ್ತಾನೆ.

ಈ ಒಂದು ಭೂಮಿಕೆಯಿಂದ ಪುತಿನ ಅವರ ಕಾವ್ಯವನ್ನು ನಾವು ಪ್ರವೇಶಿಸುವುದಾದರೆ, ಅದು ಹೆಗ್ಗೋಡಿನ ಕೆ. ವಿ. ಸುಬ್ಬಣ್ಣನವರು ಈಗಾಗಲೇ ಸಾದರಪಡಿಸಿರುವಂತೆ ಅದು ಆವಾಹಿತ ಸ್ಮೃತಿ ವಾಙ್ಮಯವೇ ಸರಿ. ಈ ಮಾತನ್ನು ಅವರ 'ಹಣತೆ' ಎಂಬ ಕವನ ಸಂಗ್ರಹದಿಂದ ಮೊದಲುಗೊಂಡು ಶ್ರೀಹರಿ ಚರಿತೆ ಎಂಬ ದೀರ್ಘಕಾವ್ಯ ಹಾಗೂ ಗೋಕುಲ ನಿರ್ಗಮನ, ಆಹಲ್ಯೆ ಮುಂತಾದ ನಾಟಕಗಳು, ಪ್ರಬಂಧ ಸಂಕಲನಗಳು ಮತ್ತು ಅವರ 'ಕಾವ್ಯ ಕುತೂಹಲ'ವೆಂಬ ವಿಮರ್ಶೆಯೂ ಸಹ ಸಮರ್ಥಿಸುತ್ತವೆ.

ಪುತಿನ ಅವರದು ಆವಾಹಿತ ಸ್ಮೃತಿ ಎಂದೆನಷ್ಟೆ; ಎಂದರೆ ಪುರಾಣಕಾಲವನ್ನು ವರ್ತಮಾನಕ್ಕೆ ತಂದುಕೊಂಡು ಬಿಡುವಾಗಿ ಬದುಕುವುದು; ರಾಗ ದ್ವೇಷಗಳಿಗೆ ಎಡೆಕೊಡದೆ ಅನುದ್ವಿಗ್ನತೆಯಿಂದ ಬದುಕುವುದು. ಇದು ಎಲ್ಲರಿಂದಲೂ ಸಾಧ್ಯವಿಲ್ಲ. ಭವನಿಮಜ್ಜನ ಚಾತುರ್ಯ ಹಾಗೂ ಲಘಿಮೀ ಕೌಶಲವುಳ್ಳವರಿಂದ ಮಾತ್ರ ಸಾಧ್ಯ. ಅವರ ಒಂದು 'ಸ್ಮೃತಿ ಗೀತೆ' ಹೀಗಿದೆ :

*ಮಳೆಯು ನಾಡ ತೊಯ್ಯುತಿರೆ*
*ಮಿಂಚಿಗಿರುಳು ಬೆದರುತಿರೆ*
*ಗೂಡ ಮುದ್ದುಗೊಲ್ಲನೆಡೆಯೊಳೊಂದು*
*ಹಣತೆ ಮಿಣುಕುತಿರೆ*
*ಮುದವದೊಂದು ಹೊಳೆವುದು*
*ಬಗೆಯ ಕಣ್ಣು ತೆರೆವುದು (ಹಣತೆ)*

ಹೀಗೆ 'ಮಳೆಯು ನಾಡ ತೊಯ್ಯುತಿರೆ' ಕವಿಗೆ ಗೋಕುಲದ ಸ್ಮೃತಿಯೇ ತೆರೆಯುವುದು. ಗೋಕುಲ ನಿರ್ಗಮನದ ಕೃಷ್ಣನ ಕೊಳಲಿನ ಕರೆಗೆ ಓಗೊಟ್ಟು ಪ್ರಾರಂಭವಾದ ಅವರ ಕಾವ್ಯ ಎಲ್ಲ ಬದಲಾಗಿ, ಹಾಗೆ ಬದಲಾದ ಮೇಲೂ ಕೊನೆಯದಾಗಿಯೂ ಅವನು 'ಇದ್ದುದು ದಿಟ, ಅವನೊಲಿದುದು ದಿಟ, ನಾವು ನಲಿದುದು ದಿಟ, ಬಹನೆಚ್ಚು ದಿಟ' ಎಂಬ ಸ್ಮೃತಿ ವಾಸ್ತವಗಳ, ಆಗಮ-ಜಂಗಮಗಳ, ಋತು-ಸತ್ಯಗಳ ಐಕ್ಯತೆಯನ್ನು ಧ್ವನಿಸುತ್ತದೆ. ಆದ್ದರಿಂದಲೇ ಅವರು :

*ನಿಲ್ಲಿಸದಿರು ವನಮಾಲೀ*
*ಕೊಳಲ ಗಾನವ ॥ಪ॥*
*ನಿಲ್ಲಿಸೆ ನೀ ಕಳೆವುದೆಂತೋ*
*ಭವಭೀತಿಯ ಕೇಶವ ॥ ಅ.ಪ.॥*

ಎಂದು ಅನುನಯದಿಂದ ಹಂಬಲಿಸುತ್ತಾರೆ. ಹೀಗೆ ಪುತಿನ ಕಾವ್ಯ ಸ್ಮೃತಿ ಸಂಗೋಪನ ಹಾಗೂ ಉದ್ಬೋಧನಕ್ಕೆ ಪೌರೋಹಿತ್ಯವನ್ನು ಮಾಡುತ್ತ ಬಂದಿದೆ ಎಂಬ ಕೆ. ವಿ. ಸುಬ್ಬಣ್ಣನವರ ಮಾತು ಯಥಾರ್ಥವಾಗಿದೆ. ಪುತಿನ ಅವರ ಕಾವ್ಯ ಕನ್ನಡದ ಒಂದು ಸಮೃದ್ಧ ಪರಂಪರೆಯನ್ನು ತನ್ನ ಬೆನ್ನಿಗೆ ಕಟ್ಟಿಕೊಂಡೇ ಇದೆ. ಪಂಪನ ಪರಂಪರೆ ಹೇಗೆ ಜೈನ ಧರ್ಮ ಹಾಗೂ ಕಾವ್ಯಧರ್ಮವನ್ನು ಬೆಳಗಿಸಿತೋ ಹಾಗೆಯೇ ಪುತಿನ ಕಾವ್ಯ ಭಾಗವತ ಧರ್ಮ ಹಾಗೂ

ಕಾವ್ಯಧರ್ಮವನ್ನು ಸಮರಸಗೊಳಿಸಿದೆ. ನಿದರ್ಶನಕ್ಕಾಗಿ ಮಲೆದೇಗುಲ, ದೀಪಾವಳಿ, ಹಿಮ್ಮಾಗಿಯ ಮಾಂದಳಿರು, ಗಣೇಶ ದರ್ಶನ, ವಿಶ್ವಕುಟುಂಬಿಯ ಕಷ್ಟ, ರಂಗೋಲಿ ನೆರಳು, ಬೂದಲ ಬೆಳವನ ಹಕ್ಕಿಯುಲಿವು, ಮುಂತಾದ ಕೆಲವು ಕವನಗಳನ್ನೂ ಶ್ರೀಹರಿ ಚರಿತೆ ಹಾಗೂ ಗೋಕುಲ ನಿರ್ಗಮನಗಳನ್ನೂ ಪರಾಮರ್ಶಿಸಬಹುದು. ರಸಜಾಗರದಲ್ಲಿರುವ ಕವಿಮನಸ್ಸಿಗೆ ಎಮ್ಮೆಯಂತಹ ಪ್ರಾಣಿಯೂ ಅಂತರ್ಯಾಮಿಯ ಸೋಗಿನಂತೆ ಕಂಡುಬರುತ್ತದೆ; ಕತ್ತೆ ಪುರಾಣ ಹೇಳುತ್ತದೆ; ಈಚಲು ಮರವು ತತ್ತ್ವಜ್ಞಾನಿಯಾಗಿ ಕಂಡುಬರುತ್ತದೆ; ದಿವಮರೆತಪ್ಸರೆಯನ್ನು 'ಚಿಕುಹೂ' ಎಂದು ಕೋಗಿಲೆ ಎಚ್ಚರಿಸುತ್ತದೆ. ದಾಳಿಂಬೆಯ ರುಚಿಯನ್ನು ರಸನೆ ಹಸೆಯ ಮೇಲೆ ಪ್ರಕೃತಿ-ಪುರುಷರು ಸವಿವ ದಿವ್ಯಯೋಗ ಘಟಿಸುತ್ತದೆ.

ಕಿವಿಗೊಟ್ಟು ಕೇಳುವುದಾದರೆ, ಕಣ್ಣಿಟ್ಟು ನೋಡುವುದಾದರೆ ಪುತಿನ ಕಾವ್ಯ ಮೇಲುಕೋಟೆಯ ಚೆಲುವ ನಾರಾಯಣ ಸ್ವಾಮಿಯ ದಿವ್ಯ ಸಂದೇಶವನ್ನೇ ಮೆಲುದನಿಯಲ್ಲಿ ಹಾಡಿಕೊಂಡಂತಿದೆ. ಅವರ ವೈಚಾರಿಕ ನಿಲುವಿಗೆ ರಂಗವಲ್ಲಿ, ವಿಶ್ವಕುಟುಂಬಿಯ ಕಷ್ಟ, ಕಣಿವೆಯ ಮುದುಕ, ಹಿಮ್ಮಾಗಿಯ ಮಾಂದಳಿರು, ದೀಪಾವಳಿ, ಜಯ ನವಭಾರತಕೆ, ಬೂದಲ ಬೆಳೆವನ ಹಕ್ಕಿಯುಲಿವು ಮುಂತಾದ ಕವನಗಳು ಸಾಕ್ಷಿಯೆನಿಸುತ್ತವೆ. ಇತ್ತೀಚೆಗೆ ಮೇಲುಕೋಟೆಯಲ್ಲಿ ಭಕ್ತರ ಮೇಲೆ ಅರ್ಚಕರು ನಡೆಸಿದ ಗೂಂಡಾಗಿರಿಯ ಹಿನ್ನೆಲೆಯಲ್ಲಿ ರಂಗವಲ್ಲಿ ಕವನವನ್ನು ಇನ್ನೊಮ್ಮೆ ನಾವು ಪರಾಮರ್ಶಿಸಬಹುದು. ಇಲ್ಲಿ ಕಂಡುಬರುವ ಪುತಿನ ಅವರ ಸಾಮಾಜಿಕ, ಧಾರ್ಮಿಕ ಹಾಗೂ ವೈಚಾರಿಕ ನಿಲುವು ಅತ್ಯಂತ ಪ್ರಗತಿಪರವಾದುದು. ಇದು ಮೇಲುಕೋಟೆಯ ಅಥವಾ ದೇವಾಲಯ ಸಂಸ್ಕೃತಿಯನ್ನು ತತ್‌ಕ್ಷಣ ವಿರೋಧಿಸುವುದಿಲ್ಲ ನಿಜ. ಆದರೆ ಅದು ಅಂತರಂಗದಿಂದ ಹೊರಹಾಕುವ ಪ್ರತಿಭಟನೆ ಇಡೀ ದೇವಾಲಯ ಸಂಸ್ಕೃತಿಗೆ ಕೊಟ್ಟ ದೊಡ್ಡ ಪೆಟ್ಟು. ಈ ಕವಿತೆಯಲ್ಲಿ ಮುಪ್ಪಿನ ಮುದುಕಿಯೊಬ್ಬಳು ನಸುಕಿನಲ್ಲಿಯೇ ಬೆಟ್ಟಹತ್ತಿಬಂದು ರಂಗೋಲಿ ಹಸೆ ಬರೆಯುವ ಕಾಯಕದಲ್ಲಿ ನಿರತಳಾಗಿದ್ದಾಳೆ. ಅವಳನ್ನು ನೋಡುತ್ತ ಕವಿಯ ಮೊಮ್ಮಗ ಕಿಟ್ಟಿ ಮೈಮರೆತಿದ್ದಾನೆ. ಮುದುಕಿ ಬರೆಯುವ ರಂಗೋಲಿಯ ಮುಂದೆ ಇವರ ಸ್ಥಾವರ ಭಕ್ತಿಪೂಜೆಗಳು ಮೌನ ಅಪಹಾಸ್ಯಕ್ಕೆ ಈಡಾಗುತ್ತವೆ. ಹೀಗೆ ಪುರೋಹಿತಶಾಹಿಯ ಡಂಭಾಚಾರ, ಬೂಟಾಟಿಕೆ, ಪ್ರದರ್ಶನಗಳನ್ನೆಲ್ಲ ದಿವಾಳಿ ಎಬ್ಬಿಸಲಾಗುತ್ತದೆ. ರಂಗವಲ್ಲಿಯ ಕಡೆಯ ಕೆಲವು ಸಾಲುಗಳು :

*ದೇವನಲ್ಲ - ಬರಿಯ ಬೊಂಬೆ !*
*ಹಸೆಯೆ ಸೋಜಿಗ.*
*ಭಕ್ತಿಮೂರ್ತಿ ಮುದುಕಿಯೊಮ್ಮೆ,*
*ದೇವನೊಮ್ಮೆ ನೋಡುತೆಂದೆ :*
*ದೇವಬೊಂಬೆ, ಪೂಜೆ ಆಟ*
*ಭಕ್ತಿ ಸೋಜಿಗ !*

ರಂಗವಲ್ಲಿಯ ದರ್ಶನವೆಂದರೆ ದೇವನಿರವು ದಿಟವೋ, ಸಟೆಯೊ ತಿಳಿದವರಾರು ? ಆದರೂ ನಮ್ಮನ್ನು ಸಂತೈಸುವನೊಬ್ಬ (ಅಥವಾ ಶಕ್ತಿ) ಉಂಟು ಎನ್ನುವ ಅಚಲ ಭಕ್ತಿ ದಿಟವದು ಮತ್ತೂ ಸೋಜಿಗ.

ಈ ಭಕ್ತಿ ಸೋಜಿಗವೇ ಅವರ ಕಾವ್ಯ ಜೀವಾಳ. ಅದೇ ಸ್ಥಾಯಿ; ಮಿಕ್ಕಿದ್ದೆಲ್ಲ ಆಲಂಬನ. ಇದು ಅವರ ಹಣತೆ (೧೯೩೩) ಕವನ ಸಂಗ್ರಹದಿಂದ ಆರಂಭಗೊಂಡು ಕಡೆಯ ಶ್ರೀಹರಿ ಚರಿತೆ (೧೯೮೮) ಯವರೆಗೂ ಅವರನ್ನು ಕೈಹಿಡಿದು ನಡೆಸಿದೆ. ಅವರ ಆವಾಹಿತ ಸ್ಮೃತಿ ಅವರ ಜೀವಮಾನ ಪೂರ್ತಿ ಹಾಗೆ ಉಳಿದಿತ್ತು; ಅವರ ಆಚಾರ, ವಿಚಾರ ಹಾಗೂ ನಡವಳಿಕೆಯಲ್ಲಿ ಮೈದಾಳಿಬಂದಿತ್ತು. ಅವರು ಕಂಡುಂಡ ದೈವೀಸ್ಮೃತಿ ಚಿತ್ರಗಳನ್ನು ಕನ್ನಡ ವಾಙ್ಮಯದಲ್ಲಿ ಕಟ್ಟಿ ಹಂಚಿದರು.

ನಾವೀಗ ಮತ್ತೆ ಇಂದಿನ ಮೇಲುಕೋಟೆ ಅರ್ಚಕರ ವರ್ತನೆಯತ್ತ ದೃಷ್ಟಿ ಹರಿಸಿದರೆ, ಅಲ್ಲಿಗೆ ಕರೆದುಕೊಂಡು ಬಂದಿದ್ದ ಮಗು ಮಾತನಾಡಿದುದರಿಂದ 'ಪೂಜೆಗೆ ಭಂಗವಾಯಿತೆಂದು' ಅರ್ಚಕರು ಆ ಹಸುಳೆಯ ಪೋಷಕರ ಮೇಲೆ ಕೈ ಮಾಡಿದ್ದಾರಷ್ಟೆ. ಆದರೆ ರಂಗವಲ್ಲಿಯ ಮಗು ಕಿಟ್ಟಿಯಂತೆ ಅಲ್ಲಿಗೆ ಬಂದಿದ್ದ ಮಗುವೂ ಸಹ ಅಂದು ಅಜ್ಜಿ ಬಿಟ್ಟ ರಂಗೋಲಿಯಂಥ ಯಾವ ಸೋಜಿಗವನ್ನು ಕುರಿತು ಮಾತನಾಡುತ್ತಿತ್ತೊ! ಬಲ್ಲವರಾರು ? ಅರ್ಚಕರ ಇಂದಿನ ಪೂಜಾ ವಿಧಾನ ಮತ್ತು ಮಂತ್ರ ಪಠನ ಯಾವ ದೇವರಿಗೆ ಪ್ರೀತಿ ? ಆದ್ದರಿಂದ ಮಂತ್ರಕ್ಕಿಂತ ಮುಖ್ಯವಾಗಿ ಪುತಿನ ಅವರ ರಂಗವಲ್ಲಿಯಂತಹ ಕವಿತೆಯನ್ನಾದರೂ ನಮ್ಮ ಇಂದಿನ ಅರ್ಚಕವೃಂದಕ್ಕೆ ತಿಳಿಸಿ ಹೇಳಬೇಕಾದ ಅಗತ್ಯವಿದೆ. ಹೀಗೆ ದೇವರನ್ನು ಹಿಂದಿಕ್ಕಿದ ಪೂಜಾರಿಗಳಿಂದ ಆ ದೈವಕ್ಕೆ ಮೊದಲು ವಿಮೋಚನೆಯಾಗಬೇಕಾಗಿದೆ.

ಪುತಿನ ಅವರ ಗೋಕುಲ ನಿರ್ಗಮನದ ಬಗೆಗೆ ಇನ್ನೊಂದು ಮಾತನ್ನು ಇಲ್ಲಿ ಹೇಳಬಹುದು. ಈ ಗೀತ ನಾಟಕ ಸುಕುಮಾರ ಕಾವ್ಯವೇನೋ ನಿಜ. ಆದರೆ ಅದರ ಆಶಯ ಕೇಡಿನ ವಿರುದ್ಧವೇ ಇದೆ ಎಂಬ ಮಾತನ್ನು ನಾವು ಗಮನಿಸಬೇಕು. ಕೃಷ್ಣ ಗೋಕುಲದಿಂದ ನಿಷ್ಕ್ರಮಿಸಿದ ಉದ್ದೇಶ ಬಿಲ್ಲು ಹಬ್ಬಕ್ಕಾಗಿ ಎಂಬುದೊಂದು ನೆಪ ಅಷ್ಟೆ. ಈ ಗೋಪಾಲಕ ಹುಡುಗ ಕೊಳಲನ್ನು ಬಿಸುಡುವುದು, ಮುಂದೆ ಪಾಂಚಜನ್ಯ, ಸುದರ್ಶನ ಚಕ್ರಗಳನ್ನು ಹಿಡಿಯುವುದು, ಕಂಸ-ದುರ್ಯೋಧನರಂತಹ ದುಷ್ಟಶಕ್ತಿಗಳ ನಿಗ್ರಹಕ್ಕಾಗಿ ತಾನೆ ? ಪುತಿನ ಈ ನಾಟಕವನ್ನು ಬರೆದದ್ದು (೧೯೪೫) ಸಾಮ್ರಾಜ್ಯಶಾಹಿ ಆಳ್ವಿಕೆಯ ಸಂದರ್ಭದಲ್ಲಿ. ಆಗ ದೇಶ ದಾಸ್ಯದಿಂದ ಬಿಡುಗಡೆಗೊಳ್ಳಬೇಕಾಗಿತ್ತು.




ಈಗಲೂ ಪರಿಸ್ಥಿತಿ ಅಂದಿನ ವಸಾಹತು ಸಂದರ್ಭಕ್ಕಿಂತ ಏನೇನೂ ಭಿನ್ನವಾಗಿಲ್ಲ. ಮಥುರಾ ನಗರದ ದುಷ್ಟಶಕ್ತಿ ಕಂಸನಂತೆಯೇ ಜಾಗತಿಕ ನವ ಸಾಮ್ರಾಜ್ಯಶಾಹಿಗಳು ಈಗ ದೇಶದ ಉದ್ದಗಲಕ್ಕೆ ಬೇರು ಬಿಡುತ್ತಿದ್ದಾರೆ. ಆ ಬಹುರಾಷ್ಟ್ರೀಯ ಕಂಪನಿಗಳಿಗೆ ನಮ್ಮ ಯುವಕರು ಜೀತಗೈಯುತ್ತಿದ್ದಾರೆ. ನಮ್ಮ ಹಳ್ಳಿಗಳಾದರೋ ಕೃಷ್ಣನ ನಿಷ್ಕ್ರಮಣದ ತರುವಾಯದ ನಂದೀಗ್ರಾಮದಂತೆ ಪಾಳುಬೀಳುತ್ತಿವೆ. ಇನ್ನಾದರೂ ನಮ್ಮ ಯುವಕರು ಸಂಘಟಿತರಾಗಿ ಈ ಕಂಸಕೇಡಿನ ವಿರುದ್ಧ ಸೆಣಸಿ ನಿಲ್ಲಬೇಕಾಗಿದೆ. ಇದು ಗೋಕುಲ ನಿರ್ಗಮನ ಹಾಗೂ ಶ್ರೀಹರಿ ಚರಿತೆ ಕೃತಿಗಳು ರವಾನಿಸುವ ಸಂದೇಶ. ಇಲ್ಲವಾದರೆ ಅವು ಕೇವಲ ಕೃಷ್ಣನ ಬಾಲಲೀಲೆಯ ಬಣ್ಣನೆಗಳಾಗಿ ಕವಿಯ ಆಶಯವೇ ಕೈತಪ್ಪಿ ಹೋಗುವ ಸಂಭವವುಂಟು. ಆದ್ದರಿಂದ ಪುತಿನ ಅವರ ಕಾವ್ಯಲೋಕ ಕೇವಲ ಭಕ್ತಿ ಶೃಂಗಾರಗಳ ಓಲೈಸಿಕೆ ಮಾತ್ರವಲ್ಲ, ಅದು ಸಂಘರ್ಷ ಸೂಚಕವೂ ಹೌದು.

ಪುತಿನ ಅವರ ಕಾವ್ಯದ ಈ ಜೀವಾಳವನ್ನರಿಯದೆ, ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಪ್ರೊ|| ರಾಗೌ ಅವರು 'ಪುತಿನ ನೂರರ ನೆನಪು' ಕಾರ್ಯಕ್ರಮದ ತಮ್ಮ ಅಧ್ಯಕ್ಷ ಭಾಷಣದಲ್ಲಿ (೨೯-೬-೨೦೦೫) ಅವರ ಕಾವ್ಯದ ಬಗ್ಗೆ ಒಂದು ಗುರುತರ ಆಕ್ಷೇಪವನ್ನು ಎತ್ತಿದರು. ಅದು ಹೀಗಿದೆ : ಕೃಷ್ಣನ ಕೊರಳಿನ ಕರೆಗೆ ಓಗೊಟ್ಟು ಹೀಗೆ ಗೃಹಿಣಿಯರು ತೊಟ್ಟಿಲ ಹಸುಗೂಸು ಮರೆತು, ಪಕ್ಕದ ಗಂಡನ ತೊರೆದು ಬೃಂದಾವನಕೆ ತ್ವರೆ ಮಾಡಿದರೆ ನಮ್ಮ ಕೌಟುಂಬಿಕ ಬದುಕಿನ ಪಾಡೇನು ? ಇದು ಸಾಮಾಜಿಕ ಸಂರಚನೆಗೆ ವಿರುದ್ಧವೂ ಅರಾಜಕತೆಗೆ ದಾರಿಯೂ ಆಗುವುದಿಲ್ಲವೇ ? ಎಂಬಿತ್ಯಾದಿ. ಇಂಥವರಿಗೆ ಏನು ಹೇಳಬೇಕೋ ತಿಳಿಯದು. ಕಾವ್ಯಲೋಕ ರೂಪಕಾತ್ಮವೆಂದೂ ಇವರಿಗೆ ಹೊಳೆಯದೇ ? ಹಾಗಾದರೆ 'ಎಲ್ಲೋ ಜೋಗಪ್ಪ ನಿನ್ನರಮನೆ, ಎಲ್ಲೋ ಜೋಗಪ್ಪ ನಿನ್ನ ತಳಮನೆ' ಎಂದು ಹಾಡಿದ ನಮ್ಮ ಜನಪದ ಹೆಣ್ಣಿನಿಂದ ನಮ್ಮ ಸಾಮಾಜಿಕ ಸಂರಚನೆಗೆ ಭಂಗಬಂದಿತೋ ಅಥವಾ ಅದು ಇನ್ನಷ್ಟು ಸದೃಢವಾಯಿತೋ, ಎಂದು ಕೇಳಬೇಕಾಗಿದೆ. ಆ ಮಾತಿರಲಿ. ಪುತಿನ ಕಾಮವನ್ನು ಕುರಿತು, ಅದರ ಕಾಳಿಕೆಯನ್ನು ತೊಳೆದು ಉದಾತ್ತೀಕರಿಸುವ ಮೂಲಕ ಪುರಾಣಕಾಲದ ಕೃಷ್ಣ, ಗೋಪಿಕೆಯರು, ಅಹಲ್ಯೆ, ಗೌತಮ, ಇಂದ್ರಾದಿ ದೇವತೆಗಳು ಮಾತ್ರವಲ್ಲದೆ ನಮ್ಮಂಥ ಹುಲು ಮಾನವರನ್ನೂ ಸಹ ಏಕಕಾಲಕ್ಕೆ ಮಾನವಂತರನ್ನಾಗಿ ಬಾಳಿಸುವ ಯತ್ನ ಮಾಡಿದ್ದಾರೆ. ಇದಕ್ಕಿಂತ ಹೆಚ್ಚು ಏನು ಬೇಕು ? ಆದ್ದರಿಂದ ಅವರ ಕಾವ್ಯ ನನಗೆ 'ಜೀವಕಾರುಣ್ಯ ಹಣತೆ'ಯಂತೆ ಬೆಳಗುತ್ತದೆ.

**ಪ್ರೊ|| ಶಿವರಾಮಯ್ಯ**
ನಂ. ೧೬೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ,
ನಾಗರಬಾವಿ, ಬೆಂಗಳೂರು - ೫೬೦ ೦೭೨

# ನಮ್ಮನ್ನು ಕಳೆಯದಿರೋಣ

ಬಿಂಡಿಗನವಿಲೆ ಭಗವಾನ್
ಗಣಿತ ಉಪನ್ಯಾಸಕರು, ಶ್ರೀ ಕೊಂಗಾಡಿಯಪ್ಪ ಪಿ. ಯು. ಕಾಲೇಜ್
ದೊಡ್ಡಬಳ್ಳಾಪುರ - ೫೬೧ ೨೦೩

'ನಮ್ಮ ಅಸಂತೋಷಕ್ಕೆ ಬಹುತೇಕ ಮತ್ತೊಬ್ಬರ ಸಂತೋಷವೆ ಕಾರಣ' ಎಂಬ ಮಾತಿದೆ. ಇನ್ನೊಬ್ಬರನ್ನು ನೋಡಿ ಒಳಿತನ್ನು ಕಲಿಯೋಣ. ಆದರೆ ತೃಪ್ತಿ, ಆನಂದದ ಬೆನ್ನೇರಿ ಕಾರಣವಿಲ್ಲದೆ ಅವರನ್ನು ಅನುಕರಿಸ ಹೊರಡುವುದು ಸಲ್ಲದಲ್ಲವೆ ? ಮೊನ್ನೆ ಮದುವೆ ಮನೆಯಲ್ಲಿ ನಾನು ಆಲಿಸಿದ ಸಂಭಾಷಣೆ. ಅಪ್ಪ ಮಗನಿಗೆ ತಾಕೀತು ಮಾಡಿದ್ದು. ''ಅಂವ ನೋಡು... ಜಿ.ಆರ್.ಇ. ಪರೀಕ್ಷೆಯಂತೆ. ಪಾಸು ಮಾಡಿ ಮುಂದಿನ ವಾರ ಅಮೆರಿಕಾಗೆ ಹೊರಟಿದ್ದಾನೆ. ನೀನೂ ಇದೀಯಾ ದಂಡಕ್ಕೆ !'' ಆ ಹೈದ ಆ ಪರೀಕ್ಷೆ ಮುಗಿಸಿ ಅಲ್ಲಿಗೆ ಹಾರಿದನೆಂದರೆ ಈತನ ಪುತ್ರ ಏಕಾದರೂ ದೇಶ ತೊರೆಯಬೇಕೋ ಅರ್ಥವಾಗದು. ಬದುಕೆಂದರೆ ಸ್ಪರ್ಧಾಪರೀಕ್ಷೆ, ವಿಮಾನ, ವೀಸಾ, ವಿದೇಶ, ಕೈತುಂಬ ಪಗಾರ... ಇವಿಷ್ಟೆಯೇ ? ಕಸೂತಿ, ಘಟಂ ವಾದನ, ಕುಂಭಕಲೆ, ಪುಸ್ತಕದ ಬೈಂಡಿಂಗ್, ವಾಕ್ಚಾತುರತೆ, ಪಾಕವಿಧಾನ, ಪಾದರಕ್ಷಾ ತಯಾರಿಕಾ ವಿನ್ಯಾಸ... ಹೀಗೆ ಹಲವು ಹತ್ತಾರು ವಲಯಗಳಲ್ಲಿ ಪ್ರತಿಭೆ ಸಾಧಿಸಿ ಅವನ್ನು ಹೊರದೇಶದವರಿಗೂ ಪರಿಚಯಿಸಲು ವಿಪುಲ ಅವಕಾಶಗಳಿಲ್ಲವೆ ?

ವೃಥಾ ಅನುಕರಣೆಯ ಪರಿಣಾಮದಿಂದಾಗಿ ನಮ್ಮನ್ನು ನಾವು ಕಳೆದುಕೊಂಡುಬಿಡುತ್ತೇವೆ. ಯಾರೋ ತಮ್ಮ ಮಗಳ ಲಗ್ನವನ್ನು ಅದ್ದೂರಿಯಾಗಿ ನೆರವೇರಿಸಿದರೆಂದು ತಾವೂ ಹಾಗೆ ನಡೆದುಕೊಳ್ಳೋಣ ಎಂಬ ಅಂಬೋಣ, ನೆರೆಮನೆಯವರು ಕಾರು ಕೊಂಡರೆಂದು ತಾವೂ ಖರೀದಿಸೋಣ, ಅವರ ಮನೆಯ ಫ್ರಿಜ್ ದುರಸ್ತಿಗೆ ಬಂದಿದೆಯೆಂದು ತಮ್ಮದೂ ಕೆಟ್ಟಿರಬಹುದೆಂಬ ವಿಚಿತ್ರ ಗೊಣಗು, ಅಲ್ಲಿ ಬಾವಿ ತೋಡುವರೆಂದು ಇಲ್ಲಿಯೂ ಒಂದಿರಲೆಂಬ ಆಶಯ ಅರ್ಥಹೀನ. ಒಮ್ಮೊಮ್ಮೆ ಈ ನಿಟ್ಟಿನಲ್ಲಿ ಹಾಸ್ಯಾಸ್ಪದ ಆತಂಕ, ದುಮ್ಮಾನಗಳೂ ಹೆಡೆಯಾಡಿ ಬಿಡುವುದುಂಟೆನ್ನಿ. ವೃದ್ಧರೊಬ್ಬರು ಹತಾಶೆಯಿಂದ ತನ್ನವರೊಂದಿಗೆ, ''ಅಳಗಿರಿರಾಯರದು ನಿಜವಾಗ್ಲೂ ಎಂಥ ಸಾವು ? ಸ್ವಲ್ಪ ಜ್ವರ ಬಂತಂತೆ, ಹಾಗೇನೆ ಕಣ್ಣು ಮುಚ್ಕೊಂಡ್ರು...'' ಅಂದಾಗ ಬಳಿಯಲ್ಲೇ ಇದ್ದ ನಾನು ಕಕ್ಕಾಬಿಕ್ಕಿ !! ಹಿರಿತನದ ಪ್ರದರ್ಶನಕ್ಕಾಗಿ ಪಾರ್ಟಿಗಳನ್ನು ಮೇಲಿಂದ ಮೇಲೆ ಏರ್ಪಡಿಸುವವರುಂಟು. ಮೂರ್‍ನಾಲ್ಕು ಸಿಹಿಖಾದ್ಯ, ಉತ್ತರ, ದಕ್ಷಿಣ ಭಾರತದ ತಿಂಡಿಗಳು (ಪಶ್ಚಿಮ, ಪೂರ್ವ ಇದ್ದರೂ ಅಚ್ಚರಿಯಿಲ್ಲ!), ಬಗೆಬಗೆ ಹಣ್ಣಿನ ರಸಗಳು, ಸಾರು ಸಾಂಬಾರುಗಳು, ಪಲ್ಯಗಳು, ಪುರಿ, ಪೂರಿಗಳು, ಹಲ್ವಗಳು, ಪಾಯಸಗಳು, ವಡೆ ಅಂಬೊಡೆ – ಹೀಗೆ. ಅತಿಥಿಯ ಜೀರ್ಣಾಂಗಗಳ ಮೇಲೆ ಆತಿಥೇಯನಿಗೆ ಏಕಾದರೂ ಸಿಟ್ಟೋ ಕಾಣೆ ! ಅವಕ್ಕೆ ಕೈ ತುಂಬ ಕೆಲಸ ಕೊಡುವ ಹುನ್ನಾರ ಆ ಮಹಾನುಭಾವನದು. ಅಂತೂ ಅದೇ ಪಾರ್ಟಿಯಲ್ಲಿ ಭಾಗಿಯಾದವರೆಲ್ಲ ಸೋಡಾ ಅಂಗಡಿಯ ಮುಂದೆ ಹಾಜರ್. ಸರಳತೆ, ಅದಕ್ಕಿಂತಲೂ ಹೆಚ್ಚಾಗಿ ಬಂದವರ ಆರೋಗ್ಯದ ಬಗ್ಗೆ ಕಾಳಜಿ, ಆಹಾರ ವಸ್ತುಗಳು ಪೋಲಾಗುವುದು ರಾಷ್ಟ್ರೀಯ ಹಾನಿಯೆಂಬ ಪ್ರಜ್ಞೆ ಇಲ್ಲಿ ಕೆಲಸ ಮಾಡ ಬೇಕಾಗುತ್ತದೆ. ಹೊಟ್ಟೆ ಬಿರಿಯುವಷ್ಟು ಉಣಿಸಿದರೆ, ಉಂಡರೆ ಪಾರ್ಟಿಯ ಯಶಸ್ಸು ಎಂಬ ಮೌಢ್ಯವನ್ನು ನಾವು ತೊರೆಯಲಾರೆವೆ ? ಸಡಗರ, ಸಂಭ್ರಮದ ಮೌಲ್ಯಗಳು ಸಮಾಜಪರವಾಗಿರಬೇಕಲ್ಲವೇ, ಹೇಳಿ.

ನನ್ನ ಪರಿಚಿತರೊಬ್ಬರು ಈಚೆಗೆ ಒಂದು ಕಾರು ಕೊಂಡಿದ್ದಾರೆ. ಅವರ ಪಾಡು ಬಣ್ಣಿಸಲಸದಳ. ಅವರ ಮನೆಯಿರುವ ಬೀದಿ ಕಿರಿದು. ಕಾರನ್ನು ಪಾರ್ಕ್ ಮಾಡಲು ಮನೆಯಂಗಳ ಇಕ್ಕಟ್ಟು. ಬೀದಿಯಲ್ಲೇ ನಿಲ್ಲಿಸುವುದು ಅನಿವಾರ್ಯ. ನಿತ್ಯ ಸಹಜವಾಗಿಯೆ ನೆರೆಹೊರೆಯವರಿಂದ ತರಾಟೆ, ತಾಕೀತು. ಅಡ್ಡ ನಿಲ್ಲಿಸುತ್ತೀರಲ್ಲ, ನಾವು ಓಡಾಡುವುದು ಹೇಗೆ ಎಂಬ ಅವರ ಗೊಣಗು ನ್ಯಾಯಸಮ್ಮತವೇ. ''ಯಾಕೆ ಸಾರ್, ಮೊದಲೇ ನೀವು ಯೋಚಿಸಬಾರದಿತ್ತೆ ? ಈಗ ನೋಡಿ ಎಂಥ ಅವಸ್ಥೆ'' ಅಂದೆ. ಅದಕ್ಕೆ ಮಿತ್ರರು, ''ಅಯ್ಯೋ ಹೌದು ಒಪ್ಪೋಣ... ಆದ್ರೆ ಕಾಲಕ್ಕೆ ತಕ್ಕ ಹಾಗೆ ನಾವೂ ಇರ್ಲೇಬೇಕಲ್ಲ, ಸ್ಟೇಟಸ್ ಕಾಪಾಡ್ಡಿದ್ರೆ ಆಗುತ್ಯೆ ಹೇಳಿ'' ಅಂದರು !

ನನ್ನ ಕೋ - ಬ್ರದರ್ ನಾಣಿ ಠೀಕಾಗಿ ಸೂಟುಬೂಟು ಧರಿಸಿ ಶಹರಿನಲ್ಲಿ ಶಾಪಿಂಗ್ ಮಾಡುತ್ತಿದ್ದ. ಅವನ ಬಣ್ಣದ ಕನ್ನಡಕ ನನ್ನ ಗಮನವನ್ನು ವಿಶೇಷವಾಗಿ ಸೆಳೆಯಿತು. ಅಡಿಯಿಂದ ಮುಡಿಯತನಕ ಆತನ ವೇಷವನ್ನು ಅವಲೋಕಿಸಿದೆ. ಟೈ (ಕೊರಳ ಕೌಪೀನ !) ಇನ್‌ಶರ್ಟ್ ಮಾಡಿದ ಶರಟು, ಘಮ ಘಮ ಸೆಂಟು, ಅಚ್ಚರಿಯೆಂದರೆ ಹುಬ್ಬು ಟ್ರಿಮ್ ಗೊಂಡಿತ್ತು. ನನ್ನ ಕುತೂಹಲವನ್ನು ಅವನೇ ಗ್ರಹಿಸಿದ್ದ : ''ನೀನು ಅಂದುಕೊಂಡಿರುವುದೆಲ್ಲ ನಂಗೆ ಗೊತ್ತು ಮಾರಾಯ. ಟೈ ನಮಗೆ ಅಂದರೆ ಭಾರತೀಯರಿಗೆ ಅದರಲ್ಲೂ ಉಷ್ಣವಲಯದವರಿಗೆ ಖಂಡಿತ ಅಗತ್ಯವಿಲ್ಲ. ಅದು ಏನಿದ್ದರೂ ಶೀತವಲಯದವರಿಗೆ ಹಿಮ ಬಿದ್ದೀತೆಂಬ ಕಾರಣಕ್ಕೆ. ಕೂಲಿಂಗ್ ಗ್ಲಾಸ್ ಧರಿಸುವಷ್ಟು ಪ್ರಖರವಾಗಿಲ್ಲ ಸೂರ್ಯನ ರಶ್ಮಿಗಳು ಅನ್ನುವುದೂ ದಿಟ. ಹುಬ್ಬು, ಕಣ್ಣಿನ ರಕ್ಷಣೆಗೆ ಪ್ರಕೃತಿಯೆ ನಿಯೋಜಿಸಿರುವ ವ್ಯವಸ್ಥೆ– ಅದನ್ನು ಟ್ರಿಂಗೊಳಿಸುವ ಅಗತ್ಯವೇ ಇಲ್ಲ. ನಾವು ಗಂಧವಾಗಿದ್ದರೆ ಸುಗಂಧವಾದರೂ ಯಾಕೆಂಬ ಪ್ರಶ್ನೆಯೂ ಸರಿಯೆ. ಹೇಳಿ ಕೇಳಿ ನಾನೊಬ್ಬ ಮೆಡಿಕಲ್ ರೆಪ್ ! ಉದರನಿಮಿತ್ತ ಈ ವೇಷವಯ್ಯ ತಿಳಿ...'' ಎಂದಾತ ದೀರ್ಘ ವಿವರಣೆ ನೀಡಿದ್ದ. ಆ ರೆಪ್‌ನದು ಎಂತಹ ಬೆಪ್ಪು ನೀವೇ ನಿರ್ಧರಿಸಿ. ನಾವು ನಮ್ಮತನದಿಂದ ಮೆರೆಯುವುದನ್ನು ರೂಢಿಸಿಕೊಳ್ಳಬೇಕೇ ಹೊರತು ಇನ್ನೊಬ್ಬರಿಗಾಗಿ ಕೃತಕತೆಯನ್ನು ಅವಗಾಹಿಸಿಕೊಳ್ಳಬಾರದು. ಉನ್ನತ, ಉದಾತ್ತ ಆದರ್ಶಗಳು, ಆರೋಗ್ಯಕರವಾದ ಮೌಲ್ಯಗಳು ದಾರ್ಶನಿಕರಿಂದ ಸ್ವೀಕಾರಾರ್ಹವೆನ್ನುವುದನ್ನು ಮರೆಯಬಾರದು. ವೃಥಾ ಅನುಕರಣೆಯಲ್ಲಿ ನಮ್ಮನ್ನು ನಾವು ಕಳೆದುಕೊಳ್ಳದಿರೋಣ.



# ಉದ್ಯೋಗಾವಕಾಶಗಳು ಮತ್ತು ಹಿಂದುಳಿದ ವರ್ಗಗಳು

'ಉದ್ಯೋಗಂ ಪುರುಷ ಲಕ್ಷಣಂ' ಎಂಬಂತೆ ಪ್ರತಿಯೊಬ್ಬ ಮನುಷ್ಯನು ಒಂದಿಲ್ಲೊಂದು ಉದ್ಯೋಗದಲ್ಲಿ ಕಾರ್ಯನಿರತನಾಗಿರಬೇಕಾಗುತ್ತದೆ. ಕಾರ್ಯನಿರತನಾಗಿರಲೇಬೇಕು. ಇಲ್ಲದಿದ್ದರೆ ಮನಸ್ಸು ಮಂಗನಂತಾಗಿ ಬೇಕೆಂದ ಕಡೆ ಹರಿಯಲಾರಂಭಿಸಿ, ಕಕ್ಕಾಬಿಕ್ಕಿಯಾಗಿ ಬಿಡುತ್ತದೆ. ದುಶ್ಚಟಗಳಿಗೂ ಕೂಡ ಬಲಿಯಾಗಿ ಅಪಾಯದ ಮಟ್ಟ ತಲುಪುವ ಸಂಭವವಿರುತ್ತದೆ. ಇದಕ್ಕೆ ಮಹಿಳೆಯರು ಕೂಡ ಹೊರತಾಗಿಲ್ಲ. ಈಗ ನಾವು ಮೇಲಿನ ಉಕ್ತಿಯನ್ನು 'ಉದ್ಯೋಗಂ ಸ್ತ್ರೀ - ಪುರುಷ ಲಕ್ಷಣಂ' ಎಂದರೆ ಸರಿಯಾದೀತು.

ಇಂದಿನ ದಿನಮಾನಗಳಲ್ಲಿ ಉದ್ಯೋಗಗಳು ಗಗನ ಕುಸುಮಗಳಾಗಿ ಕೈಗೆಟುವುದಕ್ಕೆ ದುಸ್ತರವಾಗಿವೆ. ಯಾಕೆಂದರೆ ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಮತ್ತು ಕಂಪ್ಯೂಟರೀಕರಣಗಳ ಪ್ರಭಾವದಿಂದ ಉದ್ಯೋಗಗಳು ಕೆಲವೊಂದು ಚದುರಿದರೆ ಇನ್ನೂ ಕೆಲವೊಂದು ಕುಗ್ಗಿವೆ. ಇನ್ನು ಸರ್ಕಾರಿ ಉದ್ಯೋಗಗಳಂತೂ ಕನಸಿನ ಮಾತಾಗಿವೆ. ಸರ್ಕಾರಿ ಅಥವಾ ಅರೆ ಸರ್ಕಾರಿ ಉದ್ಯೋಗಗಳನ್ನು ನಂಬಿಕೊಂಡು ಪರದಾಡುತ್ತಿರುವ ವಿದ್ಯಾವಂತ ನಿರುದ್ಯೋಗ ಯುವಕರಿಗೆ ದಾರಿ ತೋಚದಂತಾಗಿದೆ. ಅದರಲ್ಲಿಯೂ ಈ ಹಿಂದುಳಿದ ವರ್ಗಗಳ ವಿದ್ಯಾವಂತ ಯುವಕರಿಗಂತೂ ಬಾಳು ಗೋಳಾಗಿದೆ. ಯಾಕೆಂದರೆ ಅವರಿಗೆ ಆ ಉದ್ಯೋಗದ ದಾರಿಯೊಂದನ್ನು ಬಿಟ್ಟರೆ ಮತ್ತು ದಾರಿಯೇ ಇರುವುದಿಲ್ಲ. ಎಂದೇ, ವಿದ್ಯೆಗೆ ತಕ್ಕ ಪ್ರತಿಫಲ ಸಿಗಲಿಲ್ಲವೆಂಬುದಕ್ಕೋ ಏನೋ ಮುಂದೆ ದುಸ್ತರವಾಗಲಿರುವ ಜೀವನವನ್ನು ಕುರಿತು ಬೇಸರಿಸುತ್ತಾರೆ, ಜಿಗುಪ್ಸೆ ಹೊಂದುತ್ತಾರೆ.

ಒಂದೊಂದು ಸಲ ಅವರ ಜೀವನ ಆಘಾತಕ್ಕೀಡಾಗುವ ಸಂಭವಗಳೂ ಇರುತ್ತವೆ. ಗ್ರಾಮಾಂತರ ಪ್ರದೇಶಗಳಲ್ಲಿ ದೀನ-ದಲಿತರ ಹಾಗೂ ಹಿಂದುಳಿದ ವರ್ಗದ ಜನರಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಉದಾರೀಕರಣದ ಮುಂಚೆ ಲಭ್ಯವಿದ್ದ ಸಶಕ್ತರೆಲ್ಲರಿಗೆ ಉದ್ಯೋಗ ಎಂಬ ಭರವಸೆ ಇದೀಗ ಇಲ್ಲವಾಗಿದ್ದು ದಲಿತರು ಈಗ ಹೊಟ್ಟೆಗಿಲ್ಲದೆ ಕಾಲ ನೂಕುವಂತಾಗಿದೆ. ವಿಪರ್ಯಾಸವೆಂದರೆ, ಜಾಗತೀಕರಣ ಹಾಗೂ ದಲಿತ-ದುರ್ಬಲರ ಸ್ಥಿತಿಗತಿಗಳ ಕುಸಿತ ಇವುಗಳ ಅವಿನಾಸಂಬಂಧದ ಬಗ್ಗೆ ಯಾರೂ ಚಕಾರವೆತ್ತುತ್ತಿಲ್ಲ.

ಇತ್ತೀಚಿನ ಬೆಳವಣಿಗೆಗಳಿಂದಾಗಿ ಕೆಲವು ಹಿಂದುಳಿದ ದಲಿತ ವಿದ್ಯಾವಂತ ಯುವಕರಿಗೆ ಅಲ್ಪ ಪಗಾರದ ಕೆಲವು ನೌಕರಿಗಳು (ಉದಾಹರಣೆಗೆ ನೋಡುವದಾದರೆ ಕಾರ್ ಡ್ರೈವರ್‌ನಂಥ ಕೆಲಸ) ದೊರೆತಿವೆ. ಇನ್ನೂ ಕೆಲವರಿಗೆ ಸೇವಾ ವಿಭಾಗಗಳಲ್ಲಿ ಅತಿ ಕೆಳದರ್ಜೆಯ ಕೆಲಸಗಳು ದೊರೆತಿವೆ. ಈ ರೀತಿ ನಾವು ಅವಲೋಕಿಸಿದಾಗ ಎಷ್ಟೇ ಹೊಸದಾಗಿ ನೌಕರಿಗಳು ಸೃಷ್ಟಿಯಾದರೂ, ಹೆಚ್ಚಾಗಿ ಅವು ಮೇಲ್ಜಾತಿಯವರ ಪಾಲಾಗುತ್ತಿವೆ. ಯಾಕೆಂದರೆ, ಇವರು ಮಾರುಕಟ್ಟೆಯ ಮತ್ತು ಅರ್ಥವ್ಯವಸ್ಥೆಯ ರೀತಿ-ನೀತಿಗಳನ್ನು ಅರಿತಿರುತ್ತಾರೆ. ಇದರಿಂದಾಗಿ, ಹೊಸದಾಗಿ ಸೃಷ್ಟಿಯಾಗುವ ನೌಕರಿಗಳು ಸುಲಭವಾಗಿ ಅವರ ಮಡಿಲಿಗೆ ಸೇರಿಬಿಡುತ್ತವೆ. ಹೀಗೆ ಹೊಸದಾಗಿ ಸೃಷ್ಟಿಯಾದ ಅವಕಾಶಗಳನ್ನು ಬಳಸಿಕೊಳ್ಳಲು ವಿದ್ಯಾವಂತರಾದ ದಲಿತ ಹಿಂದುಳಿದ ಶೋಷಿತ ವರ್ಗಗಳಿಗೆ/ವರ್ಗಕ್ಕೆ ಚಾತುರ್ಯವಿಲ್ಲ. ಯಾಕೆಂದರೆ, ಯಾವುದೇ ಮಾರುಕಟ್ಟೆ ಮುಖ್ಯವಾಗಿ ಊರ್ಜಿತವಾಗುವುದು ಸಾಮಾಜಿಕ ಸಂಪರ್ಕಗಳ ಮುಖೇನ. ಹೀಗಾಗಿ ಈ ಅವಕಾಶಗಳನ್ನು ದಕ್ಕಿಸಿಕೊಳ್ಳುವ ಹಾಗೂ ದಕ್ಕಿದ ಅವಕಾಶಗಳನ್ನು ಉಳಿಸಿಕೊಳ್ಳುವ ಸಾಮರ್ಥ್ಯ ಸಮಾಜದ ಕೆಳವರ್ಗಕ್ಕೆ ಇರುವುದಿಲ್ಲ.

ಹಾಗೆಯೇ ''ಜಾತಿಯೊಂದೇ ಭಾರಿ ಬಂಡವಾಳವಾಗಿರುವ ಈ ದೇಶದಲ್ಲಿ ದಲಿತರು ಹಾಗೂ ಕೆಳಜಾತಿಯ ಜನರಿಗೆ ಬಂಡವಾಳಶಾಹಿ ಮಾರುಕಟ್ಟೆಯಲ್ಲಿ ಸ್ಪರ್ಧಿಸಿ ಗೆಲ್ಲುವುದು ದುಸ್ಸಾಧ್ಯವಾಗಿದೆ. ಈ ದೇಶದಲ್ಲಿ ದಲಿತರ ಪರಿಸ್ಥಿತಿ ಬಂಡವಾಳಶಾಹಿಯ ಹಲವಾರು ಹಂತಗಳಲ್ಲಿದ್ದ ಐರೋಪ್ಯ ಶ್ರಮಿಕರ ಪರಿಸ್ಥಿತಿಗಿಂತ ಹೀನವಾದುದು. ಸಾಮಾಜಿಕ ಹಾಗೂ ಆರ್ಥಿಕ ಸುಭದ್ರತೆಯಿಲ್ಲದ ದಲಿತರು ಮಾರುಕಟ್ಟೆಯ ಅರ್ಥವ್ಯವಸ್ಥೆಯಲ್ಲಿ ಗೆಲ್ಲುವುದಿರಲಿ, ಬದುಕುಳಿಯುವುದೇ ಅಸಾಧ್ಯವಾಗಿದೆ.'' ಹಾಗಂತ ಬರೀ ಕೈ ಕಟ್ಟಿಕೊಂಡು ಕುಳಿತರೆ ಏನೇನೂ ಮಾಡಲಿಕ್ಕೆ ಸಾಧ್ಯವಿಲ್ಲ, ಪ್ರಯತ್ನಿಸಬೇಕು. ಪ್ರಯತ್ನಕ್ಕೆ ತಕ್ಕ ಪ್ರತಿಫಲ ಸಿಕ್ಕೇಸಿಕ್ಕುತ್ತದೆ. ಎಂತೆಂಥ ಕಷ್ಟ ಪರಿಸ್ಥಿತಿಗಳನ್ನು ದಾಟಿ, ಜಯಿಸಿ ಮುಂದೆ ಬಂದವರ ಚರಿತ್ರೆಗಳು ನಮ್ಮ ಕಣ್ಮುಂದೇ ಇವೆ.

ದೇಶದ ಹಿಂದುಳಿದ ವರ್ಗಗಳನ್ನು ಅವಲೋಕಿಸಿದಾಗ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ದೃಷ್ಟಿಗಳಿಂದ ಕೆಲವೊಂದು ಜನಾಂಗಗಳು ಮುಂದುವರೆದ ಶ್ರೇಣಿಗಳಲ್ಲಿವೆ. ಅವುಗಳಿಗೆ ಯಾವ ಸೌಲಭ್ಯಗಳ ಕೊರತೆ ಇರದೆ, ಬೇಕಾದ ಸೌಲಭ್ಯಗಳು ಸಲೀಸಾಗಿ ಅವುಗಳಿಗೆ ದೊರೆಯುವುದರಿಂದ ಉನ್ನತ ಪದವಿಗಳು, ತಾಂತ್ರಿಕ ಶಿಕ್ಷಣ ಸೌಲಭ್ಯ ಮತ್ತು ಉತ್ತಮ ಶೈಕ್ಷಣಿಕ ಅವಕಾಶಗಳನ್ನು ಆ ಜನಾಂಗದವರು ಪಡೆದುಕೊಳ್ಳುತ್ತಾರೆ. ಜೊತೆಗೆ ಉನ್ನತ ಮಟ್ಟದ ಉದ್ಯೋಗಾವಕಾಶಗಳು ಕೂಡ ಅವರ ಮಡಿಲಿಗೆ ಬಂದು ಸೇರುತ್ತವೆ.

ಎಚ್. ಟಿ. ಕೃಷ್ಣಪ್ಪ ಅವರ ಪ್ರಕಾರ, ''ಆರ್ಥಿಕ ಭದ್ರತೆಯ ಬುನಾದಿಯನ್ನು ಕೊಟ್ಟ ಕಾಲದಲ್ಲಿ ಅದೇ ಜನಾಂಗದವರು ಅಂದರೆ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಸೇರಿದವರು, ಒಕ್ಕಲಿಗ ಜನಾಂಗಕ್ಕೆ ಸೇರಿದವರು, ಹಿಂದುಳಿದ ವರ್ಗಗಳಿಗೆ ಸೇರಿದವರು, ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರು ಯಾವುದೇ ಜಾತಿಯನ್ನಾದರೂ ತೆಗೆದುಕೊಳ್ಳಿ, ಯಾರು ಜಾತಿಯ ಮುಂಚೂಣಿಯಲ್ಲಿ





ವಿಜಯ ಆರ್. ಕಾಂಬಳೆ

ರುತ್ತಾರೋ, ಯಾರು ಜಾತಿಯ ನೇತೃತ್ವವನ್ನೇ ವಹಿಸಿಕೊಂಡಿರುತ್ತಾರೋ ಅವರೇ ಜಾತಿಯ ಶೋಷಕರು. ಜಾತಿಯ ಹೆಸರಿನಲ್ಲಿ ಪ್ರತಿಯೊಂದು ಸೌಲಭ್ಯವನ್ನೂ ತಾವೇ ಪಡೆಯತಕ್ಕ ಬ್ರಹ್ಮರಾಕ್ಷಸರು. ಈ ಒಂದು ಪ್ರವೃತ್ತಿ ಯಾವ ಜನಾಂಗದಲ್ಲಿ ಬೆಳೆಯುತ್ತಿದ್ದರೂ ಅದನ್ನು ಹತ್ತಿಕ್ಕಬೇಕು.''

ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ರಂಗಗಳಲ್ಲಿ ಮುಂದುವರೆದ ಹಿಂದುಳಿದ ವರ್ಗಗಳ ಕೆಲವೊಂದು ಜನಾಂಗಗಳ ಮೀಸಲಾತಿಯನ್ನು ಮೊಟಕುಗೊಳಿಸಿ, ಅದೇ ಜನಾಂಗದಲ್ಲಿ ಹಿಂದುಳಿದವರ ಸದ್ವಿನಿಯೋಗಕ್ಕೆ ಬಳಸಲು ಶ್ರಮಿಸಿದರೆ ಹಿಂದುಳಿದ ವರ್ಗಗಳ ಉದ್ಯೋಗಗಳ ಸಮಸ್ಯೆಗಳು ಅಷ್ಟೇ ಅಲ್ಲ, ಇನ್ನಿತರ ಸಮಸ್ಯೆಗಳೂ ಪರಿಹಾರವಾಗುವುದರಲ್ಲಿ ಸಂಶಯವಿಲ್ಲ.

ಸರ್ಕಾರದ ಅಧೀನಕ್ಕೆ ಒಳಪಡತಕ್ಕಂಥ ಪ್ರತಿಷ್ಠಿತ ಸಂಘ-ಸಂಸ್ಥೆಗಳಲ್ಲಿಯ ಆಡಳಿತವನ್ನು ಒಳಹೊಕ್ಕು ನೋಡಿದಾಗ, ಆ ಸಂಘ-ಸಂಸ್ಥೆಗಳ ಪದಾಧಿಕಾರಿಗಳದೇ ಕಾರುಬಾರು. ಅವರು ಹುದ್ದೆಗಳ ಆಯ್ಕೆಯ ಪ್ರಕ್ರಿಯೆಯಿಂದ ಹಿಡಿದು ಹುದ್ದೆಗಳ ಮೀಸಲಾತಿಯ ಸ್ಥಾನಗಳನ್ನು ತಮಗೆ ಬೇಕಾದಂತೆ ತಿರುಚುವವರೆಗೂ ಹಸ್ತಕ್ಷೇಪ ಮಾಡುತ್ತಾರೆ. ಇಂಥ ಆಯ್ಕೆ ಪ್ರಕ್ರಿಯೆಯು ಕಳೆದ ಬಾರಿ ನಡೆದ ಸರಕಾರಿ ಬ್ಯಾಕ್‌ಲಾಗ್ ಪದ್ಧತಿಯಲ್ಲಿಯೂ ನಡೆದಿರುತ್ತದೆ. ಹಾಗೆಯೇ ಸರ್ಕಾರಗಳು ಅಲಕ್ಷಿತ ಸಮುದಾಯಗಳಲ್ಲಿಯ ಏರು-ಪೇರುಗಳನ್ನು ಹೋಗಲಾಡಿಸಲು ಅಂತರರಾಷ್ಟ್ರೀಯ ಹಣಕಾಸು ಮೂಲಗಳಿಂದ ದೊರೆಯುವ ಯೋಜನೆಗಳನ್ನು ಅವುಗಳಿಗೆ ಸರಿಯಾಗಿ ಮುಟ್ಟಿಸುತ್ತಿಲ್ಲ. ಯಾಕೆಂದರೆ, ಸರ್ಕಾರದ ಅಧಿಕಾರಿ ಮತ್ತು ಸಿಬ್ಬಂದಿ ವರ್ಗ ನಿಯತ್ತಾಗಿ ಮಾನವೀಯತೆಯಿಂದ ಸೇವೆ ಮಾಡುತ್ತಾ ಇಲ್ಲ. ಇದರಿಂದ ಖಾಸಗೀಕರಣಕ್ಕೆ ಸರ್ಕಾರಗಳೇ ಪ್ರೋತ್ಸಾಹಿಸುತ್ತಿವೆ ಎಂಬುದರ ಸತ್ಯಾಂಶ ನಮಗೆ ತಿಳಿದು ಬರುತ್ತದೆ. ಜೊತೆಗೆ ನಮ್ಮ ರಾಜಕಾರಣಿಗಳ ಕೈವಾಡವೂ, ಅವರ ಸ್ವಂತ ಲಾಭದ ಸ್ವಾರ್ಥತೆಯೂ ಅದರಲ್ಲಿದೆ.

ಮೊನ್ನೆ ಮೊನ್ನೆಯೇ 'ಸಂಸತ್ತಿನೊಳಗೂ ಲಂಚಾವತಾರ: ದುರ್ಯೋಧನ ಪ್ರಹಾರಕ್ಕೆ ಹನ್ನೊಂದು ಬಲಿ' ಎಂದು ದೊಡ್ಡ ಅಕ್ಷರದ ಶೀರ್ಷಿಕೆಯನ್ನು ಪತ್ರಿಕೆಗಳಲ್ಲಿ ನೋಡಿ ದಿಗಿಲಾಗದವರೇ ಇಲ್ಲ. ಸಂಸತ್ತಿನಲ್ಲಿ ಪ್ರಶ್ನೆಗಳನ್ನು ಕೇಳಲು ನಗದು ಹಣ ಪಡೆಯುತ್ತಿದ್ದರೆನ್ನಲಾದ ಹನ್ನೊಂದು ಮಂದಿ ಸಂಸದರು 'ಕೊಬ್ರಾ ಪೋಸ್ಟ್ ಆಜ್‌ತಕ್' ತಂಡ ನಡೆಸಿದ ರಹಸ್ಯ ಕಾರ್ಯಾಚರಣೆಯಿಂದ ವಿವಿಧ ಪಕ್ಷದ ಸಂಸದರು ಸಿಲುಕಿಹಾಕಿಕೊಂಡಿದ್ದಾರೆ ಎಂಬ ಸುದ್ದಿ ತಿಳಿದು ಎಲ್ಲರಿಗೂ ದಿಗ್ಭ್ರಮೆಯಾಗಿರಲೇಬೇಕು.

'ಬೇಲಿಯೇ ಎದ್ದು ಹೊಲ ಮೇಯ್ದಂತೆ' ಎಂಬಂತಾಯಿತು ನಮ್ಮ ದೇಶದ ಪರಿಸ್ಥಿತಿ. ದೇಶದ ಪರಿಸ್ಥಿತಿಯೇ ಈ ರೀತಿಯಲ್ಲಿ ಡೋಲಾಯಮಾನವಾಗಿರುವಾಗ ಸಾಮಾನ್ಯ ಜನರ ಪಾಡು ಮತ್ತು ಹಿಂದುಳಿದ ಜನರ ಗೋಳನ್ನು ಕೇಳುವವರ್ಯಾರು, ಎಂಬ ಪ್ರಶ್ನೆ ನಮ್ಮ ಮುಂದಿದೆ.

ಡಾ|| ಬಾಬಾಸಾಹೇಬ್ ಅಂಬೇಡ್ಕರವರು ಹಿಂದುಳಿದ ಎಲ್ಲ ವರ್ಗಗಳಿಗೂ ಸರ್ಕಾರಿ ಸೇವೆಗಳಲ್ಲಿ ಸೂಕ್ತ ಪ್ರಾತಿನಿಧ್ಯವನ್ನು ಕಲ್ಪಿಸಿ, ಅವರು ಆರ್ಥಿಕವಾಗಿ ಸುಧಾರಿಸುವುದರ ಸಲುವಾಗಿ ಮೀಸಲಾತಿಯ ಅವಶ್ಯಕತೆಯ ಬಗ್ಗೆ ಸಂವಿಧಾನದಲ್ಲಿ ತಿಳಿಸಿದ್ದಾರೆ. ಆಯಾ ಜನಸಂಖ್ಯೆಗೆ ಅನುಗುಣವಾಗಿ ಹಿಂದುಳಿದ ಜಾತಿಯವರಿಗೆ




ಉದ್ಯೋಗದಲ್ಲಿ (ಕೇಂದ್ರ ಸರ್ಕಾರ ಶೇಕಡ ೨೨.೫, ರಾಜ್ಯ ಸರ್ಕಾರ ಶೇಕಡ ೧೮) ಮೀಸಲಾತಿಯನ್ನು ನೀಡುವಂತೆ ನಿಗದಿಮಾಡಲಾಗಿದೆ. ಶೇಕಡ ೫೨ರಷ್ಟು ಹಿಂದುಳಿದ ಜಾತಿಗಳವರ ಜನಸಂಖ್ಯೆಗೆ ಮೀಸಲಾತಿಯನ್ನು, ಕೇವಲ ಶೇಕಡ ೨೭ರಷ್ಟು ಕೇಂದ್ರದಲ್ಲಿ ಮತ್ತು ಶೇಕಡ ೩೨ ರಾಜ್ಯದಲ್ಲಿ ನೀಡಲಾಗಿದೆ. ಇದರಿಂದ ತಮ್ಮ ಜನಸಂಖ್ಯೆಯ ಪ್ರಮಾಣವನ್ನು ಒರೆಗೆ ಹಚ್ಚಿ ನೋಡಿದಾಗ ಕೇವಲ ಅರ್ಧದಷ್ಟು ಮೀಸಲಾತಿ ಮಾತ್ರ ಹಿಂದುಳಿದವರಿಗೆ ಸಿಕ್ಕಿದೆ.

ಹಾಗೆಯೇ ರಾಜಕೀಯ ಕ್ಷೇತ್ರವನ್ನೂ ಒಳಗೊಂಡಂತೆ ಶಿಕ್ಷಣ ಮತ್ತು ನೌಕರಿಯಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ದೊರೆಯುವ ನಿಟ್ಟಿನಲ್ಲಿ ಮಂಡಲ್ ಆಯೋಗವು ಶಿಫಾರಸ್ಸು ಮಾಡಿದ್ದರೂ ಕೇಂದ್ರ ಸರ್ಕಾರವು ಉದ್ಯೋಗದಲ್ಲಿ ಮಾತ್ರ ಹಿಂದುಳಿದವರಿಗೆ ಶೇಕಡ ೨೭ರಷ್ಟು ಮೀಸಲಾತಿ ನೀಡಿತು.

ಕೇಂದ್ರ ಸರ್ಕಾರದಲ್ಲಿ ಹಿಂದುಳಿದ ಹಿಂಬಾಕಿ (ಬ್ಯಾಕ್ ಲಾಗ್) ಎಂದರೆ ಬಾಕಿ ಉಳಿದಿದ್ದ ಹೆಚ್ಚಿನ ಹುದ್ದೆಗಳನ್ನು ಸರಿಯಾಗಿ ಭರ್ತಿಮಾಡಿಕೊಳ್ಳದಿದ್ದ ಕಾರಣ ೫ ಲಕ್ಷಕ್ಕಿಂತ ಹೆಚ್ಚು ಹುದ್ದೆಗಳು ಹಾಗೆಯೇ ಉಳಿದಿವೆ. ನಮ್ಮ ರಾಜ್ಯ ಸರ್ಕಾರದಲ್ಲಿಯೂ ೧೦೧ ಇಲಾಖೆಗಳು ಹಾಗೂ ೭೯ ಸಾರ್ವಜನಿಕ ಉದ್ಯಮಗಳಿವೆ. ಇವುಗಳಲ್ಲಿಯೂ ಕೂಡ ೮೦ ಸಾವಿರಕ್ಕಿಂತ ಹೆಚ್ಚಿನ ಹಿಂಬಾಕಿ (ಬ್ಯಾಕ್‌ಲಾಗ್) ಹುದ್ದೆಗಳನ್ನು ಉಳಿಸಲಾಗಿದೆ. ಅದೇ ರೀತಿ ಬ್ಯಾಂಕ್, ಇನ್‌ಶೂರೆನ್ಸ್, ಇತರೆ ನಿಗಮಗಳಲ್ಲಿ, ಸ್ಥಳೀಯ ಸಂಸ್ಥೆಗಳಲ್ಲಿ ಮತ್ತು ಸರ್ಕಾರಿ ಸಂಸ್ಥೆಗಳಲ್ಲಿ ಹಲವು ಲಕ್ಷ ಹುದ್ದೆಗಳು ಭರ್ತಿಯಾಗದೆ ಹಾಗೇ ಹಿಂಬಾಕಿಯಾಗಿ ಉಳಿದಿವೆ. ಇದು ನಮ್ಮ ರಾಜ್ಯದ ಪರಿಸ್ಥಿತಿ ಅಷ್ಟೇ ಆಗಿರದೆ ನಮ್ಮ ದೇಶದ ಪ್ರತಿಯೊಂದು ರಾಜ್ಯದ ಪರಿಸ್ಥಿತಿಯೂ ಆಗಿದೆ. ಇದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಿ ಇಲಾಖೆಗಳಲ್ಲಿ ಮತ್ತು ಉದ್ಯಮಗಳಲ್ಲಿ ಒಟ್ಟು ಐದು ಕೋಟಿಗಿಂತ ಹೆಚ್ಚು ಹುದ್ದೆಗಳು ಭರ್ತಿಯಾಗದೆ ಹಾಗೆ ಉಳಿದಿವೆ ಎಂಬ ಅಂದಾಜು ಇದೆ.

ಸೃಷ್ಟಿಯಾದ ಎಲ್ಲ ಹುದ್ದೆಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಟ್ಟುನಿಟ್ಟಾಗಿ ಭರ್ತಿ ಮಾಡಿದ್ದರೆ, ''ಸುಮಾರು ೪೦ ಕೋಟಿ ಮಂದಿ ಭಾರತೀಯರು ಬಡತನದಿಂದ ಬಿಡುಗಡೆ ಪಡೆದಿರುತ್ತಿದ್ದರು. ಮತ್ತು ಜಾತಿವಾದಿ ಭೂಮಾಲೀಕರಿಂದ ಸ್ವತಂತ್ರರಾಗಬಹುದಿತ್ತು! ಕೆಲಸವಿಲ್ಲದೆ ಜೀವನದಲ್ಲಿ ಜಿಗುಪ್ಸೆಗೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ನೂರಾರು ಯುವಕ ಯುವತಿಯರ ಅಮೂಲ್ಯ ಜೀವನ ಉಳಿಯುತ್ತಿತ್ತು. ಈ ನಾಡಿನಲ್ಲಿ ಕೊಲೆ, ಸುಲಿಗೆ, ಅಶಾಂತಿ, ಗಲಭೆ, ದರೋಡೆ, ಸ್ಮಗ್ಲಿಂಗ್, ಡ್ರಗ್ ಮಾಫಿಯಾ, ಗೂಂಡಾಗಿರಿ ಮುಂತಾದ ಅಪರಾಧಗಳು ಇಲ್ಲವಾಗುತ್ತಿದ್ದವು.''

ಇಂದು ಎಲ್ಲಿ ನೋಡಿದರು ಕಂಪ್ಯೂಟರ್. ಇದು ಕಂಪ್ಯೂಟರ್ ಯುಗ. ಮುಂದೊಂದು ದಿನ ಕಂಪ್ಯೂಟರ್‌ನಿಂದಲೇ ಮಾನವನ ಎಲ್ಲ ಚಟುವಟಿಕೆಗಳು ಸಾಧ್ಯವಾಗಬಹುದು. ಕಂಪ್ಯೂಟರ್‌ನಿಂದ ಉದ್ಯೋಗಗಳು ಇಂದು ಕಡಿತವಾಗುತ್ತಿವೆ. ನೂರು ಜನರು ಮಾಡುವಂಥ ಕೆಲಸವನ್ನು ಇಂದು ಹತ್ತು ಜನರು ಮಾಡುತ್ತಿದ್ದಾರೆ. ಹತ್ತು ಜನರು ಮಾಡುವ ಕೆಲಸವನ್ನು ಒಬ್ಬರೇ ಮಾಡುವಂಥ ತಂತ್ರಜ್ಞಾನ ಯುಗ ಬಂದಿದೆ. ಇದರಿಂದ ಉದ್ಯೋಗಗಳಿಗೆ ಭಾರಿ ಪೆಟ್ಟು ಬಿದ್ದಿದೆ. ಹಿಂದುಳಿದ ವರ್ಗದವರಿಗಂತೂ ಇದರಿಂದ ತೀರಾ ಪೆಟ್ಟು ಬಿದ್ದಿದೆ. ತಂತ್ರಜ್ಞಾನದ ಶೈಕ್ಷಣಿಕ ಅರ್ಹತೆಗಳ ಅವಶ್ಯಕತೆ ಜರೂರು ಇದ್ದಾಗ, ಅರೆ ತಂತ್ರಜ್ಞಾನ ಉನ್ನತೋನ್ನತ ಶೈಕ್ಷಣಿಕ ಅರ್ಹತೆಗಳು ಹಿಂದುಳಿದ ವರ್ಗಗಳ ಯುವಕರಲ್ಲಿ ಇದ್ದು ಪ್ರಯೋಜನವೇನು ?

ಈ ನಿಟ್ಟಿನಲ್ಲಿ ಸರ್ಕಾರಗಳು ಕೂಡ ವಿಶೇಷವಾದ ತಂತ್ರಜ್ಞಾನ ಶಿಕ್ಷಣ ಕೊಡುವ ಸಲುವಾಗಿ ಹಿಂದುಳಿದ ಎಲ್ಲ ವರ್ಗಗಳಿಗೂ ಯೋಜನೆಗಳನ್ನು ರೂಪಿಸಿದರೂ ಅವು ಕಟ್ಟುನಿಟ್ಟಾಗಿ ಜಾರಿಗೆ ಬರುತ್ತಿಲ್ಲ ಮತ್ತು ಬಳಕೆಯಾಗುತ್ತಿಲ್ಲ; ಅವರೂ ಕೂಡ ಸರಿಯಾಗಿ ಬಳಸಿಕೊಳ್ಳುತ್ತಾ ಇಲ್ಲ. ಈ ತರಹದ ಯೋಜನೆಗಳು ಕಟ್ಟುನಿಟ್ಟಾಗಿ ಜಾರಿಯಾಗಿ, ಸದ್ಬಳಕೆಯಾದರೆ ಹಿಂದುಳಿದ ವರ್ಗಗಳ ಉದ್ಯೋಗಗಳಲ್ಲಿ ತಲೆದೋರುವ ಸಮಸ್ಯೆಗಳು ಸ್ವಲ್ಪಮಟ್ಟಿಗೆ ದೂರವಾಗಬಲ್ಲವು.

ಇನ್ನು ಹಿಂದುಳಿದ ಯಾವ ವರ್ಗಗಳಾಗಲಿ ಸತತವಾಗಿ ಮೀಸಲಾತಿಯನ್ನು ನಂಬಿ ಬದುಕುವುದು ತಮ್ಮ ವಿಕಾಸವನ್ನು ತಾವೇ ಕುಂಠಿತಗೊಳಿಸಿಕೊಂಡಂತೆ. ಅದಕ್ಕಾಗಿ ಅವರು ಮೀಸಲಾತಿಯನ್ನು ಮೀರಿ ಬದುಕಲು ಒಮ್ಮನಸ್ಸಿನಿಂದ ಪ್ರಯತ್ನಿಸಬೇಕು. ಇಲ್ಲಿಯ ತನಕ ವಿದೇಶಿ ಮೂಲದ ತಂತ್ರಜ್ಞಾನವನ್ನು ಹಿಂದುಳಿದ ಕೆಳಜಾತಿಯವರಿಗೆ ಶಿಕ್ಷಣದ ಮೂಲಕ ನಮ್ಮ ಸರಕಾರಗಳು ತಲುಪಿಸಿದ್ದರೆ, ಇಷ್ಟು ಹೊತ್ತಿಗಾಗಲೇ ಅರ್ಧದಷ್ಟು ಜನ ಅಭಿವೃದ್ಧಿ ಹೊಂದಿ ಮೀಸಲಾತಿಯನ್ನು ತಾವೇ ತಿರಸ್ಕರಿಸುತ್ತಿದ್ದರು.

ಒಟ್ಟಾಗಿ ಹಿಂದುಳಿದ ವರ್ಗಗಳು ತಮ್ಮ ಸಮುದಾಯಗಳ ಹಿತದೃಷ್ಟಿಯಿಂದ ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಮತ್ತು ಕಂಪ್ಯೂಟರೀಕರಣ ವ್ಯವಸ್ಥೆಗಳಲ್ಲಿ ಬರುವ ಯೋಜನೆಗಳನ್ನು ಮತ್ತು ಅವಕಾಶಗಳನ್ನು ತಮ್ಮ ವಿಕಾಸಕ್ಕೆ ಒಳಪಡಿಸಿಕೊಂಡು ಜಾಗ್ರತೆಯಿಂದ ಬಳಸಿಕೊಂಡದ್ದಾದರೆ ನಿರುದ್ಯೋಗ ಸಮಸ್ಯೆಯು ಕಿಂಚಿತ್ತೂ ಉಳಿಯುವುದಿಲ್ಲ.

ವಿಜಯ ಆರ್. ಕಾಂಬಳೆ
ಮಲಪ್ರಭಾ ವಸತಿ ನಿಲಯ, ರೂಮ್ ನಂ ೩೪
ಕ.ವಿ.ವಿ. ಧಾರವಾಡ - ೫೮೦ ೦೦೩

"ಬಯಲು, ಶರಣ, ಗುಹೇಶ್ವರ ಮತ್ತು ಅಲ್ಲಮಪ್ರಭುವನ್ನು ಏಕಾರ್ಥವೆಂಬಂತೆ ನುಡಿದ ಪ್ರತ್ಯೇಕ ಬುದ್ಧ ಅಲ್ಲಮಪ್ರಭುವಿಗೆ ವಂದಿಸುತ್ತೇನೆ."

ಪ್ರಭುವಿನಂತಹ ಅನುಭಾವಿಯ ತಾತ್ವಿಕತೆಯೊಂದಿಗಿನ ಸಂಪರ್ಕ ವಿಧಾನಗಳು ಸ್ಪಷ್ಟ ಮತ್ತು ನಿಶ್ಚಿತ ರೀತಿಯವಾಗಿರಲು ಸಾಧ್ಯವಿಲ್ಲ. ಭಾಷೆಗೆ ಇರುವ ಸಾಮರ್ಥ್ಯವನ್ನೇ ಅಡಿಗಡಿಗೆ ಪ್ರಶ್ನಿಸುತ್ತಾ ಸಾಗುವ ಅಲ್ಲಮನನ್ನು ಎದುರುಗೊಳ್ಳಲು ಭಾಷಿಕ ಸಲಕರಣೆಗಳು ಅಂತಹ ಉಪಯೋಗೀ ಸಾಧನಗಳಲ್ಲ. ಸಾಮಾನ್ಯವಾಗಿ ಭಾಷಿಕ ಪ್ರಯತ್ನಗಳೆಲ್ಲ ಪ್ರಜ್ಞೆಯ ವಿಕಾಸವನ್ನು ಭಾಷೆಯಗುಂಟ ಗುರುತಿಸುತ್ತಾ ಹೋಗುತ್ತವೆ. ರೂಪಕ ಪ್ರತಿಭೆಯ ಮಹಾಕವಿಗಳೂ ಇನ್ನೊಂದು ಭಾಷಿಕ ವಾಸ್ತವವನ್ನು ಯಶಸ್ವಿಯಾಗಿ ಸೃಷ್ಟಿಸುವುದರಲ್ಲಿ ತೊಡಗುತ್ತಾರೆ. ಭಾಷೆಯ ಸಾಮರ್ಥ್ಯವನ್ನು ಪ್ರಶ್ನಿಸುವಾಗಲೂ ಅಲ್ಲಮ ಇನ್ನೊಂದು ಭಾಷಿಕ ವಾಸ್ತವವನ್ನು ಉಳಿಸಿಕೊಳ್ಳದೆ ಅದನ್ನೂ ನಿರಸನಗೊಳಿಸಿಕೊಂಡೇ ಸಾಗುತ್ತಾನೆ. ಹೀಗೆ ಉಳಿಸಿಹೋಗದ ದಾರಿಯನ್ನು ಹಿಡಿಯಹೊರಡುವ ಭಾಷಿಕ ಪ್ರಯತ್ನಗಳೆಲ್ಲ ದುರ್ಬಲ ಪ್ರಯತ್ನಗಳೇ ಎಂಬ ಅರಿವು ಅವಶ್ಯಕ. ತೊಡೆಯಲಾಗದ ಲಿಪಿಯ ಬರೆಯಲಾಗದು ಎನ್ನುವ ಅಲ್ಲಮ ವ್ಯಾಖ್ಯಾನವಿರೋಧಿ. ತನ್ನನ್ನಾಗಲೀ ತನ್ನ ವಚನವನ್ನಾಗಲೀ ಅರ್ಥವೊಂದಕ್ಕೆ ಬಂಧಿಸುವ ಪ್ರಯತ್ನ ಅವನಿಗೆ ಒಗ್ಗುವ ಸಂಗತಿಯಲ್ಲ.

**ಅಲ್ಲಮನ ತಾತ್ವಿಕತೆಯ ಹಿನ್ನೆಲೆ**

ಅಲ್ಲಮಪ್ರಭು ಮತ್ತು ಇತರ ವಚನಕಾರರು ರೂಪಿಸಿಕೊಟ್ಟ ತಾತ್ವಿಕತೆ ಏಕಾಕಿಯಾಗಿ ರೂಪುಗೊಂಡದ್ದಲ್ಲ. ಅದರ ಹಿಂದೆ ಅನೇಕ ಚಿಂತನಾಪ್ರಸ್ಥಾನಗಳು ಒದಗಿಸಿಕೊಟ್ಟ ತಾತ್ವಿಕ ಸಿದ್ಧತೆ ಇದೆ. ಉಪನಿಷತ್ತುಗಳು, ಶೈವಾಗಮಗಳು, ವಿವಿಧ ಬೌದ್ಧ ಪಂಥಗಳು, ಸಿದ್ಧಪರಂಪರೆಗಳು ಮತ್ತು ಪ್ರಧಾನವಾಗಿ ಅನೇಕ ಶ್ರಮಣಧಾರೆಗಳು

# ಔತ್ತರೇಯ ಅನುಭಾವಿ ಪರಂಪರೆ ಮತ್ತು ಅಲ್ಲಮಪ್ರಭು



ಪ್ರತಿಯೊಂದೂ ಕಾರಣ ಮತ್ತು ಪ್ರತ್ಯಯಗಳಿಂದಾದ (ಪರಿಸ್ಥಿತಿ) ಪರಿಣಾಮ. ಇದನ್ನೇ ಪ್ರತೀತ್ಯ ಸಮುತ್ಪಾದ ಎನ್ನುತ್ತಾರೆ. ಪ್ರತಿಯೊಂದು ವಸ್ತುವಿನ ಸಂಯೋಜನಾ ಘಟಕಗಳಾದ ಕಾರಣದಲ್ಲಾಗಲೀ, ಪರಿಸ್ಥಿತಿಯಲ್ಲಾಗಲೀ, ಪರಿಣಾಮದಲ್ಲಾಗಲೀ ಸ್ವತಂತ್ರ ಶಾಶ್ವತ ವಸ್ತುವೆಂಬುದಾಗಲೀ, ಅಂತಸ್ಸತ್ವವೆಂಬುದಾಗಲೀ, ಆತ್ಮವೆಂಬುದಾಗಲೀ ಇಲ್ಲ. ಬದಲಾಗದ ಅಂತಸ್ಸತ್ವವೆಂಬುದಿಲ್ಲ. ಚಲನೆ ಮತ್ತು ಬದಲಾವಣೆ ಇದೇ ವಿಶ್ವದ ಧರ್ಮ. ಸರ್ವವೂ 'ಆಗುವಿಕೆ'ಯಲ್ಲಿಯೇ ಇರುತ್ತದೆ. 'ಆಗಿ ಇರುವುದು' ಯಾವುದೂ ಇಲ್ಲ. ಎಲ್ಲವೂ ನಿರಂತರ ಪ್ರವಾಹ ಮಾತ್ರ. ಇದನ್ನು ಒಂದು ಉದಾಹರಣೆಯ ಮೂಲಕ ಸೂಚಿಸುವುದಾದರೆ : "ಒಂದು ನದಿಗೆ ಎರಡು ಸಾರಿ ಕಾಲಿಡಲು ಸಾಧ್ಯವಿಲ್ಲ." ಇದು ಬುದ್ಧನ ಪರಿನಿರ್ವಾಣದ ಸುಮಾರು ಇನ್ನೂರು ವರ್ಷಗಳ ನಂತರ ಬಂದ ಅಥೆನ್ಸ್‌ನ ಹೆರಾಕ್ಲೀಟಸ್ ಎಂಬುವನ ಮಾತು. ನಾಗಾರ್ಜುನನ ಮೂಲ ಮಾಧ್ಯಮಿಕ ಕಾರಿಕಾವು ಇದರ ವಿವರಣೆಯನ್ನು ಪೂರ್ಣರೂಪದಲ್ಲಿ ಹೀಗೆ ಪ್ರಕಟಿಸುತ್ತದೆ : 'ಒಂದು ನದಿಗೆ ಎರಡು ಸಾರಿ ಕಾಲಿಡಲು ಸಾಧ್ಯವಿಲ್ಲ; ಎರಡು ಸಾರಿ ಕಾಲಿಟ್ಟ ಮನುಷ್ಯ ಒಬ್ಬನೇ ಅಲ್ಲ; ಎರಡು ಸಾರಿ ಕಾಲಿಟ್ಟಾಗಿನ ಪರಿಸ್ಥಿತಿ ಒಂದೇ ಅಲ್ಲ; ಎರಡು ಸಾರಿ ಕಾಲಿಟ್ಟಾಗಿನ ಪರಿಣಾಮಗಳೂ ಒಂದೇ ಅಲ್ಲ"

ಎಸ್. ನಟರಾಜ ಬೂದಾಳು

ರೂಪಿಸಿಕೊಟ್ಟ ತಾತ್ವಿಕತೆಯ ಪ್ರಭಾವ ಇದೆ. ಆಜೀವಿಕ, ನಾಥ, ಸಿದ್ಧ ಪರಂಪರೆಗಳು ವೈದಿಕ ಪಂಥಗಳೊಡನೆ ನಡೆಸಿದ ತಾತ್ವಿಕ ಸೆಣಸಾಟಗಳ ಮುಂದುವರಿಕೆ ಇದೆ. ಅಲ್ಲಮನ ಮಟ್ಟಿಗೆ ಗಮನಿಸುವುದಾದರೆ ಅಲ್ಲಮ ಪ್ರತಿಭೆ ರೂಪುಗೊಂಡ ಆವರಣವೇ ಅತ್ಯಂತ ವಿಶಿಷ್ಟವಾದದ್ದು. ಅಲ್ಲಮ ಬೆಳೆದದ್ದು ಬಳ್ಳಿಗಾವೆಯ ಕೋಡಿಮಠದ ಆವರಣದಲ್ಲಿ. ಕೋಡಿಮಠಕ್ಕೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವದ ಸ್ಥಾನವಿದೆ. ಸುಮಾರು ಕ್ರಿ.ಶ. ಎರಡನೆಯ ಶತಮಾನದಿಂದ ಎಂಟನೆಯ ಶತಮಾನದವರೆಗೂ ಬೌದ್ಧ ವಜ್ರಯಾನ ಪಂಥದ ಕೇಂದ್ರವಾಗಿ, ಬೌದ್ಧ ಮಹಾಯಾನ ದರ್ಶನದ ಸನಿವಾಸ ವಿಶ್ವವಿದ್ಯಾಲಯವಾಗಿ, ಇತರ ಭಾರತೀಯ ದರ್ಶನಗಳ ಕೇಂದ್ರವಾಗಿ, ಪ್ರಧಾನವಾಗಿ ನಾಗಾರ್ಜುನನ ಪ್ರಥಮ ಕಾರ್ಯಕ್ಷೇತ್ರವಾಗಿ ಭಾರತದ ಬೌದ್ಧ ಚರಿತ್ರೆಯಲ್ಲಿ ಒಂದು ಪ್ರಮುಖ ಕೇಂದ್ರವಾಗಿದೆ. ಖ್ಯಾತ ಚೀನೀ ಪ್ರವಾಸಿ ಹ್ಯೂಯನ್‌ತ್ಸಾಂಗ್ ಕೋಡಿಮಠಕ್ಕೆ ಭೇಟಿನೀಡಿ ಅಲ್ಲಿಯ ಚಿತ್ರಣವನ್ನು ನೀಡಿದ್ದಾನೆ. ಅಶೋಕನು ಈ ಬೌದ್ಧ ವಿಶ್ವವಿದ್ಯಾಲಯಕ್ಕೆ ರಕ್ಕಿತನೆಂಬ ಪ್ರತಿನಿಧಿಯನ್ನು ಕಳಿಸಿದ್ದುದರ ಬಗ್ಗೆ ಕೂಡ ಆತ ಬರೆದಿದ್ದಾನೆ. ಇಂದಿಗೂ ಆ ಪ್ರದೇಶದಲ್ಲಿ ಚೆಲ್ಲಾಡಿರುವ ಬೌದ್ಧ ಅವಶೇಷಗಳು, ತಾರಾಭಗವತಿ, ಅವಲೋಕಿತೇಶ್ವರ ಮುಂತಾದ ಶಿಲ್ಪಗಳು ಸಾಕ್ಷಿ ನುಡಿಯುತ್ತಿವೆ. ಬೌದ್ಧ ಪಠ್ಯಗಳೆಲ್ಲವನ್ನೂ ಚೀನೀಭಾಷೆಗೆ ಭಾಷಾಂತರಿಸಿದ ಕ್ರಿ.ಶ. ಆರನೆಯ ಶತಮಾನದ ಕುಮಾರಜೀವನಿಂದ ಇಂದಿನ ಎ. ಕೆ. ವಾರ್ಡರ್‌ರಂತಹ ಆಧುನಿಕ ಬೌದ್ಧ ವಿದ್ವಾಂಸರವರೆಗೆ ಸ್ಪಷ್ಟವಾಗಿ ಅಭಿಪ್ರಾಯಪಡುವಂತೆ ಬೌದ್ಧಮಹಾಯಾನ ಪಂಥವು ರೂಪುಪಡೆದದ್ದೇ ಕರ್ನಾಟಕದಲ್ಲಿ. ಬೌದ್ಧ ಮಹಾಯಾನ ಮತ್ತು ಮಾಧ್ಯಮಿಕ ತತ್ವದ ಪ್ರಧಾನ ಆಚಾರ್ಯ ನಾಗಾರ್ಜುನನಿಗೆ ಕರ್ನಾಟಕದ 'ಮಹಾನಾಗ'ನಿಂದ ದೊರಕಿದ ಪ್ರಜ್ಞಾಪಾರಮಿತ ಸೂತ್ರಗಳೇ ಅವನು ರೂಪಿಸಿಕೊಟ್ಟ ಮಹಾಯಾನ ತತ್ವದ ಮೂಲ ಆಕರಗಳೆಂದು ಅಭಿಪ್ರಾಯಪಡುತ್ತಾರೆ. ಹಾಗಾಗಿ ಬೌದ್ಧಮಹಾಯಾನದ ಅದರಲ್ಲೂ ವಜ್ರಯಾನ ಪಂಥದ ಪ್ರಧಾನ ಕೇಂದ್ರವಾಗಿದ್ದ ಬಳ್ಳಿಗಾವೆಯ ಕೋಡಿಮಠದಲ್ಲಿ ಅಲ್ಲಮ-ಪ್ರತಿಭೆ ರೂಪುಗೊಂಡದ್ದು ಎಂಬುದಂತೂ ನಿಶ್ಚಿತ.

**ಅಲ್ಲಮನನ್ನು ಕುರಿತ ಅಧ್ಯಯನಗಳು**

ಅಲ್ಲಮನನ್ನು ಕುರಿತಾದ ಅಧ್ಯಯನಗಳಲ್ಲಿ ನಿರ್ದಿಷ್ಟ ಪಾಂಥಿಕ ನಿಲುವಿನ ಅಧ್ಯಯನಗಳನ್ನು ಹೊರತು ಪಡಿಸಿದರೆ, ಅವನ ತಾತ್ವಿಕತೆಯ ಮೇಲಿನ ಔತ್ತರೇಯ ಅನುಭಾವಿ ಪರಂಪರೆಯ ಪ್ರಭಾವವನ್ನು ಶೋಧಿಸುವ ಪ್ರಯತ್ನಗಳು ಒಂದೆರಡು ಮಾತ್ರ. 'ಅಲ್ಲಮ' ಎಂಬ ಹೆಸರಿನ ಜಾಡನ್ನು ಹಿಡಿದು ಅವನ ತಾತ್ವಿಕತೆಯ ಮೇಲೆ ಸೂಫಿ ಪಂಥದ ಪ್ರಭಾವವನ್ನು ವಿಶ್ಲೇಷಿಸುವ ಪ್ರಯತ್ನ ಕೂಡ ಇದೆ. ಕೆಲವು ಸಾಂಪ್ರದಾಯಿಕ ಆಚರಣೆಗಳಲ್ಲಿ ಮಾತ್ರ ಇಂತಹ ಸೂಫಿ ಪ್ರಭಾವವನ್ನು ಗಮನಿಸಲು ಸಾಧ್ಯವಾಗಿದೆಯೇ ಹೊರತು, ಅಲ್ಲಮನ ವಚನಗಳಲ್ಲಿಯೇ ಸೂಫಿ ಪ್ರಭಾವವನ್ನು ಗುರುತಿಸುವುದು ಕಷ್ಟ. ಮೇಲಾಗಿ ಯಾವುದೇ ಅನ್ವಾರ್ಥಶಾಸ್ತ್ರಗಳ ಸಿಕ್ಕಿನಲ್ಲಿ ಅಲ್ಲಮ ಸಿಕ್ಕಿ ಹಾಕಿಕೊಳ್ಳುವುದಿಲ್ಲ. ಶ್ರಮಣ-ಪರಂಪರೆಗಳ ಎಲ್ಲ ಪ್ರಮುಖ ಆಶಯಗಳೂ ಅಲ್ಲಮನಲ್ಲಿ ಪುನರುಕ್ತವಾಗುತ್ತಲೇ

ಇರುತ್ತವೆ. ಅವನು ವೇದವಿರೋಧಿ, ಶಾಸ್ತ್ರವಿರೋಧಿ, ಪುರಾಣ ವಿರೋಧಿ, ತರ್ಕ ವಿರೋಧಿ ಮತ್ತು ಭಕ್ತಿವಿರೋಧಿ ಕೂಡ. ಅವನಿಗೆ ಗುರುಹಿರಿಯರ, ಮೂಲ ಮಾತೃಕೆಗಳ, ಭಾಷೆಯ, ಅನ್ಯಾರ್ಥಶಾಸ್ತ್ರಗಳ, ಚರಿತ್ರೆಯ ಹಂಗಿಲ್ಲ. ಆದರೆ ಅಲ್ಲಮ ತಾತ್ವಿಕ ಚರಿತ್ರೆಯ ನಟ್ಟನಡುವೆ ಇದ್ದಾನೆ. ಚರಿತ್ರೆಯ ಹಂಗು ಅವನಿಗಿಲ್ಲವೆಂದರೂ ಚರಿತ್ರೆ ಮಾತ್ರ ಸತ್ತ ಎಮ್ಮೆಕರುವಾಗಿ ಅವನ ಹೆಗಲೇರಿದೆ. ಆ ಹೆಣಭಾರವನ್ನು ಅವನೂ ಹೊತ್ತು ತಿರುಗುತ್ತಾನೆ; ಅಲ್ಲಲ್ಲೇ ಕೆಳಕ್ಕೆ ಇಳಿಸುತ್ತಾನೆ ಮತ್ತೆ ಹೊರುತ್ತಾನೆ, ಬೇರೆಯವರಿಗೂ ಹೊರಿಸುತ್ತಾನೆ! ಅಲ್ಲಮನಂತಹ ದೃಷ್ಟಿಯುಕ್ತ ಅನುಭಾವಿಯ ಮೂಲಮಾತೃಕೆಗಳೆಂದು ನಿರ್ದಿಷ್ಟ ತಾತ್ವಿಕತೆಯನ್ನು ಅಥವಾ ಚಿಂತನಾ ಪ್ರಸ್ಥಾನಗಳನ್ನು ಬೆರಳಿಟ್ಟು ತೋರುವುದು ಯುಕ್ತ ಪ್ರಯತ್ನವಲ್ಲ. ಸಾಮಾನ್ಯವಾಗಿ ಭಾರತೀಯ ತತ್ವ ಪರಂಪರೆಗಳನ್ನು ಅವಲೋಕಿಸುವಾಗ ಪರಂಪರೆಗಳ ನಡುವೆ ಎದ್ದುಕಾಣುವ ಕೆಲವು ಸಮಾನ ಅಂಶಗಳಿಂದಾಗಲೀ, ವಿರೋಧಿ ಅಂಶಗಳಿಂದಾಗಲೀ ಅಂತಹ ಪರಂಪರೆಗಳು ಸಮಾನವೆಂದೋ, ವಿರೋಧಿಗಳೆಂದೋ ತೀರ್ಮಾನಕ್ಕೆ ಬರಲಾಗದು. ಏಕೆಂದರೆ, ಭಾರತೀಯ ತತ್ವ ಪರಂಪರೆಯಲ್ಲಿ ನಡೆದಿರುವ ತಾತ್ವಿಕ ಸೆಣಸಾಟ ಹಾಗೆ ಮೇಲ್ಪದರದ್ದಲ್ಲ. ಹೀಗಿದ್ದೂ ಅಲ್ಲಮನ ತಾತ್ವಿಕತೆಗೆ ಚಾರಿತ್ರಿಕ ದೃಷ್ಟಿಯಿಂದ ಮೂಲ ಮಾತೃಕೆಗಳೆಂದು ಎರಡು ಚಿಂತನಾ ಪ್ರಸ್ಥಾನಗಳನ್ನು ಸೂಚಿಸಬಹುದು. (ಡಿ. ಆರ್. ನಾಗರಾಜ್ ಕೂಡ ಎರಡು ಪ್ರಸ್ಥಾನಗಳನ್ನು ಸೂಚಿಸಿ ಒಂದರ ಕಡೆಗೇ ಹೆಚ್ಚು ವಾಲುತ್ತಾರೆ.) ಅವುಗಳೆಂದರೆ ಒಂದು : ಶೈವಾಗಮಗಳ ಪ್ರಧಾನ ತಾತ್ವಿಕತೆಯಾದ ಕಾಶ್ಮೀರ ಶಿವಾದ್ವೈತ ಅಥವಾ ಕಾಶ್ಮೀರ ಪ್ರತ್ಯಭಿಜ್ಞೆ; ಇನ್ನೊಂದು ನಾಗಾರ್ಜುನನ ಮಾಧ್ಯಮಿಕ ತತ್ವ ಅಥವಾ ಶೂನ್ಯವಾದ ಅಥವಾ ಪ್ರತೀತ್ಯ-ಸಮುತ್ಪಾದ ತತ್ವ. ಡಿ. ಆರ್. ನಾಗರಾಜ್‌ರವರಿಗೆ ಒಲವಿದ್ದುದು ಪ್ರತ್ಯಭಿಜ್ಞೆಯ ಕಡೆಗೇ ಎಂಬುದು ಅವರ 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ'ಯಲ್ಲಿ ವ್ಯಕ್ತವಾಗಿದೆ. ಆದರೆ ಅಲ್ಲಮನ ಪ್ರಧಾನ ಭೂಮಿಕೆ ನಾಗಾರ್ಜುನನ ಮಾಧ್ಯಮಿಕ ಪಥವೇ ಎಂದು ಬೇರೊಂದೆಡೆ ಸೂಚನೆಯನ್ನಷ್ಟೇ ನೀಡಿದ್ದಾರೆ.



ಇಂದು ಕಾರಣ ಮೀಮಾಂಸೆ ಮತ್ತು ಪರಿಣಾಮ ಮೀಮಾಂಸೆಗಳು, ನಮ್ಮ ಲೋಕ ಗ್ರಹಿಕೆಯನ್ನು ನಿಯಂತ್ರಿಸುತ್ತಿವೆ; ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಗಳನ್ನೂ, ಬದುಕಿನ ಕ್ರಮವನ್ನೂ ನಿಯಂತ್ರಿಸುತ್ತಿವೆ. ಕಾರಣ-ಪರಿಣಾಮ ಮೀಮಾಂಸೆಗಳನ್ನಾಧರಿಸಿದ ಲೋಕ ಸಂಬಂಧದ ನಿರ್ವಚನವು ಉಂಟು ಮಾಡುವ ವಿಕಲ್ಪಗಳು ನಮ್ಮ ಬದುಕಿನ ಸಾಮರಸ್ಯವನ್ನು ಕದಡಿವೆ. ಜನಸಮೂಹಗಳು ಕಟ್ಟಿಕೊಳ್ಳುವ ಬದುಕಿನ ಕ್ರಮ, ಒಪ್ಪಿಕೊಳ್ಳುವ ಮೌಲ್ಯಗಳು ಇತ್ಯಾದಿಗಳನ್ನು ಇತ್ಯರ್ಥಗೊಳಿಸುವ ನಿರ್ಧಾರಕ ಶಕ್ತಿಗಳಾಗಿ ಈ ಮೀಮಾಂಸೆಗಳು ಕೆಲಸ ಮಾಡಿವೆ. ಹಾಗಾಗಿ ನಮ್ಮ ಲೋಕಸಂಬಂಧದ ನಿರ್ವಹಣೆಯಲ್ಲಿನ ತೊಡಕುಗಳೇನಿದ್ದರೂ, ಅವುಗಳಿಗೆ ಕಾರಣಗಳನ್ನು ಇಲ್ಲಿಯೇ ಹುಡುಕಬೇಕಾಗಿದೆ. ಕಾರಣ ಮೀಮಾಂಸೆ, ಪರಿಣಾಮ ಮೀಮಾಂಸೆ ಎಂದರೇನು ? ಈ 'ವಸ್ತುಪ್ರಪಂಚ'ದ ಸಮಸ್ತ ವಿದ್ಯಮಾನಗಳಿಗೆ ಶಾಶ್ವತ, ಸ್ವತಂತ್ರ 'ಆದಿಕಾರಣ'ವೊಂದುಂಟು. ಎಲ್ಲ ವಿದ್ಯಮಾನಗಳನ್ನೂ ಅದು ನಿಯಂತ್ರಿಸುತ್ತದೆ. ಅದು ಎಲ್ಲದರೊಳಗಿರುವ 'ಒಂದು'; ಅದು ಮಾತ್ರ ಶಾಶ್ವತವಾದುದು. ಉಳಿದುದೆಲ್ಲ ಅದರ ಲೀಲೆ (ಆಟ) ಇತ್ಯಾದಿ. ಲೋಕದ ಸಮಸ್ತ ಚಟುವಟಿಕೆಗಳೂ ಇದರಿಂದ ಉಂಟಾಗಿ ಇದರಲ್ಲಿಯೇ ಅಡಗುತ್ತವೆ. ಎಲ್ಲ ಚಟುವಟಿಕೆಗಳೂ 'ಇದರ' ನಿರ್ಧಾರದಂತೆಯೇ ಜರುಗುತ್ತವೆ. ಈಗಾಗಲೇ ನಿರ್ಧರಿತವಾದದ್ದಾಗಲೀ, ನಿರ್ಧರಿತವಾಗಿಲ್ಲದಿದ್ದಾಗಲೀ ಯಾವುದು ಜರುಗಿದರೂ ಅದರ ನಿರ್ಧಾರಕ ಶಕ್ತಿ ಇದೇ ಆಗಿದೆ. ಆತ್ಮ, ಪರವಸ್ತು, ಪರಬ್ರಹ್ಮ, ಅನುತ್ತರಾ, ಪರಾವಾಕ್ ಇತ್ಯಾದಿ ಹೆಸರುಗಳಿಂದ ಸೂಚಿಸುವ 'ಅದು' ಲೋಕ ಸಮಸ್ತದಲ್ಲಿಯೂ ಇದೆ. ಎಲ್ಲವೂ ಅದರಿಂದಲೇ ಉಂಟಾಗುತ್ತದೆ. ಇದು ಆತ್ಮವಾದೀ ನಿಲುವು. ಕಾರಣ ಮೀಮಾಂಸೆಯಲ್ಲಿ ಇದು ಸ್ವತೋತ್ಪತ್ತಿಯನ್ನು ಮುಂದಿಡುತ್ತದೆ. ಕಾರಣ ಮೀಮಾಂಸೆಯ ಇನ್ನೊಂದು ನಿಲುವೆಂದರೆ ಪರತೋತ್ಪತ್ತಿ. ಅಂದರೆ ಉಂಟಾಗಿರುವ ಮತ್ತು ಉಂಟಾಗುವ ಎಲ್ಲಕ್ಕೂ ಮತ್ತೊಂದು ಕಾರಣವಾಗಿದೆ. ಉದಾಹರಣೆಗೆ, ದೈವ, ವಿಧಿ, ಅದೃಷ್ಟ ಇತ್ಯಾದಿ. ಸಂಭವಿಸುವ ಎಲ್ಲ ಬದಲಾವಣೆಗಳಿಗೂ ಆ 'ಮತ್ತೊಂದು' ಕಾರಣ ಎಂಬುದು ಇಲ್ಲಿಯ ನಿಲುವು.

ಸ್ವತೋತ್ಪತ್ತಿಯ ನಿಲುವಿನ ತೊಡಕೆಂದರೆ 'ವಸ್ತು' ಅಸ್ತಿತ್ವಕ್ಕೆ ಬರಲು ತಾನೇ ಕಾರಣವಾಗುವುದಾದರೆ ಹೊಸದೊಂದು ಅಸ್ತಿತ್ವಕ್ಕೆ ಬರಲು ಸಾಧ್ಯವೇ ಆಗದು. ಹಾಗೆಯೇ ಎರಡನೆಯದಾದ ಪರಕಾರಣವೆನ್ನುವಲ್ಲಿ ಕಾರಣ ಮತ್ತು ಪರಿಣಾಮದ ನಡುವೆ ಅಂತಸ್ಸಂಬಂಧ ಇರುವುದಿಲ್ಲ. ಆದುದರಿಂದ ಯಾವುದು ಯಾವುದರಿಂದಲಾದರೂ ಸಂಭವಿಸಬಹುದು. ಇನ್ನು ಪದಾರ್ಥಗಳು ಉಂಟಾಗಲು ಕಾರಣವೇ ಬೇಕಿಲ್ಲ ಎನ್ನುವ ನಿಲುವು ಅನಿರ್ದಿಷ್ಟವಾದದೆಡೆಗೆ ಕೈ ತೋರುತ್ತದೆ. ಹಾಗಾಗಿ ಯಾವುದಾದರೂ ಎಲ್ಲಿಯಾದರೂ, ಯಾವಾಗಲಾದರೂ ಸಂಭವಿಸಲು ಸಾಧ್ಯ ಎನ್ನುವುದಾದರೆ, ಎಲ್ಲವೂ, ಎಲ್ಲಿಯೂ ಯಾವಾಗಲೂ ಸಂಭವಿಸಲು ಸಾಧ್ಯ ಎನ್ನುವ ನಿಲುವಿಗೆ ಬರಬೇಕಾಗುತ್ತದೆ.

ಯಾವ ಪಂಥದ ಲೋಕ ವಿವರಣೆಯೂ ವಸ್ತು ಪ್ರಪಂಚದ ನಿರ್ಲಿಪ್ತ ವಿವರಣೆಯಲ್ಲ. ಅಂತಹ ವಿವರಣೆಯ ಹಿಂದೆ ನಿರ್ದಿಷ್ಟ ಜನಸಮೂಹಕ್ಕೆ ಅಧಿಕಾರವನ್ನು ದೊರಕಿಸಿಕೊಡುವ ಹಂಬಲವಿರುತ್ತದೆ. ಉದಾಹರಣೆಗೆ, ವಿಜ್ಞಾನವು ಮನುಷ್ಯನನ್ನು ನಿಸರ್ಗದ ಕೇಂದ್ರದಲ್ಲಿಟ್ಟು ಅವನಿಗೆ ಯಜಮಾನಿಕೆಯನ್ನು ನೀಡಲೋಸುಗ ತನ್ನ ವಿವರಣೆಯ ಉದ್ಯೋಗವನ್ನು ಮಾಡುತ್ತದೆ. ಕೆಲವು ಪಾರಂಪರಿಕ ಚಿಂತನಾ ಪ್ರಸ್ಥಾನಗಳು ಬಹುಜನ ಸಮುದಾಯಗಳನ್ನು ತೊತ್ತುಗಳನ್ನಾಗಿಸಿ ಕೆಲವರ ಗುಂಪಿಗೆ ಯಜಮಾನಿಕೆಯನ್ನು ದೊರಕಿಸಿಕೊಡುವ ಉದ್ಯೋಗದಲ್ಲಿ ತೊಡಗಿವೆ. ಅನೇಕ ಪಾರಂಪರಿಕ ಚಿಂತನಾ ಪ್ರಸ್ಥಾನಗಳು ಮುಂದಿಟ್ಟ ಲೋಕವಿವರಣೆಯ ಪ್ರಾಗ್ರೂಪೀ ಮಾದರಿಗಳು ಮತ್ತು ವಿಜ್ಞಾನವನ್ನಾಧರಿಸಿದ ಲೋಕ ವಿವರಣೆಯ ಮಾದರಿಗಳು ನಮ್ಮೆದುರಿಗೆ ಇವೆ. ಈ ಎರಡೂ ಮಾದರಿಗಳಲ್ಲಿ ಕೆಲವು ಸಾಮ್ಯಗಳಿವೆ. ವಿಜ್ಞಾನ ತನ್ನ ವಿವರಣೆಯ ಕ್ರಮವನ್ನು ವಿಜ್ಞಾನದ ಹೊರತು ಇತರ ಚಿಂತನಾ ಪ್ರಸ್ಥಾನಗಳು ಪ್ರಶ್ನಿಸಿದರೆ ಉತ್ತರಿಸುವ ಗೋಜಿಗೇ ಹೋಗುವುದಿಲ್ಲ. ತನ್ನ ವಿವರಣೆಯಲ್ಲಿ ಆಗಬೇಕಾದ ಮಾರ್ಪಾಟು ತನಗೇ ಗೋಚರಿಸಿದಾಗ ಮಾತ್ರ ಆಗಲು ಒಪ್ಪುತ್ತದೆ. ಈ ಪ್ರಶ್ನಾತೀತ ನೆಲೆಯನ್ನು ಅಧಿಕಾರಗಳ ಕೇಂದ್ರಗಳ ನೆರವಿನಿಂದ ಮತ್ತು ನಿರ್ದಿಷ್ಟ ಸಮೂಹದಿಂದ ಪಡೆದುಕೊಂಡಿದೆ. ಇಂತಹದೇ ಪ್ರಶ್ನಾತೀತ ನೆಲೆಯನ್ನು ಕೆಲವು ಪಾರಂಪರಿಕ ಚಿಂತನಾ ಪ್ರಸ್ಥಾನಗಳೂ ರೂಢಿಸಿಕೊಂಡಿವೆ. ಕೆಲವು ಪ್ರಾಚೀನ ದಾಖಲೆಗಳನ್ನು ಮೊದಲು ಪ್ರಶ್ನಾತೀತ ನೆಲೆಯಲ್ಲಿ ಪ್ರತಿಷ್ಠಾಪಿಸಿ, ತನ್ನ ವಿವರಣೆಯು ಅಂತಹ ಪ್ರಶ್ನಾತೀತ ಮೂಲರೂಪವನ್ನಾಧರಿಸಿದ್ದು ಎಂಬ ಅತಾರ್ಕಿಕ ನಿಲುವಿನ ಮೂಲಕ ಸಾಧಿಸಿಕೊಂಡಿವೆ. ಅಲ್ಲಮ ಪ್ರಶ್ನಾತೀತ ಮೂಲವೆಂಬ ಯಾವುದನ್ನೂ ಹಾಗೆಂದು ಮಾನ್ಯ ಮಾಡುವುದಿಲ್ಲ ಎಂಬುದು ಅವನ ವಚನಗಳಲ್ಲಿ ಅತ್ಯಂತ ಪ್ರಮುಖವಾಗಿ ಗೋಚರಿಸುವ ಸಂಗತಿಯಾಗಿದೆ.

ಸ್ವತೋತ್ಪತ್ತಿಯು ಕಾಶ್ಮೀರ ಶಿವಾದ್ವೈತದ ನಿಲುವೆಂಬುದು ನಿಶ್ಚಿತ. ನ್ಯಾಯದರ್ಶನಕ್ಕೆ,

ಅನುಭವಸಿದ್ಧವಾದ ಪ್ರಪಂಚವು ದೇವರ ಒಂದು ಸೃಷ್ಟಿ (ಪರತೋತ್ಪತ್ತಿ). ಸಾಂಖ್ಯರು ಅದು ಪ್ರಕೃತಿಯ ಸ್ವಭಾವದಿಂದಾದ ಪರಿಣಾಮ ಎನ್ನುತ್ತಾರೆ. ಕೇವಲ ವೈಯಕ್ತಿಕ ಅನುಭವವೇ ಅದರ ಸ್ವರೂಪ ಎಂದು ವಿಜ್ಞಾನವಾದಿಗಳು ಹೇಳುತ್ತಾರೆ. ಇವುಗಳಲ್ಲಿ ಯಾವುದನ್ನೂ ಅಭಿನವಗುಪ್ತ ಒಪ್ಪುವುದಿಲ್ಲ. ಪ್ರಪಂಚವು ಸರ್ವಾತ್ಮಕವಾದ ವಿಶ್ವಚೈತನ್ಯದ ಅಥವಾ ಆತ್ಮದ ಅಭಿವ್ಯಕ್ತಿಯಾಗಿರುವುದರಿಂದ ಅನುಭವಸಿದ್ಧವಾದ ಅದು ಸತ್ಯ ಎಂದು ಅವನು ಅಭಿಪ್ರಾಯ ಪಡುತ್ತಾನೆ. ಅದನ್ನೂ ಪರತತ್ತ್ವ ಅಥವಾ ಪರಾಸಂವಿತ್ ಎನ್ನುತ್ತಾನೆ. ಈ ಪರತತ್ತ್ವದಲ್ಲಿ ಉಂಟಾಗುವ ಬದಲಾವಣೆ ಕೂಡ ಪರತತ್ತ್ವದ ತೋರಿಕೆಯಲ್ಲಿ ಮಾತ್ರ ಉಂಟಾಗುತ್ತದೆಯೇ ಹೊರತು ಅದರ ಮೂಲ ವಸ್ತುವಿನಲ್ಲಲ್ಲ. ಲೋಕಸಂಗತಿಗಳನ್ನು 'ನಮ್ಮ ಅನುಭವ' ವಾಗಿಸುವ ಸಂಗತಿಗಳು ನಾಲ್ಕು: (೧) ವಸ್ತುರೂಪ (೨) ಸ್ಪರ್ಶ (೩) ಸಂವೇದನೆ (೪) ಬೋಧೆ. ಇವುಗಳ ಸಂಘಾತದಿಂದಾದ ಸಂಯೋಜನೆಗಳನ್ನು ನಾವು ಸಾಮಾನ್ಯವಾಗಿ 'ವಸ್ತು'ಗಳೆಂದು ಭಾವಿಸುತ್ತೇವೆ. ಮಾನವಮತಿ ವಸ್ತುಗಳಲ್ಲಿ ಶಾಶ್ವತವಾದ ಅಂತಸ್ಸತ್ವ ವೊಂದನ್ನು ಹುಡುಕುತ್ತಿರುತ್ತದೆ. ಕಾಶ್ಮೀರ ಶಿವಾದ್ವೈತವು ಅದನ್ನು ಹೀಗೆ ವಿವರಿಸುತ್ತದೆ: "ಅಭಿವ್ಯಕ್ತಗೊಂಡಿರುವ ಮತ್ತು ಅಭಿವ್ಯಕ್ತಗೊಳ್ಳಬೇಕಾಗಿರುವ ಎಲ್ಲದರಲ್ಲೂ ಸ್ವತಂತ್ರ ಆತ್ಮ ತತ್ತ್ವವೊಂದಿದ್ದು ಅದು ಸ್ವತಂತ್ರವಾದದ್ದು ಮತ್ತು ಎಲ್ಲವನ್ನೂ ನಿಯಂತ್ರಿಸಬಲ್ಲುದಾಗಿದೆ. ಗೋಚರವಾಗುವ ಬದಲಾವಣೆ ಏನಿದ್ದರೂ ಹೊರಗಿನ ತೋರಿಕೆಯದ್ದೇ ಹೊರತು ಅಂತಸ್ಸತ್ವರೂಪದ ಆತ್ಮದ್ದಲ್ಲ. ಆತ್ಮದ ಪ್ರಕಾಶರೂಪವೇ ಲೋಕಚಟುವಟಿಕೆ."

**ಬೌದ್ಧಮಾಧ್ಯಮಿಕರ ಲೋಕವಿವರಣೆ – ಪ್ರಕ್ರಿಯಾಮೀಮಾಂಸೆ**

ಬುದ್ಧ ನೀಡಿದ ಲೋಕವಿವರಣೆಯ ತರ್ಕಪ್ರತಿಷ್ಠಿತ ರೂಪವೇ ನಾಗಾರ್ಜುನನ ಶೂನ್ಯತಾವಾದ ಅಥವಾ ಮಧ್ಯಮಮಾರ್ಗ. ನಿಃಸ್ವಭಾವವಾದ ಎಂದು ಕೂಡ ಸೂಚಿಸ ಲ್ಪಡುವ ಈ ವಿವರಣೆಯ ಕ್ರಮವನ್ನು 'ಪ್ರಕ್ರಿಯಾಮೀಮಾಂಸೆ' ಎಂದು ಕರೆಯಬಹುದಾದ ವಿಶಿಷ್ಟವಾದ ವಿನ್ಯಾಸದಲ್ಲಿ ನಾಗಾರ್ಜುನ ವಿವರಿಸುತ್ತಾನೆ. ಈ ಬಗ್ಗೆ ಕೆಲವು ವಿವರಣೆಗಳ ಅಗತ್ಯವಿದೆ. ಪದಾರ್ಥ ಪ್ರಪಂಚಕ್ಕೆ ಶಾಶ್ವತ, ಸ್ವತಂತ್ರ, ಆದಿಕಾರಣದ ಶೋಧನೆಗೆ ಸಂಬಂಧಿಸಿದುದು ಕಾರಣಮೀಮಾಂಸೆ. ಹಾಗೆಯೇ ಶಾಶ್ವತ ಅಂತ್ಯ, ಫಲ, ಪರಿಣಾಮಗಳನ್ನು ಶೋಧಿಸುವುದು ಪರಿಣಾಮಮೀಮಾಂಸೆ. ಪ್ರಕ್ರಿಯೆಯನ್ನು ಅಂದರೆ 'ಅವಸ್ಥೆಯನ್ನು' ವಿವರಿಸುವುದು ಪ್ರಕ್ರಿಯಾಮೀಮಾಂಸೆ. ಆದಿಕಾರಣವೆಂಬುದು ಅಗ್ರಾಹ್ಯವೆಂಬ ಕಾರಣಕ್ಕೆ ಆ ಸಂಬಂಧದ ಪ್ರಶ್ನೆಗಳಿಗೆ ಬುದ್ಧ ಮೌನತಾಳಿದ. ಪ್ರಪಂಚದ ಆದಿಕಾರಣದ ಬಗೆಗಿನ ಊಹೆ ಎಂದೂ ಮುಗಿಯದ ಹಿಮ್ಮುಖ ಪ್ರಯಾಣ. ಹಾಗೆಯೇ ಶಾಶ್ವತ ಪರಿಣಾಮ ವೆಂಬುದು ಸಹ. ಆದಿಕಾರಣ ಮತ್ತು ಶಾಶ್ವತ ಪರಿಣಾಮಗಳು ಅಂತಿಮವಾಗಿ ಅಸ್ತಿತ್ವವಾದ ದಲ್ಲಿಯೋ ನಾಸ್ತಿತ್ವವಾದದಲ್ಲಿಯೋ ವಿರಮಿಸುತ್ತವೆ. ಬುದ್ಧನು ಅಸ್ತಿತ್ವವಾದ ಮತ್ತು ನಾಸ್ತಿತ್ವವಾದ ಗಳೆಂಬ ಈ ಎರಡೂ ತುದಿಗಳನ್ನು ನಿರಾಕರಿಸಿ, ಕಣ್ಣೆದುರಿಗಿನ ಈ ವಸ್ತುಪ್ರಪಂಚವನ್ನು 'ಸ್ವೀಕರಿಸಿ', ಅದನ್ನು ನಿರಂತರ ಚಲನೆಯಲ್ಲಿರುವ ಶಾಶ್ವತವಲ್ಲದ, ಸ್ವಭಾವವಿಲ್ಲದ ಕ್ರಿಯಾ ಸಾಮರ್ಥ್ಯವನ್ನಾಗಿ ವಿವರಿಸಿದನು. ಈ ಕ್ರಿಯಾಸಾಮರ್ಥ್ಯವನ್ನು ಚಲನೆಯಲ್ಲಿಯೇ ಇರುವ ಸಾಪೇಕ್ಷ ಕಾರಣ, ಸಾಪೇಕ್ಷ ಪ್ರತ್ಯಯ (ಪರಿಸ್ಥಿತಿ) ಮತ್ತು ಸಾಪೇಕ್ಷ ಫಲಗಳ ನೆರವಿನಿಂದ ವಿವರಿಸಿದನು. ಬೀಜ-ಮೊಳಕೆ-ಸಸಿ-ವೃಕ್ಷ-ಹೂವು-ಫಲ-ಬೀಜ-ಮೊಳಕೆ-ಸಸಿ... ಈ ಸರಣಿಯಲ್ಲಿ ಆದಿ-ಅಂತ್ಯಗಳೆಂಬ ತುದಿಗಳು ನಿರಾಕರಣೆಗೊಂಡು ಪ್ರತಿಯೊಂದೂ ಮತ್ತೊಂದಕ್ಕೆ ಕಾರಣವಾಗುತ್ತಾ, ಹಿಂದಿನ ಕಾರಣಕ್ಕೆ ಪರಿಣಾಮವಾಗುತ್ತಾ ಚಲನೆಯಲ್ಲಿವೆ. ಹೀಗೆ ತುದಿಗಳನ್ನು ವರ್ಜಿಸಿದ (ಕಾರಣ ಮತ್ತು ಪರಿಣಾಮ ಮೀಮಾಂಸೆಗಳನ್ನು ನಿರಾಕರಿಸಿದ) ಮಧ್ಯಮ ಪ್ರತಿಪದವು ಬುದ್ಧನಿಂದ ಪ್ರತಿಪಾದಿಸಲ್ಪಟ್ಟಿತು. ಇದನ್ನೇ ಪ್ರಕ್ರಿಯಾ ಮೀಮಾಂಸೆ ಎಂದು ಇಲ್ಲಿ ಸೂಚಿಸಲಾಗಿದೆ. ಈ ತಾತ್ವಿಕತೆಯನ್ನು ನಾಗಾರ್ಜುನ ತನ್ನ ಮೂಲ ಮಾಧ್ಯಮಿಕ ಕಾರಿಕಾದಲ್ಲಿ ವಿವರಿಸುತ್ತಾನೆ. ವಿಶ್ವದ ಅತ್ಯಂತ ಕಠಿಣ ಪಠ್ಯಗಳಲ್ಲಿ ಇದೂ

## ಹದಿನಾರು ಸಾವಿರದವರ ನಾಡಿನಲ್ಲಿ



ಹಲುಬುವೆ ಏಕೆ ದ್ರೌಪದಿ
ನಿನ್ನ ಬಾಳು ಬರಿದೆ ಸೋಲೆಂದು
ಬದುಕೆಲ್ಲ ಬರಿಯ ಕಣ್ಣೀರೆಂದು

ಜನರಂದರೇನು ಹಾಗೆ?
ಹೇಳಿದರಾರು ನೀನು ಅದನೇ
ನಂಬಬೇಕೆಂದು...

ಅಳಿಸಿ ಹೋದವೇ ಗೆಲುವಿನ
ಹೆಗ್ಗುರುತುಗಳು
ಕನಿಕರ ಸಾಂತ್ವನಗಳ ಮಹಾಪೂರದಲ್ಲಿ!

ಎಲ್ಲಿ, ಒಮ್ಮೆ ಕೊಡವಿಕೋ ನಿನ್ನ
ನೆನಪುಗಳನ್ನು...

ಅಂಜಿತಲ್ಲವೇ ನಿನ್ನದೇ ಆಯ್ಕೆಗೆ
ಆರ್ಯಾವರ್ತ
ಥಟ್ಟನೆದ್ದಿತು ಆ ಜನ್ಮ ಈ ಜನ್ಮಗಳ
ವರ ಶಾಪಗಳ, ಅಂತೆ ಕಂತೆಗಳ
ಸುಳಿಸಾವರ್ತ

ಎಷ್ಟು ಬೇಗ ಮರೆತೆಯಲ್ಲ!
ಹದಿನಾರುಸಾವಿರದವರ ನಾಡಿನಲ್ಲಿ
ನೀನೇ ನೀನಾಗಿ ಮೆರೆದೆಯಲ್ಲ!

ನಿನಗಿತ್ತು ಸರಳ ಸತ್ಯದ ಅರಿವು
ಒಂದೇ ಮನದ ಹತ್ತು ಮುಖಗಳ
ಹರವು;
ಧರ್ಮ ಜಿಜ್ಞಾಸೆಗೆ, ಬಿಲ್ಗಾರ ಸೊಗಸಿಗೆ
ಪಾರುಮಾಡಲು ತಹತಹಿಸುವ ಕಂಬದ
ಬಾಹುಗಳ ಹುಂಬ
ಮತ್ತಿನ್ನು,
ನಲ್ವಗೆ-ನಲ್ವರಕೆಯ ಜೋಡಿ ಬಿಂಬ

ನಮ್ಮ ನೋಡು,
ಮರುಳರಲ್ಲವೆ ನಾವು...
ಬಾಳಜೊತೆಗಾರರಲ್ಲಿ
ಅತಿಮಾನುಷವ ಆವಾಹಿಸುವ
ಹುಚ್ಚಿನವರು

ಇನ್ನಾದರೂ ದ್ರೌಪದಿ
ಮಂದ್ರವಾಗಲಿ ಕಿಚ್ಚು
ಮತ್ತೆ ಹೊಮ್ಮಲಿ
ಹದಿನಾರುಸಾವಿರದವರ ಮಧ್ಯೆ
ಒಬ್ಬಳೇ ಮೆರೆದ ಕೆಚ್ಚು

ಮಾನಸ ವೆಂಕಟಸುಬ್ಬಯ್ಯ
ಕೇರಾಫ್ ಎಚ್. ವಿ. ವೆಂಕಟಸುಬ್ಬಯ್ಯ, ೬೭, 'ಸ್ವಯಂಪ್ರಭಾ'
ಈಸ್ಟ್ ಪಾರ್ಕ್ ರಸ್ತೆ, ೧೪ನೇ ಕ್ರಾಸ್, ಮಲ್ಲೇಶ್ವರ
ಬೆಂಗಳೂರು - ೫೬೦ ೦೦೩

ಒಂದೆಂಬ ಖ್ಯಾತಿ ಈ ಕೃತಿಗೆ ಇದೆ! ವಸ್ತುರೂಪ, ಸ್ಪರ್ಶ, ಸಂವೇದನೆ ಮತ್ತು ಬೋಧೆ ಇವುಗಳ ಸಂಘಾತದಿಂದ ಉಂಟಾಗುವ ಸಂಯೋಜನೆಗಳನ್ನು ಮಾಧ್ಯಮಿಕ ತತ್ವವು ವಸ್ತುಗಳೆಂದು ಭಾವಿಸದೆ ಪ್ರಕ್ರಿಯೆ ಎಂದು ವಿವರಿಸುತ್ತದೆ. ಪ್ರತಿಯೊಂದೂ ಕಾರಣ ಮತ್ತು ಪ್ರತ್ಯಯಗಳಿಂದಾದ (ಪರಿಸ್ಥಿತಿ) ಪರಿಣಾಮ. ಇದನ್ನೇ ಪ್ರತೀತ್ಯ ಸಮುತ್ಪಾದ ಎನ್ನುತ್ತಾರೆ. ಪ್ರತಿಯೊಂದು ವಸ್ತುವಿನ ಸಂಯೋಜನಾ ಘಟಕಗಳಾದ ಕಾರಣದಲ್ಲಾಗಲೀ, ಪರಿಸ್ಥಿತಿಯಲ್ಲಾಗಲೀ, ಪರಿಣಾಮದಲ್ಲಾಗಲೀ ಸ್ವತಂತ್ರ ಶಾಶ್ವತ ವಸ್ತುವೆಂಬು ದಾಗಲೀ, ಅಂತಸ್ಸತ್ವವೆಂಬುದಾಗಲೀ, ಆತ್ಮವೆಂಬುದಾಗಲೀ ಇಲ್ಲ. ಬದಲಾಗದ ಅಂತಸ್ಸತ್ವವೆಂಬುದಿಲ್ಲ. ಚಲನೆ ಮತ್ತು ಬದಲಾವಣೆ ಇದೇ ವಿಶ್ವದ ಧರ್ಮ. ಸರ್ವವೂ 'ಆಗುವಿಕೆ'ಯಲ್ಲಿಯೇ ಇರುತ್ತದೆ. 'ಆಗಿ ಇರುವುದು' ಯಾವುದೂ ಇಲ್ಲ, ಎಲ್ಲವೂ ನಿರಂತರ ಪ್ರವಾಹ ಮಾತ್ರ. ಇದನ್ನು ಒಂದು ಉದಾಹರಣೆಯ ಮೂಲಕ ಸೂಚಿಸುವು ದಾದರೆ: ''ಒಂದು ನದಿಗೆ ಎರಡು ಸಾರಿ ಕಾಲಿಡಲು ಸಾಧ್ಯವಿಲ್ಲ'' ಇದು ಬುದ್ಧನ ಪರಿನಿರ್ವಾಣದ ಸುಮಾರು ಇನ್ನೂರು ವರ್ಷಗಳ ನಂತರ ಬಂದ ಅಥೆನ್ಸ್‌ನ ಹೆರಾಕ್ಲಿಟಸ್ ಎಂಬುವನ ಮಾತು. ನಾಗಾರ್ಜುನನ ಮೂಲ ಮಾಧ್ಯಮಿಕ ಕಾರಿಕಾವು ಇದರ ವಿವರಣೆಯನ್ನು ಪೂರ್ಣರೂಪದಲ್ಲಿ ಹೀಗೆ ಪ್ರಕಟಿಸುತ್ತದೆ: ''ಒಂದು ನದಿಗೆ ಎರಡು ಸಾರಿ ಕಾಲಿಡಲು ಸಾಧ್ಯವಿಲ್ಲ; ಎರಡು ಸಾರಿ ಕಾಲಿಟ್ಟ ಮನುಷ್ಯ ಒಬ್ಬನೇ ಅಲ್ಲ; ಎರಡು ಸಾರಿ ಕಾಲಿಟ್ಟಾಗಿನ ಪರಿಸ್ಥಿತಿ ಒಂದೇ ಅಲ್ಲ; ಎರಡು ಸಾರಿ ಕಾಲಿಟ್ಟಾಗಿನ ಪರಿಣಾಮಗಳೂ ಒಂದೇ ಅಲ್ಲ''

**ಅಲ್ಲಮ-ನಾಗಾರ್ಜುನರ ಸಾಮರಸ್ಯ**

ಅಲ್ಲಮ ಮತ್ತು ಬೌದ್ಧ ಮಾಧ್ಯಮಿಕ ತತ್ವದ ಸಾಹಚರ್ಯ ಶುರುವಾಗುವುದು, ಎಲ್ಲ ಪ್ರಕ್ರಿಯಾ ಮೀಮಾಂಸಕರ ರೀತಿ, ಆದಿಕಾರಣವನ್ನು ನಿರಾಕರಿಸುವು ದರಿಂದ. ನಾಗಾರ್ಜುನ ತನ್ನ ಮೂಲ ಮಾಧ್ಯಮಿಕ ಕಾರಿಕಾದ ಮೊದಲ ಕಾರಿಕೆಯಲ್ಲಿಯೇ ಶಾಶ್ವತ ಆದಿಕಾರಣ ವನ್ನು ನಿರಾಕರಿಸಿ ತನ್ನ ಯಾನಕ್ಕೆ ಚಾಲನೆ ಕೊಡುತ್ತಾನೆ:

ತನ್ನಿಂದ, ಪರದಿಂದ, ಅವೆರಡರಿಂದ
ಮತ್ತು ಕಾರಣರಹಿತವಾಗಿ
ಯಾವುದೂ ಎಲ್ಲಿಯೂ ಎಂದೂ ಉಂಟಾಗುವುದಿಲ್ಲ.
ಅಂದರೆ

(ಅ) ಪದಾರ್ಥವು ತನ್ನ ಕಾರಣದಿಂದ ಉಂಟಾಗುವುದಿಲ್ಲ.
(ಆ) ಪದಾರ್ಥವು ಅನ್ಯ ಕಾರಣದಿಂದ ಉಂಟಾಗುವುದಿಲ್ಲ.
(ಇ) ಪದಾರ್ಥವು ತಾನು ಮತ್ತು ಅನ್ಯ ಇವೆರಡರ ಕಾರಣದಿಂದ ಉಂಟಾಗುವುದಿಲ್ಲ.
(ಈ) ಪದಾರ್ಥವು ಕಾರಣರಹಿತವಾಗಿ ಉಂಟಾಗುವುದಿಲ್ಲ.

ಇಲ್ಲಿ ಸ್ಪಷ್ಟವಾಗಿ ನಿರಾಕರಣೆಗೊಂಡಿರುವುದು ಶಾಶ್ವತ ಆದಿಕಾರಣ. ಅಲ್ಲಮನ ವಚನ ಸಂಕಲನಗಳೂ ಸಾಮಾನ್ಯವಾಗಿ ಪಿಂಡಸ್ಥಲದ ಮತ್ತು ಪಿಂಡಜ್ಞಾನ ಸ್ಥಲದ ವಚನಗಳಿಂದಲೇ ಪ್ರಾರಂಭಗೊಳ್ಳುತ್ತವೆ. ಈ ವಚನಗಳಲ್ಲಿ ನಡೆಯುವುದೂ ಆದಿಕಾರಣದ ನಿರಾಕರಣೆಯೇ.

*ಆದಿಯಾಧಾರವಿಲ್ಲದಂದು*
*ಹಮ್ಮುಬಿಮ್ಮುಗಳಿಲ್ಲದಂದು*
*ಸುರಾಳ ನಿರಾಳವಿಲ್ಲದಂದು*
*ಸಚರಾಚರವೆಲ್ಲ ರಚನೆಗೆ ಬಾರದಂದು*
*ಗುಹೇಶ್ವರ ನಿಮ್ಮ ಶರಣನುದಯಿಸಿದನಂದು.*

ಶರಣನೆಂಬ ಪ್ರಕ್ರಿಯೆಗೆ ಯಾವ ಆದಿಕಾರಣವೂ ಇಲ್ಲ. ಯಾರೂ ಯಾರೂ ಇಲ್ಲದಂದು... ಎಂದು ತಿರುತಿರುಗಿ ಅಲ್ಲಮ ಕೂಗುತ್ತಾನೆ. ಈ ವಚನದಲ್ಲಿನ 'ಅಂದು ಅಂದು' ಎಂಬ ಮಾತು ಕಾಲಸೂಚಿಯಲ್ಲ; ಅದು ನಿಶ್ಚಯವಾಗಿ ಅವಸ್ಥಾಸೂಚಿ. ಏಕೆಂದರೆ, ಬೌದ್ಧ ಮಾಧ್ಯಮಿಕರು ಮತ್ತು ಅಲ್ಲಮ ಸ್ವತಂತ್ರ ಕಾಲದ ಕಲ್ಪನೆಯನ್ನು ಮಾನ್ಯ ಮಾಡುವುದಿಲ್ಲ. ಆದಿಕಾರಣ ನಿರಾಕರಣೆಯ ಇನ್ನೊಂದೆರಡು ವಚನಗಳನ್ನೂ ಗಮನಿಸುವುದಾದರೆ,

*ಆದಿಯ ಸಂಗದಿಂದಾದವನಲ್ಲ*
*ಸಂಗ ಸುಖದೊಳಗಿದ್ದವನಲ್ಲ*
*ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ*
*ನಾದ ಬಿಂದು ಕಳೆ ಹುಟ್ಟದ ಮುನ್ನ*
*ಅಲ್ಲಿಂದತ್ತತ್ತ ಗುಹೇಶ್ವರ.*

ಗುಹೇಶ್ವರನೆಂಬ 'ಪ್ರಕ್ರಿಯೆ' ತನ್ನಿಂತಾನೇ ಆದದ್ದಲ್ಲ; ಪರದಿಂದಲೂ ಆದದ್ದಲ್ಲ; ರವಿಶಶಿಯೆಂಬ 'ಪ್ರತ್ಯಯ' ಮಾತ್ರದಿಂದಲೂ ಬಂದವನಲ್ಲ; ಹಾಗೆಯೇ ಈಗಾಗಲೇ ಇದ್ದು ಸಂಗದಿಂದುಂಟಾದವನೂ ಅಲ್ಲ. ಒಂದು ನಿಶ್ಚಿತ ಪ್ರಥಮ ಕಾರಣವನ್ನು ಅಲ್ಲಮ ನಿರಾಕರಿಸುತ್ತಾನೆ.

*ತಾಯಿ ಬಂಜೆಯಾದಲ್ಲದೆ ಶಿಶು ಗತವಾಗದು*
*ಬೀಜ ನಷ್ಟವಾದಲ್ಲದೆ ಸಸಿ ಗತವಾಗದು*
*ನಾಮ ನಷ್ಟವಾದಲ್ಲದೆ ನೇಮ ನಷ್ಟವಾಗದು*
*ಮೊದಲು ಕೆಟ್ಟಲ್ಲದೆ ಲಾಭದಾಸೆ ಬಿಡದು*
*ಗೂಹೇಶ್ವರ ಲಿಂಗದ ನಿಜವನ್ನೈದುವಡೆ*
*ಪೂಜೆಯ ಫಲ ಮಾದಲ್ಲದೆ ಭವಂ ನಾಸ್ತಿಯಾಗದು.*

ಈ ವಚನ ಆದಿಕಾರಣ ಮತ್ತು ಶಾಶ್ವತ ಪರಿಣಾಮ ಗಳೆರಡನ್ನೂ ತೊಡೆದುಹಾಕುತ್ತದೆ. ಪ್ರಕ್ರಿಯೆ ಎಂಬುದು ಕಾರಣ ನಿರಸನದಿಂದ ಮಾತ್ರ ಸಾಧ್ಯ. ಕಾರಣಕ್ಕೆ ಅಂಟಿ ಕೂತಿರುವವರೆಗೆ 'ಸ್ಥಿತಿ'ಯು ಗತಿಯ ಅವಸ್ಥೆಯನ್ನು ಪಡೆದು ಕೊಳ್ಳಲಾರದು. ತಾಯಿ, ಬೀಜ, ನಾಮ, ಅಸಲುಗಳೆಂಬ ಸಾಪೇಕ್ಷ ಕಾರಣಗಳಿಗೆ, ಲಾಭ, ಪೂಜೆಯ ಫಲ ಇತ್ಯಾದಿ ಸಾಪೇಕ್ಷ ಪರಿಣಾಮಗಳಿಗೆ ಅವೇ ಸ್ವತಂತ್ರ ಅವಸ್ಥೆಗಳೆಂದು ಅಂಟಿಕೂತರೆ ಅವುಗಳು ನಮ್ಮನ್ನೂ ಭವಕ್ಕೆ ಬಂಧಿಸುತ್ತವೆ. ''ನಚ್ಚುಮಚ್ಚಿನ ಸುಖ ಪರಿಣಾಮ ಸನ್ನಿಹಿತವಾದ ಬಳಿಕ ಇನ್ನು ಅನುಭಾವವೆಂಬುದಿಲ್ಲ'' ಎನ್ನುತ್ತಾನೆ ಅಲ್ಲಮ.

**ಪುನರುತ್ಥಾನ**

ನಮ್ಮಲ್ಲಿ
ಅನೇಕರಿಗೆ
ನಿತ್ಯ ಮರಣ;
ಸತ್ತ ದಿನ
ಪುನರುತ್ಥಾನ

— ಸಿ.ಪಿ.ಕೆ.

'ಅನುಭಾವ' ಎಂಬ ಪದಕ್ಕೆ ಈಗಿರುವ ಅರ್ಥಗಳ ಜೊತೆಗೆ, 'ಜೊತೆಯಲ್ಲಿ ಉಂಟಾದುದು', 'ಪ್ರತೀತ್ಯ ಸಮುತ್ಪನ್ನ' ಎಂಬ ಅರ್ಥ ವಿಸ್ತರಣೆಯೂ ಸಾಧ್ಯ. ನಮ್ಮ ಅನುಭವಕ್ಕೆ ಬರುವ ಈ ವಸ್ತು ಪ್ರಪಂಚವನ್ನು 'ನಿರಂತರ ಪ್ರವಾಹದ ಪ್ರಕ್ರಿಯೆ' ಎಂದು ನಾಗಾರ್ಜುನ ವಿವರಿಸುತ್ತಾನೆ. ಅವನು ಕೊಡುವ ಎರಡು ಉದಾಹರಣೆಗಳು ಇಲ್ಲಿ ಪ್ರಸ್ತುತವಾಗಿವೆ. ಒಂದು ಅಗ್ನಿ ಮತ್ತು ಇಂಧನದ ಸಂಬಂಧ, ಇನ್ನೊಂದು ಬೀಜವೃಕ್ಷ ಸಂಬಂಧ. ಒಂದು ಆದಿಕಾರಣದ ನಿರಾಕರಣೆಗೆ ಯಶಸ್ವೀ ಉದಾಹರಣೆಯಾದರೆ ಇನ್ನೊಂದು ಪ್ರಕ್ರಿಯಾ ಮೀಮಾಂಸೆಯನ್ನು ಅತ್ಯಂತ ಸರಳವಾಗಿ ವಿವರಿಸುತ್ತದೆ. ಪ್ರಕ್ರಿಯಾ ಮೀಮಾಂಸೆಗೆ ಈ ಎರಡರ ವಿವರಣೆಯೂ ಅಗತ್ಯ. ಮೊದಲನೆಯದಾಗಿ ಅಗ್ನಿ-ಇಂಧನದ ಸಮಸ್ಯೆ. ನಾಗಾರ್ಜುನ ತನ್ನ ಮೂಲ ಮಾಧ್ಯಮಿಕ ಕಾರಿಕಾದಲ್ಲಿ ಇದಕ್ಕಾಗಿ ಅಗ್ನಿ-ಇಂಧನ ಪರೀಕ್ಷಾ ಎಂಬ ಒಂದು ಅಧ್ಯಾಯವನ್ನೇ ಮೀಸಲಿಟ್ಟಿದ್ದಾನೆ. ಇದೇ ವಿಷಯ ಎದುರಿಗೆ ಬಂದಾಗ ಕಾಶ್ಮೀರ ಶೈವ ಸಿದ್ಧಾಂತಿ ಹೀಗೆನ್ನುತ್ತಾನೆ: ''ಅಗ್ನಿ ಇದೆ. ಉರಿಯುವುದು ಅದರ ಧರ್ಮ. ಬೀಜ ಇದೆ. ಮೊಳೆಯುವುದು ಅದರ ಧರ್ಮ. ಅದರಲ್ಲಿ ಪ್ರಶ್ನಿಸ ಬೇಕಾದ್ದೇನಿದೆ? ಅವು ಅವುಗಳ ಧರ್ಮವನ್ನಷ್ಟೇ ಪ್ರಕಾಶ ಪಡಿಸುತ್ತವೆ...'' ನಿಜ, ಅವುಗಳ ಕ್ರಿಯಾಸಾಮರ್ಥ್ಯವನ್ನು ಪ್ರಶ್ನಿಸಬೇಕಾದ್ದಿಲ್ಲ, ಆದರೆ ಅವು ಮೊದಲೇ ಸ್ವತಂತ್ರವಾಗಿ 'ಇವೆ' ಎಂಬ ನಿರ್ಧಾರವೇ ಇಲ್ಲಿ ಪ್ರಶ್ನಾರ್ಹವಾದುದು. ಮೊದಲೇ ಸ್ವತಂತ್ರವಾಗಿ ಅಗ್ನಿ-ಇಂಧನಗಳು ಇರಬಲ್ಲವು ಎಂದಾದರೆ ಅವುಗಳು ಉಂಟಾಗಲು ಪರಸ್ಪರ ಅಗತ್ಯವೇ ಇಲ್ಲ ಎಂದಾಗುತ್ತದೆ. ಅವು ನಿತ್ಯವಾಗಿಬಿಡುತ್ತವೆ. ನಿತ್ಯವಾದ ಅಗ್ನಿಯನ್ನು ಹತ್ತಿಸುವ ಅಗತ್ಯವೇ ಇಲ್ಲ; ನಂದಿಸಲೂ ಬಾರದು. ಅಗ್ನಿಯುಂಟಾಗಲು ಬೇಕಾದ ಇಂಧನವೆಂಬ 'ಕಾರಣ' ಅಗತ್ಯವಾದ ಪರಿಸ್ಥಿತಿ ('ಘರ್ಷಣೆ' ಇತ್ಯಾದಿ ಪ್ರತ್ಯಯ) ಮತ್ತು ಫಲರೂಪಿಯಾದ ಅಗ್ನಿ – ಇವು ಮೂರೂ ಸಂಪರ್ಕದಲ್ಲಿ ಮಾತ್ರ ತಮ್ಮ 'ಅವಸ್ಥೆ'ಯನ್ನು ಪಡೆದುಕೊಂಡು 'ಸಂಬಂಧ' ತಪ್ಪಿದಾಗ ತಮ್ಮ 'ಅವಸ್ಥೆ'ಯನ್ನು ಕಳೆದುಕೊಳ್ಳುತ್ತವೆ. ಈ ಸಂಬಂಧಪೂರ್ವ ದಲ್ಲಿಯೇ ಯಾವುದಕ್ಕೂ ಸ್ವತಂತ್ರ ಅಸ್ತಿತ್ವವು ಇರುವುದಿಲ್ಲ. ಇಂಧನದ ಸಂಪರ್ಕಪೂರ್ವದಲ್ಲಿಯೇ ಅಗ್ನಿ ಇತ್ತು ಎನ್ನುವುದಾದರೆ, ಅದು ಈಗಾಗಲೇ ಉರಿಯುತ್ತಿರಬೇಕು. (ಏಕೆಂದರೆ ಉರಿಯುವುದು ಅದರ ಲಕ್ಷಣ. ಲಕ್ಷಣ ರಹಿತವಾಗಿ ಲಕ್ಷ್ಯವು ಇರಲಾರದು.) ಈಗಾಗಲೇ ಉರಿಯುತ್ತಿರುವುದಕ್ಕೆ ಇಂಧನದ ಅಗತ್ಯವಾದರೂ ಏನಿದೆ? ಇಂಧನದ ಅಸ್ತಿತ್ವವೂ ಹೀಗೆಯೇ ಅಸಂಬದ್ಧವಾಗುತ್ತದೆ. ಇನ್ನು ಬೀಜ-ವೃಕ್ಷದ ಸರಣಿ. ಬೀಜ-ಅದು ಮೊಳೆಯಲು ಬೇಕಾದ ಪರಿಸ್ಥಿತಿ ಅಂದರೆ ಪ್ರತ್ಯಯ, ಮೊಳಕೆ-ಸಸಿ-ಗಿಡ-ಮರ-ಹೂ-ಹಣ್ಣು-ಬೀಜ-ಮೊಳಕೆ... ಈ ಸರಣಿಯಲ್ಲಿ ಎಲ್ಲವೂ ಮುಂದಿನ ಅವಸ್ಥೆಗೆ ಸಾಪೇಕ್ಷ ಕಾರಣಗಳೇ ಹೊರತು ಯಾವುದೂ ಸ್ವತಂತ್ರ ಅವಸ್ಥೆಯಲ್ಲ ಮತ್ತು ಸ್ವತಂತ್ರ ಫಲವೂ ಅಲ್ಲ... ಎಲ್ಲವೂ ನಿರಂತರ ಪ್ರವಾಹದಲ್ಲಿ ತೊಡಗಿರುವ ಪ್ರಕ್ರಿಯೆ ಮಾತ್ರ. ಬೀಜ ಫಲವಷ್ಟೇ ಅಲ್ಲ, ಮುಂದಿನ ಹಂತಕ್ಕೆ ಕಾರಣವೂ ಹೌದು. ಇಲ್ಲಿ ಬೀಜದಲ್ಲಿಯಾಗಲೀ, ಸಸಿಯಲ್ಲಾಗಲೀ, ಹೂ-ಹಣ್ಣು ಯಾವುದರಲ್ಲಿಯೂ ಅವು ಉಂಟಾಗಲು ಬೇಕಾಗುವ ಪರಿಸ್ಥಿತಿಯನ್ನೊದಗಿಸಿದ ಪ್ರತ್ಯಯದಲ್ಲಾಗಲೀ ಸ್ವತಂತ್ರವಾದ

ವಸ್ತುವೆಂಬುದಿಲ್ಲ ಎಲ್ಲವೂ ಸಂಬಂಧದಲ್ಲಿ ಮಾತ್ರ ಉಂಟಾಗಿ ಸಂಬಂಧ ಪ್ರವಾಹದಲ್ಲಿ ಮುಂದುವರಿಯುತ್ತಿರುತ್ತವೆ.

ಅಲ್ಲಮನೂ ಲೋಕವ್ಯವಹಾರವನ್ನು ಸಂಬಂಧ ಪ್ರಕ್ರಿಯೆಯನ್ನಾಗಿಯೇ ವಿವರಿಸುತ್ತಾನೆ. ಪಿಂಡಸ್ಥಲದ ಮೊದಲ ವಚನ ಇದೇ ಉದಾಹರಣೆಗಳೊಂದಿಗೆ ಸಂಬಂಧವಿವರಣೆಯನ್ನೂ ನೀಡುತ್ತದೆ.

*ಶಿಲೆಯೊಳಗಣ ಪಾವಕನಂತೆ*
*ಉದಕದೊಳಗಣ ಪ್ರತಿಬಿಂಬದಂತೆ*
*ಬೀಜದೊಳಗಣ ವೃಕ್ಷದಂತೆ*
*ಶಬ್ದದೊಳಗಣ ನಿಶ್ಶಬ್ದದಂತೆ*
*ಗುಹೇಶ್ವರಾ ನಿಮ್ಮ ಶರಣ ಸಂಬಂಧ.*

'ಬದಲಾವಣೆ'ಯನ್ನು ನಾಗಾರ್ಜುನ ಮತ್ತು ಅಲ್ಲಮ ಇಬ್ಬರೂ ಭಿನ್ನಾಭಿನ್ನ ನಿರಾಕರಣೆಯ ಮೂಲಕವೇ ಮಾಡುತ್ತಾರೆ. ಬದಲಾವಣೆಯು ಪೂರ್ಣವಾದದ್ದು ಮತ್ತು ಸತತವಾದದ್ದು. ಬದಲಾದ ವಸ್ತುಗಳು ಸಮಾನವೂ ಅಲ್ಲ, ಭಿನ್ನವೂ ಅಲ್ಲ. ವೃದ್ಧನಾದ ಯುವಕ ಒಬ್ಬನೇ ಅಲ್ಲ, ಬೇರೆ ಬೇರೆಯೂ ಅಲ್ಲ. ಮೊಸರಾದ ಹಾಲು ಒಂದೇ ಅಲ್ಲ, ಬೇರೆ ಬೇರೆಯೂ ಅಲ್ಲ. ಅವುಗಳ ನಡುವಿನ ಕೊಂಡಿಯನ್ನು ಕಳಚಲುಬಾರದು. ಮೊದಲು ಕಾಲಿಟ್ಟ ನದಿಯೂ ಎರಡನೇ ಸಾರಿಗೆ ಕಾಲಿಟ್ಟ ನದಿಯೂ ಒಂದೇ ಅಲ್ಲ; ಬೇರೆ ಬೇರೆಯೂ ಅಲ್ಲ. ಕಾಲಿಟ್ಟ ಮನುಷ್ಯನೂ ಹಾಗೆಯೇ. ಈ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಿ ವಿವರಿಸಲು ಸಾಧ್ಯವಿಲ್ಲ. ಹಾಲು ಮೊಸರಾಗುವ ಕ್ಷಣವೊಂದನ್ನು ದಾಖಲಿಸಲು ಸಾಧ್ಯವಿಲ್ಲ. ಯುವಕ ವೃದ್ಧನಾಗುವ ಪ್ರಕ್ರಿಯೆ ಉಂಟೇ ಹೊರತು, ಯಾವಾಗ ಎಂಬ ಪ್ರಶ್ನೆಗೆ ಉತ್ತರವಿರಲಾರದು.

**ಪ್ರಮಾಣ ನಿರಾಕರಣೆ**

ಅಲ್ಲಮ ಮತ್ತು ನಾಗಾರ್ಜುನರ ಪ್ರಕ್ರಿಯಾ ಮೀಮಾಂಸೆಯ ನಿಲುವನ್ನು ಇನ್ನೊಂದು ದಿಕ್ಕಿನಿಂದಲೂ ವಿಶ್ಲೇಷಿಸಬಹುದು. ಲೋಕ ವಿವರಣೆಗೆ ದರ್ಶನಗಳು ಪ್ರಮಾಣಗಳನ್ನು ಆಧಾರವಾಗಿ ಸ್ವೀಕರಿಸುತ್ತವೆ. ಸ್ಥೂಲವಾಗಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳನ್ನು ಪ್ರಮಾಣಗಳೆನ್ನುತ್ತಾರೆ. ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧವೆಂಬ ಅಪ್ರಮುಖ ಪ್ರಮಾಣಗಳೂ ಉಂಟು. ವಸ್ತುಸ್ವಭಾವ ಅಥವಾ ಸತ್ಯವನ್ನು ತಿಳಿಯಲು ಇರುವ ಸಾಧನಗಳೇ ಪ್ರಮಾಣಗಳೆಂದು ಸ್ಥೂಲವಾಗಿ ಹೇಳಬಹುದು. ಒಂದೊಂದು ದರ್ಶನವು ಒಪ್ಪುವ ಪ್ರಮಾಣಗಳು ಎಷ್ಟು ಮತ್ತು ಯಾವುವು ಎಂಬುದು ಆಯಾ ದರ್ಶನದ ನಿಲುವಿಗೆ ಸಂಬಂಧಿಸಿದ ವಿಚಾರ. ಇಂದ್ರಿಯ ಗೋಚರವಾದ ರೂಪ, ರಸ, ಗಂಧ ಮುಂತಾದುವುಗಳಿಗೆ ಸಂಬಂಧಿಸಿದ್ದು ಪ್ರತ್ಯಕ್ಷ. ತರ್ಕದ ಮೂಲಕ ಸಾಧಿತ ವಾಗುವುದು ಅನುಮಾನ. ಉದಾಹರಣೆಗೆ, ಹೊಗೆ ಇರುವುದರಿಂದ ಬೆಂಕಿ ಇದೆ ಎಂದು ಅನುಮಾನಿಸುವುದು. ಶಬ್ದವೆಂದರೆ ವೇದಗಳೆನ್ನುವುದು ಸ್ಥೂಲಾರ್ಥ. ಪ್ರಶ್ನಾತೀತ ವೆಂದು ಸಾಧಿಸಬಯಸುವ ಎಲ್ಲ ದಾಖಲೆಗಳೂ 'ಶಬ್ದ' ವೆಂದರೂ ಸರಿಯೇ. ಚಾರ್ವಾಕರು ಪ್ರತ್ಯಕ್ಷವನ್ನು ಹಾಗೂ ಅದರಿಂದ ಮೂಡುವುದನ್ನು, ಸಾಂಖ್ಯರು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದವನ್ನು, ನೈಯಾಯಿಕರು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದವನ್ನು ಪ್ರಮಾಣಗಳೆಂದು ಮಾನ್ಯ ಮಾಡುತ್ತಾರೆ. ಬೌದ್ಧರು ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಪ್ರಮಾಣಗಳೆನ್ನುತ್ತಾರೆಂದು ವಿದ್ವಾಂಸರು ಸೂಚಿಸಿದರೂ, ಪ್ರಮಾಣದ ಬಗ್ಗೆ ಅಸಂಧಿಗ್ಧವಾಗಿ ನಾಗಾರ್ಜುನ ವಿಗ್ರಹ ವ್ಯಾವರ್ತಿನಿಯಲ್ಲಿ ತನ್ನ ನಿಲುವನ್ನು ಪ್ರಕಟಿಸಿದ್ದಾನೆ :

''ನಾನು ಪ್ರತ್ಯಕ್ಷ ಇತ್ಯಾದಿ ಸಾಧನಗಳಿಂದ ಏನನ್ನಾದರೂ ಗ್ರಹಿಸಿದ್ದರೆ ಆಗ ನಿರಾಕರಿಸುತ್ತಿದ್ದೆ ಅಥವಾ ಒಪ್ಪುತ್ತಿದ್ದೆ. ಆದರೆ ಅದು ಹಾಗಲ್ಲ. ಹೀಗಾಗಿ ಪ್ರಮಾಣವೊಂದರ ಮೂಲಕ ನಾನು ಗ್ರಹಿಸಿ ಅದನ್ನು ನಿರಾಕರಿಸುತ್ತಿದ್ದೆ ಎಂದು ನೀನು ಹೇಳಿದರೆ, ಅದಕ್ಕೆ ನನ್ನ ಉತ್ತರ : 'ಪ್ರಮಾಣಗಳೂ ಇಲ್ಲ, ಅವುಗಳಿಂದ ಗಮ್ಯವಾದದ್ದೂ ಇಲ್ಲ.' ಒಂದು ಪಕ್ಷ ಪ್ರಮಾಣಗಳ ಮೂಲಕ ಪ್ರಮಾಣಗಳು ಸಿದ್ಧವಾಗುತ್ತವೆ ಎಂದಾದರೆ ಆಗ ಅವು ಅನಂತವಾಗುತ್ತವೆ. ಆಗ ಯಾವುದರ ಪ್ರಾರಂಭ, ಮಧ್ಯ, ಅಂತ್ಯ ಎಂಬುದು ಕೂಡ ಸಿದ್ಧವಾಗುವುದಿಲ್ಲ.''

ಯಾವುದನ್ನು ಸಿದ್ಧಗೊಳಿಸಬೇಕು ಎಂದು ಹೊರಡುತ್ತೇವೆಯೋ ಅದರ ಪ್ರಮಾಣವನ್ನು ಸಿದ್ಧಮಾಡಬೇಕಾಗುತ್ತದೆ. ಪ್ರಮಾಣಗಳ ಬಗೆಗಿನ ಅಲ್ಲಮನ ಈ ವಚನವೂ ಕುತೂಹಲಕಾರಿಯಾದುದು :

*ನಾನೆಂಬುದು ಪ್ರಮಾಣ ನೀನೆಂಬುದು ಪ್ರಮಾಣ*
*ಸ್ವಯವೆಂಬುದು ಪ್ರಮಾಣ ಪರವೆಂಬುದು ಪ್ರಮಾಣ*
*ಪ್ರಮಾಣವೆಂಬುದು ಪ್ರಮಾಣ*
*ಗೊಹೇಶ್ವರನೆಂಬುದು ಅಪ್ರಮಾಣ.*

ನಾನು-ನೀನು, ಸ್ವ-ಪರವೆಂಬ ತುದಿಗಳ ಮೂಲಕ, ದ್ವಂದ್ವಗಳ ಮೂಲಕ ಲೋಕಗ್ರಹಿಕೆಗೆ ಹೊರಡುವವನು ಪ್ರಮಾಣಗಳನ್ನು ಆಧರಿಸುತ್ತಾನೆ. ಗೊಹೇಶ್ವರನೆಂಬ ಶೂನ್ಯತೆಯ ವಿವರಣೆಗೆ ಪ್ರಮಾಣಗಳು ಅನುಪಯುಕ್ತ. ಪ್ರಮಾಣಗಳನ್ನು ದಾಟದ ಹೊರತು ಗೊಹೇಶ್ವರನೆಂಬ ಅಪ್ರಮಾಣ ಅಥವಾ ಬಯಲು ದೊರಕದು. ಈ ವಿಷಯದಲ್ಲಿ ಅಲ್ಲಮ ಮತ್ತು ನಾಗಾರ್ಜುನರ ನಿಲುವು ಒಂದೇ ಆಗಿದೆ. ಪ್ರಮಾಣಗಳೆಂಬ ಸಾಧನಗಳನ್ನು ಇಬ್ಬರೂ ಬಳಸಿಕೊಳ್ಳುವುದಿಲ್ಲ.

ಎಲ್ಲ ಸಂಗತಿಗಳೂ ನಿಃಸ್ವಭಾವದ ಕಾರಣದಿಂದಾಗಿ ಮತ್ತೊಂದಕ್ಕೆ ಪ್ರಮಾಣವಾಗಲಾರವು. ಎಲ್ಲವೂ ಪ್ರತೀತ್ಯ ಸಮುತ್ಪನ್ನವೇ ಆಗಿವೆ. ಪ್ರತೀತ್ಯ ಸಮುತ್ಪನ್ನವಾದುದು ಸ್ವ-ಭಾವಿಯಲ್ಲವುದರಿಂದ ಶಾಶ್ವತ ಪ್ರಮಾಣವೊಂದರ ಮೂಲಕ ಅದನ್ನು ಗ್ರಹಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಲ್ಲಮನ ಒಂದು ವಚನ ಅದನ್ನು ಹೀಗೆ ವಿಶ್ಲೇಷಿಸುತ್ತದೆ :

*ಪಂಚಭೂತ ಸಂಗದಿಂದ ಜ್ಯೋತಿಯಾಯಿತ್ತು*
*ಪಂಚಭೂತ ಸಂಗದಿಂದ ಕರ್ಪೂರವಾಯಿತ್ತು*
*ಆ ಎರಡರ ಸಂಗವೇನಾಯಿತ್ತು ಹೇಳಾ ?*
*ವಾಙ್ಮನಕ್ಕತೀತ ಗುಹೇಶ್ವರ.*

ವಸ್ತುಪ್ರಪಂಚವು ಸಂಗದಿಂದಾದುದು ಮತ್ತು ಹೀಗೆ ಉಂಟಾದ ಸಂರಚನೆಯಲ್ಲಿ ಶಾಶ್ವತ ಸತ್ತೆಂಬುದು ಇಲ್ಲವೆಂಬ ಸ್ಪಷ್ಟನಿಲುವನ್ನು ಈ ವಚನ ವ್ಯಕ್ತಪಡಿಸುವುದರ ಜೊತೆಗೆ ಗುಹೇಶ್ವರನೆಂಬ ಬಯಲು ಪರಿಕಲ್ಪನೆಯಲ್ಲವಾದುದರಿಂದ ಅದನ್ನು ಮಾತು ನುಡಿಯಲಾರದು. ಗುಹೇಶ್ವರನೆಂಬ ಪ್ರತಿಜ್ಞೆ ಅಲ್ಲಮನದಲ್ಲ. ಹಾಗಾಗಿ ಅವನಿರುವುದಕ್ಕೆ ಇಲ್ಲದಿರುವುದಕ್ಕೆ ಪ್ರಮಾಣವನ್ನೊದಗಿಸುವ ಜವಾಬ್ದಾರಿ ಅಲ್ಲಮನಿಗಿಲ್ಲ.

*ಪೃಥ್ವಿಯೊಳಗಿಲ್ಲ ಆಕಾಶದೊಳಗಿಲ್ಲ*
*ಚತುರ್ದಶ ಭುವನಾದಿ ಭುವನಂಗಳೊಳಗೆಯೂ*
*ಇಲ್ಲ*
*ಹೊರಗೆಯೂ ಇಲ್ಲ! ಏನಾಯಿತ್ತೆಂದರಿಯೆನಯ್ಯ !*
*ಗುಹೇಶ್ವರ ಅಂದೂ ಇಲ್ಲ, ಇಂದೂ ಇಲ್ಲ,*
*ಎಂದೂ ಇಲ್ಲ.*

ಬೌದ್ಧಧರ್ಮ ಮತ್ತು ಅಲ್ಲಮಪ್ರಭು ತಮ್ಮ ಈ ಲೋಕ ವಿವರಣೆಯನ್ನು ಶುದ್ಧ ತಾತ್ವಿಕತೆಯನ್ನಾಗಿ ವಿವರಿಸಲಿಲ್ಲ. ಬುದ್ಧನು ತನ್ನ ವಿವರಣೆಯನ್ನು ಲೋಕದ ಬಗೆಗಿನ ಕರುಣಾ ಮೈತ್ರಿ ಹಾಗೂ ದುಃಖದ ಬಿಡುಗಡೆಯ ಮಾರ್ಗವಾಗಿ ಪ್ರಸ್ತಾಪಿಸಿದರೆ ಅಲ್ಲಮನೂ ಅದನ್ನು ಲೋಕಪರವಾದ ಸತ್ಕ್ರಿಯೆಯ ಜೊತೆಯಲ್ಲಿಡಬೇಕೆಂದು ಸೂಚಿಸುತ್ತಾನೆ.

*ಕ್ರಿಯಾಮಥನವಿಲ್ಲದೆ ಕಾಣಬಂದುದೇ*
*ಇಕ್ಷುವಿನೊಳಗಣ ಮಧುರ ?*
*ಕ್ರಿಯಾಮಥನವಿಲ್ಲದೆ ಕಾಣಬಂದುದೇ*
*ತಿಲದೊಳಗಣ ತೈಲ ?*
*ಕ್ರಿಯಾಮಥನವಿಲ್ಲದೆ ಕಾಣಬಂದುದೇ*
*ಕ್ಷೀರದೊಳಗಣ ಘೃತ ?*
*ಕ್ರಿಯಾಮಥನವಿಲ್ಲದೆ ಕಾಣಬಂದುದೇ*
*ಕಾಷ್ಠದೊಳಗಣ ಅಗ್ನಿ ?*
*ಇದು ಕಾರಣ ಗೊಹೇಶ್ವರಲಿಂಗನ*
*ತನ್ನೊಳಗಿರಿದೆನೆಂಬ ಮಹಂತಗೆಲ್ಲೆಡೆ*
*ಸತ್ಕ್ರಿಯಾಚರಣೆಯೇ ಸಾಧನ ಕಾಣ ಭೋ.*

ಶುದ್ಧ ತಾತ್ವಿಕತೆಯೆಂಬುದು ಕೇವಲ ಭ್ರಮೆ, ಊಹಾಪೋಹ. ಅದು ಅಸ್ತಿತ್ವಕ್ಕೆ ಬರುವುದು ಸತ್ಕ್ರಿಯೆಗಳ ಮೂಲಕ. ಕ್ರಿಯೆಯಿಲ್ಲದ ತಾತ್ವಿಕತೆಯನ್ನು ಬುದ್ಧನಾಗಲೀ ಅಲ್ಲಮನಾಗಲೀ ಸ್ವೀಕರಿಸುವುದಿಲ್ಲ. ಬುದ್ಧ ಮೌನವಾದುದು ಕ್ರಿಯೆಯಿಲ್ಲದ ತಾತ್ವಿಕತೆಯ ಬಗೆಗೆ ಪ್ರಶ್ನಿಸಿದಾಗಲೇ. ಈ ನೆಲೆಯಲ್ಲಿ ಈ ವಚನದ ಓದನ್ನು ನಡೆಸಬಹುದು. ಹಾಗೆಯೇ ಕ್ರಿಯಾಮಥನವನ್ನು ಒಂದು ಪ್ರತ್ಯಯವಾಗಿಯೂ (ಪರಿಸ್ಥಿತಿ) ನೋಡಬಹುದು. ಕಾಷ್ಠ ಕಾರಣವಾದರೆ ಮಥನ ಪರಿಸ್ಥಿತಿಯಾಗುತ್ತದೆ ಹಾಗೂ ಅಗ್ನಿ ಫಲವಾಗುತ್ತದೆ. ಈ ಮೂರರ ಸಂಯೋಜನೆಯಿಂದಲೇ ಈ ಮೂರಕ್ಕೂ ಅಸ್ತಿತ್ವ. ಅಗ್ನಿ ಮೈದೋರದೆಹೋದರೆ ಕಾಷ್ಠಕ್ಕೆ ಕಾಷ್ಠದ ಸ್ಥಾನ ದೊರಕುವುದಿಲ್ಲ. ಅಗ್ನಿಗೆ ಫಲದ ಸ್ಥಾನ ದೊರಕುವುದೂ ಈ 'ಸಮಗ್ರ'ದಿಂದಾಗಿಯೇ. ಹಾಗೆಯೇ ಕ್ರಿಯಾಮಥನವೂ ಹಾಗೆನ್ನಿಸಿಕೊಳ್ಳಲು ಇನ್ನೆರಡರ ಅವಲಂಬನೆ ಬೇಕು. ಸ್ವಲ್ಪ ವಿಸ್ತರಿಸಿಕೊಳ್ಳುವುದಾದರೆ, ನಿರ್ವಾಣ ದೊರೆತಮೇಲೆ ಮುಂದೇನು, ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವೊಂದು ಇಲ್ಲಿದೆ. ಬುದ್ಧನಂತೂ ನಿಬ್ಬಾನವನ್ನು ಪಡೆದ ತಕ್ಷಣವೇ ಲೋಕಜೀವನಕ್ಕೆ ಹಿಂದಿರುಗಿದ. ಅಂತಹ ತಕ್ಷಣದ ಹಿಂಪ್ರಯಾಣ ಅಲ್ಲಮನಲ್ಲಿ ಗೋಚರವಾಗದು. ಅವನು ವಾಪಸು ಬರಲು ಕಾಯಬೇಕು! ಅಥವಾ ಪರಿಣಾಮದ ಸಂತೋಷ ದಾರಿಯಲ್ಲೂ ಇದೆ. ದಾರಿಯೂ ಅದರಷ್ಟಕ್ಕದು ಪರಿಣಾಮವೇ. ಅದರಷ್ಟಕ್ಕದು ಸಂತೋಷವೇ. ಲೌಕಿಕದಲ್ಲಿದ್ದೇ ಪರಿಣಾಮಿಯಾದವರ ಬಗೆಗಿನ ಗೌರವ ಹೆಚ್ಚಿನದು.

*ಸುಖವ ಬಲ್ಲಾತ ಸುಖಿಯಲ್ಲ*
*ದುಃಖವ ಬಲ್ಲಾತ ದುಃಖಿಯಲ್ಲ*
*ಸುಖ ದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ*
*ಹುಟ್ಟಿದ ಮುನ್ನ ಸತ್ತವರ ಕುರುಹ ಬಲ್ಲಡೆ ಬಲ್ಲ*
*ಗುಹೇಶ್ವ[illegible]*

ಎಸ್. ನಟರಾಜ ಬೂದಾಳು
'ಗೌರಿ', ಸಪ್ತಗಿರಿ ಬಡಾವಣೆ, ತುಮಕೂರು - [illegible]

# ಸಣ್ಣಾಟ ರಂಗಪ್ರಯೋಗ ಮತ್ತು ಮೌಲ್ಯಗಳು

ಡಾ|| ಎಚ್. ಆಯ್. ತಿಮ್ಮಾಪೂರ

**ಪೂರ್ವಸಿದ್ಧತೆ**

ದುಡಿದು ಬೇಸತ್ತ ಗ್ರಾಮೀಣರಿಗೆ ಹೊಲದ ಕೆಲಸಗಳಿಂದ ವಿಶ್ರಾಂತಿ ಸಿಕ್ಕಾಗ ಮನರಂಜನೆಗಾಗಿ ಆಟ ನಾಟಕಗಳ ಸಿದ್ಧತೆಗೆ ತೊಡಗುತ್ತಾರೆ. ಪ್ರಮುಖರು ಕೂಡಿ ಕಥೆ ನಿರ್ಧರಿಸಿ ಅದನ್ನು ಇದ್ದಲ್ಲಿಂದ ತಂದು, ಮಾತಿನ ಚೋಪಡಿ ತಯಾರಿಸಿ ಪಾತ್ರ ಹಂಚಿಕೆ ಮಾಡುತ್ತಾರೆ. ಕತೆಗಾರನ ಹಿರಿತನದಲ್ಲಿ ಶುಭ ಸಮಯದಂದು ಹಾಡ್ಕಿ ಮನೆ, ಗುರುಮಠ, ಊರಿನ ಚೌಕಿ ಇಲ್ಲವೇ ಒಂದು ಮನೆಯಲ್ಲಿ ಕಥೆ ಪೂಜಿಸಿ, ಈಶ್ವರ ದೇವರಿಗೆ ಹಣ್ಣು ಕಾಯಿ ಕರ್ಪೂರ ಅರ್ಪಿಸಿ ಎಲ್ಲರಿಗೂ ಪನಿವಾರ ಹಂಚುತ್ತಾರೆ.

ಪ್ರತಿರಾತ್ರಿ ತರಬೇತಿ ನಡೆದು ಕತೆಗಾರನ ಹಾಗೂ ಆಡುವವರ ಜಾಣ್ಮೆಯ ಮೇಲೆ ಆಟ ಮೆರೆಯುತ್ತದೆ. ಆಟವಾಡಲು ನಿರ್ಧರಿಸಿದ ನಂತರ ಹಂದರಗಂಭಕ್ಕೆ ಸುಣ್ಣ ಕೆಮ್ಮಣ್ಣಿನ ಪಟ್ಟಿ ಬರೆದು ತಳಿರುತೋರಣ ಹಾಗೂ ಕಾವಿಬಣ್ಣದ ನಿಶಾನೆ ಕಟ್ಟಿ ಪಂಚಾಮೃತ, ಬೆಳ್ಳಿ ನಾಣ್ಯ ಹಾಕಿ ಹುಗಿಯುತ್ತಾರೆ. ಈ ಕಂಬ ಪಾತ್ರಧಾರಿಗಳಿಗೆ ಛಲವಾಗಿ, ಪ್ರೇಕ್ಷಕರಿಗೆ ಮುನ್ಸೂಚನೆಯ ಆಹ್ವಾನವಾಗಿ ನಿಲ್ಲುತ್ತದೆ. ಆಟವಾದ ನಂತರವೇ ಇದನ್ನು ಕೀಳುವುದು. ನಡುವೆ ಕಿತ್ತರೆ ಅಪಮಾನ ಅಪಶಕುನವೆಂಬ ಜನಪದರ ಭಾವನೆ ಅವರ ಸಾಂಸ್ಕೃತಿಕ ಮೌಲ್ಯಕ್ಕೆ ಸಂಕೇತವಾಗಿದೆ. ಯುಗಾದಿ ಪಾಡ್ಯ, ಹಬ್ಬ ಹುಣ್ಣಿಮೆ ಅಥವಾ ಊರ ಜಾತ್ರೆಗೆ ಆಟ ಪ್ರದರ್ಶನವಾಗುತ್ತದೆ.

ಆಟದ ಮುನ್ನಾದಿನ ರಂಗತಾಲೀಮು ನಡೆಯುವದಲ್ಲದೆ ಇದು ಆಟದಷ್ಟೇ ಗಂಭೀರ ಪ್ರದರ್ಶನವಾಗಿರುತ್ತದೆ. ಅಂದು ವೃತ್ತಿಕಲಾವಿದರು ಸ್ತ್ರೀಯರ ಪಾತ್ರ ನಿರ್ವಹಿಸಲು ಪಾಲ್ಗೊಳ್ಳುತ್ತಿರುವುದರಿಂದ ಸಾಕಷ್ಟು ಪ್ರೇಕ್ಷಕರು ಕೂಡಿರುತ್ತಾರೆ. ಬೆಳಿಗ್ಗೆ ಹೆಣ್ಣು ಪಾತ್ರ ಮಾಡಿದ ಗಂಡಸಿನ ಸಂಕಟ ನೋಡಲಾಗದು. ತಮ್ಮ ಮೈಗೆ ಬರುವ ಕುಪ್ಪಸ (ಜಂಪರ)ಗಳನ್ನು ಹುಡುಕಾಡಿ ಸುಸ್ತಾಗುತ್ತಾರೆ. ಸಿಗಲಿಲ್ಲವಾದರೆ ತಾವೇ ಹೊಲಿಸಿ ಬಿಡುತ್ತಾರೆ. ಆಮೇಲೆ ಜೀವನಪರ್ಯಂತ ಬಿಟ್ಟ ಮೀಸೆ ಬೋಳಿಸಿಕೊಂಡು ಊರೊಳಗೆ ಬಂದಕೂಡಲೇ ಊರಿನವರೆಲ್ಲ ಚೇಷ್ಟೆ ಮಾಡಿ ನಗುತ್ತಾರೆ. ಆಟದ ಮ್ಯಾನೇಜರ ಹುಕುಂ ಪಡೆದು ಬಂದಕೂಡಲೇ ಇಡೀ ಊರು ಒಂದು ಮದುವೆಯ ಹಂದರದಂತೆ ಶೋಭಿಸುತ್ತಿರುತ್ತದೆ. ಸಂಬಂಧಿಕರ ಆಗಮನ ನಡೆದಿರುತ್ತದೆ.

ಇತ್ತಕಡೆ ಅಟ್ಟದ ತಯಾರಿ ನಡೆದು ಒಂದು ಮೂಲೆಗೆ ಹಂದರಗಂಭವಿದ್ದು, ಉಳಿದ ಮೂರು ಕಡೆ ಕಂಭ ನಡೆಸಿ ನಾಲ್ಕು ಕಡೆಗೆ ಹಂತಿ ತಿರುಗಿಸುವ ರೂಲುಗಳನ್ನಿಟ್ಟು ಇಲ್ಲವೆ ಬ್ಯಾರಲ್‌ಗಳ ಮೇಲೆ ಹಲಗೆ ಹಾಕುತ್ತಾರೆ. ೧೬ ಮೊಳ ಉದ್ದ, ೧೨ ಮೊಳ ಅಗಲ, ೪ ಮೊಳ ಎತ್ತರದ ಅಟ್ಟ ಕಟ್ಟಿ ಮಾಳಿಗೆಗೆ ಬಿದಿರು ಗಳ ಹಾಕಿ ಮುಂಭಾಗವೊಂದನ್ನು ಬಿಟ್ಟು ಸುತ್ತಲೂ ಹಾಗೂ ಮೇಲೆ ಗುಡಾರ ಕುಟ್ಟುತ್ತಾರೆ. ತೆಂಗಿನ ಗರಿ ಹಾಗೂ ಬಾಳೆಯ ಕಂಭಗಳನ್ನು ಊರಲ್ಲಿ ಮೆರೆಸುತ್ತ ಬಂದು ಅಟ್ಟಕ್ಕೆ ಕಟ್ಟಿ ಅಲಂಕರಿಸುತ್ತಾರೆ. ಆಟ ಕೆಡಬಾರದೆಂಬ ನಂಬಿಕೆಯಿಂದ ಕೆಲವು ಕಡೆ ಮಂತ್ರಗಾಯಿ ಕಟ್ಟುತ್ತಾರೆ. ಮೊದಲು ಮುಂಭಾಗದಲ್ಲಿ ಹಿಲಾಲು, ನಂತರ ಗ್ಯಾಸು ಹಚ್ಚುತ್ತಿದ್ದರು. ಈಗ ಸೀನರಿ ಕಂಪನಿಗಳು ಹುಟ್ಟಿ ವಿದ್ಯುತ್ ದೀಪಗಳನ್ನು ಹಚ್ಚುತ್ತಾರೆ. ಇಷ್ಟೆಲ್ಲಾ ಆದ ಮೇಲೆಯೇ ಆಟ ಪ್ರದರ್ಶನಕ್ಕೆ ಅರ್ಹವಾಗುತ್ತದೆ.

**ಪ್ರಯೋಗ**

ಅಟ್ಟದ ಹಿಂದೆ ಬಣ್ಣದ ಮನೆಯಿರುತ್ತದೆ: ಇಲ್ಲಿ ಬಣ್ಣವನ್ನೇ ವ್ಯವಸಾಯ ಮಾಡಿಕೊಂಡ ಬಣ್ಣಗಾರರು ಬಣ್ಣ ಹಚ್ಚಿದ ಮೇಲೆ ಪಾತ್ರಧಾರಿಗಳು ವೇಷಭೂಷಣ ತೊಟ್ಟು ತಾಯತ ಇಲ್ಲವೆ ನಿಂಬೆಹಣ್ಣು ಇಟ್ಟುಕೊಂಡು ಗಣಸ್ತುತಿ ಮಾಡುತ್ತಾರೆ. ಅಟ್ಟದ ಮೇಲೆ ವಾದ್ಯ ವೃಂದದವರು ತಯಾರಾಗಿದ್ದನ್ನು ಕಂಡು ಕತೆಗಾರ 'ಭಜಿಸುವೆ ಶ್ರೀ ಗಜವದನ ಗಿರಿಜಾತನಯ ಮೊದಲಿಗೆ ಸ್ತುತಿಪೆವು ನಿಮ್ಮನು' ಎಂದು ಗಣಸ್ತುತಿ (ನಾಂದಿ) ಹಾಡಲು ಪಾತ್ರಧಾರಿ ಗಣೇಶನು ತಲೆಯಲ್ಲಾಡಿಸಿ ಸಮ್ಮತಿ ನೀಡುತ್ತಾನೆ.

**ಕತೆಗಾರ**

ಕತೆಯ ಹರಹನ್ನು ಕತೆಗಾರ (ಭಾಗವತ) ಸಂಕ್ಷಿಪ್ತವಾಗಿ ಹಾಡುತ್ತಾನೆ. ಆಟದ ಮಂಡಳಿಗೆ ಇವನೇ ಗುರು, ಶಿಕ್ಷಕ. ಕಥೆ ಮುಗಿದು ಈಶ್ವರನ ಗುಡಿಗೆ ಹೋಗಿ ಕೈಮುಗಿಯುವವರೆಗೂ ಅವನದೇ ಜವಾಬ್ದಾರಿ. ಸಭಿಕರ ಮುಖಂಡನಾಗಿ ಆತ ಮುಂದುವರೆಸುವನಲ್ಲದೆ ಪಾತ್ರಗಳನ್ನು ಬರಮಾಡಿಕೊಂಡು ಪರಿಚಯಿಸುತ್ತಾನೆ. ಆಟದೊಳಗೆ ಬೇಸರ ಬಂದಲ್ಲಿ ಹಾಸ್ಯ ಚಟಾಕಿ ಹಾರಿಸಿ ನಗಿಸುತ್ತಾನೆ ಹಾಗೂ ಉತ್ತಮ ಶ್ರಮಕ್ಕೆ ಉತ್ತಮ ಫಲ ಪಡೆಯುತ್ತಾನೆ.

**ಪಾತ್ರಗಳು**

ಆರಂಭದಿಂದ ಅಂತ್ಯದವರೆಗೂ ರಂಗದ ಮೇಲೆ ಕತೆಗಾರನ ಜೊತೆಯಲ್ಲಿ 'ದೂತಿ' ಇದ್ದು, ಪಾತ್ರ ಬರುವ ಸೂಚನೆ ನೀಡುವುದು, ಪಾತ್ರ ಪರಿಚಯ, ಎರಡು ಪಾತ್ರಗಳ ಸಂಭಾಷಣೆಯಲ್ಲಿ ಮಧ್ಯ ಪ್ರವೇಶಿಸಿ ಹಾಸ್ಯಚಟಾಕಿ ಹಾರಿಸುತ್ತಾಳೆ. ಸನ್ನಿವೇಶದಲ್ಲಿ ಆದ ದೋಷಗಳನ್ನು ತಿದ್ದಿಕೊಂಡು ಪ್ರೇಕ್ಷಕರಿಗೆ ಗೊತ್ತಾಗದಂತೆ ಕಥೆ ಮುಂದುವರಿಸುವುದೇ ದೂತಿ ಪಾತ್ರದ ವಿಶೇಷತೆ. ರಂಗಭೂಮಿಗೆ ಇದೊಂದು ಸಣ್ಣಾಟದ ಕೊಡುಗೆಯಾಗಿದೆ.



*ಸರಳ, ಸಂಕ್ಷಿಪ್ತ , ನಿಗದಿತ ಅವಧಿಯಲ್ಲಿ ಪ್ರಯೋಗಗೊಳ್ಳುವ ಬಯಲಾಟದ ರೂಪಕ್ಕೆ ಸಣ್ಣಾಟ ಅಥವಾ ಡಪ್ಪಿನಾಟವೆಂದು ಕರೆದರು. ತರ್ಕಬದ್ಧ ಸಂಭಾಷಣೆಯಿದ್ದು ಲಾವಣಿ, ಸ್ವರವಚನ, ತತ್ವಪದ, ದಾಸರಪದ, ಭಜನೆ ಪದಗಳ ಧಾಟಿಗಳನ್ನು ಬಳಸಿಕೊಂಡಿವೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಜನಪದ ಮತ್ತು ಭಕ್ತಿಪಂಥದ ಸಣ್ಣಾಟಗಳು ಮಾನವರಲ್ಲಿ ನೀತಿ-ನ್ಯಾಯ, ಸಂಸ್ಕಾರ-ಸಂಸ್ಕೃತಿ, ಬೆಳೆಸುವಲ್ಲಿ ಸಹಕಾರಿಯಾಗಿದ್ದರಿಂದ ಸಾಮಾಜಿಕ ಮೌಲ್ಯಗಳು ಸೇರಿಕೊಂಡವು. ಸಮಾಜದ ಸಂಪೂರ್ಣ ಚಿತ್ರಣವನ್ನು ಪ್ರದರ್ಶಿಸಿ ಒಳ್ಳೆಯ ಕೆಟ್ಟುದರ ಪ್ರಸಂಗ-ಪರಿಣಾಮ ತಿಳಿಸಿ ಸಂಸ್ಕೃತಿಯನ್ನು ಪ್ರಸಾರ ಮಾಡಿದ್ದು ಸಣ್ಣಾಟಗಳ ಕೊಡುಗೆಯಾಗಿದೆ.*

ಸಂಗ್ಯಾಬಾಳ್ಯಾ ಆಟದಲ್ಲಿ ಮಾತ್ರ 'ದೂತಿ'ಯ ಬದಲಾಗಿ ಪರಮ್ಮ ಬರುತ್ತಾಳೆ. ಉಳಿದೆಲ್ಲ ಸಣ್ಣಾಟಗಳಲ್ಲಿ 'ದೂತಿ' ಕಡ್ಡಾಯ. ಸಂಸ್ಕೃತ ಅಥವಾ ಬೇರೆ ಭಾಷೆಗಳ ನಾಟಕಗಳಲ್ಲಿ 'ದೂತಿ' ಇರುವುದಿಲ್ಲ. ಇನ್ನೊಂದು ವಿಶೇಷವೆಂದರೆ ಈ ಹೆಣ್ಣು ಪಾತ್ರವನ್ನು ಗಂಡಸರೇ ಮಾಡುತ್ತಾರೆ.

ಉಳಿದ ಪಾತ್ರಗಳು ಹಳ್ಳಿಗರ ಪ್ರತಿಬಿಂಬಗಳಾಗಿದ್ದು ಅವುಗಳ ಅಂತಃಸತ್ವ ಶುದ್ಧ ಜನಪದವಾಗಿರುತ್ತದೆ. ಇತ್ತೀಚೆಗೆ ಬದಲಾವಣೆಗಳು ಬಂದು ಕೆಲವು ಪಾತ್ರಗಳು ಬರೀ ವೇದಾಂತ ಬೋಧಿಸುತ್ತವೆ. 'ತಿರುನೀಲಕಂಠ' ಭಕ್ತನಾಗಿ ಉಳಿಯದೆ ಕೀರ್ತನಕಾರನಾಗುತ್ತಾನೆ. ಸತ್ಯವತಿ ಪತಿವ್ರತೆಯ ಬಗ್ಗೆ ದೊಡ್ಡ ಭಾಷಣ ಜಿಗಿದು, ಎಡವುತ್ತಾಳೆ. ಗಂಡನನ್ನು ದ್ವೇಷಿಸುತ್ತಾಳೆ. ಹೀಗಾಗಿ ಪಾತ್ರಗಳಲ್ಲಿ ಇತ್ತೀಚೆಗೆ ವಿಚಾರಕ್ಕೂ ಆಚರಣೆಗೂ ಸಂಬಂಧವಿಲ್ಲದಂತಾಗಿದೆ. ಆದರೆ ಅಸಲಿ ಸಣ್ಣಾಟದ ಪಾತ್ರಗಳು ಇವೆರಡನ್ನೂ ಕಡ್ಡಾಯವಾಗಿ ಪಾಲಿಸುತ್ತವೆ. ಎಲ್ಲ ಪಾತ್ರಗಳು ಹಾಡು ಅನುಸರಿಸಿ ಲಘು ಹೆಜ್ಜೆಹಾಕಿ ಮಾತು ಹೇಳುತ್ತವೆ.

**ಸಂಭಾಷಣೆ**

ಜನಪದರಿಗೆ ತತ್ವ - ನೀತಿ ಮನವರಿಕೆ ಮಾಡಲು ಎರಡು ಪಾತ್ರಗಳ ನಡುವೆ ತರ್ಕಬದ್ಧ ಸಂಭಾಷಣೆ ನಡೆಯುತ್ತದೆ. ಹೆಣ್ಣು ಗಂಡು ಪಾತ್ರಗಳು ವಾದ ವಿವಾದಕ್ಕೆ ಇಳಿದು ನಾ ಹೆಚ್ಚು ತಾ ಹೆಚ್ಚು ಎನ್ನುವುದು ಹರದೇಶಿ ನಾಗೇಶಿಯನ್ನು ಹೋಲುತ್ತದೆ. ಸಣ್ಣಾಟದಲ್ಲಿ ಸಂವಾದ ಸನ್ನಿವೇಶ ಕಡ್ಡಾಯ. ಮೂಲಕಥೆಯಲ್ಲಿ ಇರದಿದ್ದರೂ ಅದನ್ನು ಕವಿ ಸೃಷ್ಟಿಸುತ್ತಾನೆ. ಉದಾಹರಣೆಗೆ, ಅಲ್ಲಮ- ಮಾಯೆ -ತಿರುನೀಲಕಂಠ-ಪ್ರಮಿಳಾ- ಅಕ್ಕ ಮಹಾದೇವಿ - ಕೌಶಿಕ ಸಂವಾದ ಮುಂತಾದವುಗಳು.

**ಕುಣಿತ**

ಸಣ್ಣಾಟದ ಕುಣಿತ ಸರಳವಾಗಿದ್ದು ಡಪ್ಪಿನ ಚಿಟುಕಿನ ಗತ್ತಿಗೆ ಹ್ರಸ್ವಲಯದ ಹೆಜ್ಜೆಹಾಕಿ ಚಲತಿ ಬಂದಾಗ ತಾಳದ ಮುರಿತಕ್ಕೆ ಹೊಂದಿಕೊಂಡು ಜಿಂಕೆಯಂತೆ ಟಣ್ಣನೆ ಜಿಗಿದು ಎರಡೂ ಪಾದಗಳಿಂದ ಮೃದುವಾಗಿ ನೆಲ ಬಡಿಯುತ್ತ ಅತ್ತ ಇತ್ತ ಚಲಿಸಿ ಮೊದಲಿದ್ದ ಸ್ಥಾನಕ್ಕೆ ಬಂದು ನಿಲ್ಲಲಾಗುತ್ತದೆ. ಕೆಲವೊಮ್ಮೆ ನಿಂತಲ್ಲಿಯೇ, ಹೌದೋ ಅಲ್ಲೋ ಅನ್ನುವಷ್ಟು ಮೊಣಕಾಲು ಬಾಗಿಸಿ ಕುಣಿದು ತಾಳದ ಮುರಿತ ಮುಗಿದ ಕೂಡಲೇ ನೆಟ್ಟಗೆ ನಿಲ್ಲುತ್ತವೆ. ಹಾಡಿನೊಂದಿಗೆ ಸಾಗುವ ಕುಣಿತ ಪ್ರೇಕ್ಷಕರನ್ನು ಉದ್ವೇಗಗೊಳಿಸುವುದಲ್ಲದೆ ಪಾತ್ರಗಳ ಮುಂದಿನ ಮಾತಿಗೆ ಸರಣಿ ಸಿಗುತ್ತದೆ.

**ವಾದ್ಯ**

ಮೊದಲು ಡಪ್ಪು ತಾಳ ಪುಂಗಿ ವಾದ್ಯಗಳಾಗಿದ್ದು ನಂತರ ಕೊಳವಿ, ಮುಖವೀಣೆ ಕೈ ಹಾಗೂ ಕಾಲು ಪಿಯಾನುಗಳು ಸೇರಿಕೊಂಡವು. ಡಪ್ಪು ಸಣ್ಣಾಟದಲ್ಲಿ ಮುಖ್ಯವಾದ್ಯ. ಹೀಗಾಗಿ ಸಣ್ಣಾಟಕ್ಕೆ ಡಪ್ಪಿನಾಟವೆಂದೂ ಕರೆಯುವರು. ಡಪ್ಪಿನ ಒಂದು ಬದಿಗೆ ದಾರ ಕಟ್ಟಿ ಎಡಬಗಲಿಗೆ ಸಿಗಿಸಿಕೊಂಡು ಇಲ್ಲವೆ ಹಿಡಿದುಕೊಂಡು ಎಡಗೈಯಿಂದ ಚುಟುಕು ಬಾರಿಸಿ ಬಲಗೈಯಿಂದ ಡಪ್ಪಿನ ಮೇಲೆ ಕೈಯಾಡಿಸಿ ಬಾರಿಸುವರು. ಗಂಡುಪಾತ್ರ ಹಾಡುವಾಗ್ಗೆ ಕೊಳವೆ, ಶ್ರುತಿ; ಹೆಣ್ಣು ಪಾತ್ರ ಹಾಡುವಾಗ ಮುಖವೀಣೆಯ ಶ್ರುತಿ ನುಡಿಸಲಾಗುತ್ತದೆ. ಕತೆಗಾರನು ಹಿತ್ತಾಳೆಯ ಚಪತಾಳದಿಂದ ಚಕಚಕವೆಂದು 'ದ್ವಿತಾಲ' 'ತ್ರಿತಾಲ' ಬಡಿಯುತ್ತಾನೆ.

**ವಾದ್ಯವೃಂದ**

ಕತೆಗಾರ ಜೊತೆಗೆ ಇಬ್ಬರು ಹಿಮ್ಮೇಳದವರಿದ್ದು ಕೊಳವಿ, ಪಿಯಾನು, ಡಪ್ಪು, ಪುಂಗಿ, ಮುಖವೀಣೆ ಬಾರಿಸುವವರು ಮುಂತಾದವರು ಏಳೆಂಟು ಜನ ಸಣ್ಣಾಟದ ವಾದ್ಯವೃಂದದವರಿರುತ್ತಾರೆ.

**ಹಾಡುಗಳು**

ಹಾಡುಗಳು ಜನಪದ ಧಾಟಿಯಲ್ಲಿದ್ದು ಲಾವಣಿ, ಸ್ವರವಚನ, ತತ್ವಪದ, ಭಜನೆ ಪದ, ದಾಸರ ಹಾಡುಗಳ ಛಾಯೆಯಲ್ಲಿ ನಿರ್ಮಿತವಾಗಿರುತ್ತವೆ. ಏರು-ಇಳುವು-ಮಧ್ಯಮ ಸ್ತರದಲ್ಲಿಯ ವಿವಿಧ ಧಾಟಿಯ ಪದಗಳು ಆಟದಿಂದ ಆಟಕ್ಕೆ ಬೇರೆಯಾಗಿರುತ್ತವೆ. ದಾಸರಾಟದಲ್ಲಿ ಏರಿಳಿತವಿದೆ. ಬಹಳಷ್ಟು ಶರಣರಾಟಗಳಲ್ಲಿ ಏರಿಳಿತವಿಲ್ಲ. ಸಾಮಾಜಿಕ ಆಟಗಳಲ್ಲಿ ಚುಟುಕನ್ನು ತ್ವರಿತವಾಗಿ ಹೇಳಿ, ಆಮೇಲೆ ನಿಧಾನವಾಗಿ ನಡೆಯುವ ಧಾಟಿಯಿರುತ್ತದೆ.

ಸಾಮಾನ್ಯವಾಗಿ ಆದಿಪ್ರಾಸವಿದ್ದು ಛಂದಸ್ಸಿನ ನಿರ್ಬಂಧವಿಲ್ಲದ್ದರಿಂದ ಸಾಲುಗಳ ಸಂಖ್ಯೆ ಹೆಚ್ಚು ಕಡಿಮೆಯಿರುತ್ತದೆ. ಸರಳ ಸಹಜ ನಿರೂಪಣೆಗಳ ಜೊತೆಗೆ ಕಾವ್ಯಾಂಶವಿರುತ್ತದೆ. ಉದಾಹರಣೆಗೆ,

*ಮೂರಂತಸ್ತಿನ ಮನಿಯೊಳು ಯಾರ್‍ಯಾರ ಸುಳವಿಲ್ಲಾ*
*ನಾರೀ ನಾ ಒಬ್ಬವಳು ಇರುವ ದಿವಸಲ್ಲಾ*
*ಒಂದೂ ಹಡದಿಲ್ಲೊ ಪ್ರಿಯಾ ಕಂದಿಲ್ಲೊ ಎನ್ನಧ್ಯಾಯ*
*ಒಂದೇ ಇರುವೆನು ನಾನಾ ಬಂದಿತೋ ಗೋಳಾ ॥೧॥*

– ಸಂಗ್ಯಾಬಾಳ್ಯಾ

'ಒಂದು ಹಡದಿಲ್ಲೊ ಪ್ರಿಯಾ ಕಂದಿಲ್ಲೊ ಎನ್ನಧ್ಯಾಯ' ಎನ್ನುವಲ್ಲಿ ಮಹತ್ವದ ಧ್ವನಿಯಿದ್ದು ಗಂಗಿಯ ನಿರಾಶೆ ಭಾವನೆ ಕೇಳುಗರ ಮೇಲೆ ಪರಿಣಾಮ ಬೀರುತ್ತದೆ ಹಾಗೂ ಕಥೆಗೆ ಕಳೆ ಬರುತ್ತದೆ.

ಸಂವಾದದ ಹಾಡುಗಳು ಪ್ರೇಕ್ಷಕರ ಮನಗೆಲ್ಲುತ್ತವೆ. ವೇಶ್ಯೆಯ ಮನೆಯಿಂದ ಬಂದ ತಿರುನೀಲಕಂಠನಿಗೆ ಸತಿ ಸತ್ಯವತಿ ಹರಿಹಾಯುವುದು ಹೀಗೆ :

*ಪಾತರದ ಹೆಣ್ಣ ಕೂಡ ರತಿಸುಖ ಸೂರೆಗೊಂಡ*
*ಎದ್ದಾಗ ಆಯ್ತು ಭಂಡ*
*ಪಾತರದವರ ಹೆಣ್ಣು ಕಣ್ಣಿಗೆ ಮಾವಿನ ಹಣ್ಣು*
*ಬಾಯಿಗೆ ತಂತು ಮಣ್ಣು ॥೧॥* – ತಿರುನೀಲಕಂಠ

'ಚಲತಿ' ಕುಣಿತದ ಲಯಸ್ವರೂಪವನ್ನು ನಿರ್ದೇಶಿಸುವ ಸೂತ್ರವಾಗಿದ್ದು, ಶೃಂಗಾರ, ಕರುಣ, ಶೋಕ ಶಾಂತ ರಸಗಳು ಸಣ್ಣಾಟದ ತ್ವರಿತಗತಿಯ ಧಾಟಿಯೊಳಗೆ ಬೆರೆತುಹೋಗಿವೆ. ಸಂಭಾಷಣೆ ತೆಗೆದರೆ ಸಣ್ಣಾಟಗಳು 'ಜನಪದ' ಗೀತನಾಟಕಗಳಾಗಿವೆ. ಇದು ಸಣ್ಣಾಟಗಳ ಮೊದಲಿನ ಸ್ವರೂಪ; ಲಘು ಸಂಗೀತದ ಮಾರ್ಗಶೈಲಿ ಮತ್ತು ದೇಶೀಯ ಶೈಲಿ ಎರಡೂ ಇದ್ದು, ಇತ್ತೀಚೆಗೆ ಶಾಸ್ತ್ರೀಯ ಸಂಗೀತ ಸೇರುತ್ತಿದೆ.

**ಬಣ್ಣ**

ಬಣ್ಣಕ್ಕೆ ವಿಶೇಷ ಮಹತ್ವವಿಲ್ಲ. ಗುಲಾಬಿ ಬಣ್ಣವನ್ನು ಮುಖಕ್ಕೆ ಹಚ್ಚಿಕೊಂಡು ಗಲ್ಲದ ಮೇಲೆ ಕಪ್ಪು ದೃಷ್ಟಿ ಚುಕ್ಕೆಯೊಂದನ್ನು ಇಟ್ಟುಕೊಂಡರೆ ಸಾಕು. ಕೃತಕ ಮೀಸೆ ಗಡ್ಡ ಹಚ್ಚಿಕೊಳ್ಳುವುದು ಕಡಿಮೆ.

**ವೇಷಭೂಷಣ**

ವೇಷಭೂಷಣ ಸರಳ ಸಾಮಾನ್ಯವಾಗಿದ್ದು ಸಾಮಾಜಿಕ ಆಟಗಳಲ್ಲಿ ಗಂಡು ಪಾತ್ರಗಳು ಮಡಿ ಅಂಗಿ, ಧೋತರ, ಜರದ ಪಟಗಾ ಧರಿಸಿದರೆ, ಸೀರೆ ಕುಪ್ಪಸ (ಜಂಪರ)ಗಳನ್ನು ಸ್ತ್ರೀ ಪಾತ್ರಗಳು ತೊಡುತ್ತವೆ. ಶ್ರೀಮಂತ ಪಾತ್ರಗಳು ಮಾತ್ರ ಆಭರಣ, ಶಲ್ಯ ಹಾಕಿದರೆ ರಾಜ ರಾಣಿಯರು ಬೆನ್ನಹಿಂದೆ ಗೌನು ಮಾತ್ರ ಧರಿಸುತ್ತಾರೆ.

ಕಥೆ ಮುಗಿದ ನಂತರ ಪಾತ್ರಗಳು ಕತೆಗಾರನೊಂದಿಗೆ ಮಂಗಳಾರತಿ ಹಾಡುತ್ತ ಈಶ್ವರನ ಗುಡಿಗೆ ಬಂದು ಕೈ ಮುಗಿದು ವೇಷ ಬದಲಿಸಿ ಮನೆಗೆ ಹೋದ ಕೂಡಲೇ ಹೊರಬಾಗಿಲಲ್ಲಿ ನಿಲ್ಲಿಸಿ ಮನೆಯ ಹೆಣ್ಣುಮಕ್ಕಳು ಕಪ್ಪು ಕೆಂಪು ಓಕುಳಿಯಿಂದ ದೃಷ್ಟಿ ತೆಗೆಯುತ್ತಾರೆ. ಅಂದು ಊರಿನವರೆಲ್ಲ ಸಿಹಿ ಊಟ ಉಂಡು ಆಟ ಪಾತ್ರಗಳ ಚರ್ಚೆಯಲ್ಲಿ ಚೇಷ್ಟೆ ಮಾಡುತ್ತಾ ನಗುತ್ತಾರೆ. ಉತ್ತಮವಾಗಿ ಅಭಿನಯಿಸಿದವರು ಎದೆಯುಬ್ಬಿಸಿ ಊರೆಲ್ಲಾ ತಿರುಗಿದರೆ ಉಳಿದವರು ಮಲಗಿಕೊಳ್ಳುತ್ತಾರೆ.

**ಸಣ್ಣಾಟಗಳಲ್ಲಿ ಮೌಲ್ಯ ಪ್ರಸಾರ**

ಸಾಮಾಜಿಕ, ಐತಿಹಾಸಿಕ, ಕಾಲ್ಪನಿಕ, ಪೌರಾಣಿಕ ಮತ್ತು ಭಕ್ತಿಯ ಸಣ್ಣಾಟಗಳಲ್ಲಿ ಸಾಮಾಜಿಕ ಮೌಲ್ಯಗಳಿದ್ದು ಅವು ಸಹಜವಾಗಿ ಜನರ ಮನಸ್ಸನ್ನು ಪರಿವರ್ತಿಸುತ್ತವೆ. ಸಾಮಾಜಿಕ ಮೌಲ್ಯಗಳು ಮನುಷ್ಯನ ಮೂಲ ಪ್ರವೃತ್ತಿಯ ದೋಷಗಳನ್ನು ತಿದ್ದುವ ಹಾಗೂ ನಿಯಂತ್ರಿಸುವ ಸಾಧನಗಳಾಗಿದ್ದು ಇಂಥ ಮೌಲ್ಯಗಳನ್ನು ಸಣ್ಣಾಟಗಳು ಸ್ವೀಕರಿಸಿ ಜನರನ್ನು ಜಾಗೃತ ಮಾಡಿವೆ. ಸಮಾಜ ಒಪ್ಪಿಕೊಂಡ ಸರಿ - ತಪ್ಪುಗಳ ಕಲ್ಪನೆ ಮಾನವನಿಗೆ ಇದ್ದರೂ, ತನ್ನ ಮೂಲ ಪ್ರವೃತ್ತಿಗೆ ತಲೆಬಾಗಿ ಒಂದೊಂದು ಸಲ ತಪ್ಪಾಗಿ ನಡೆದುಕೊಳ್ಳುತ್ತಾನೆ. ಆಗ ಸಾಮಾಜಿಕ ಮೌಲ್ಯಗಳು ಅವನನ್ನು ವಿರೋಧಿಸುತ್ತವೆ. ದೇವಾನುದೇವತೆಗಳನ್ನು ಮತ್ತೆ ಮತ್ತೆ ಹಾಡಿ ಹೊಗಳುವ ಪೌರಾಣಿಕ ಕಥೆಗಳಿಗೆ ಜನ ಬೇಸರಪಟ್ಟಾಗ ಉತ್ತರ ಕರ್ನಾಟಕದ ಜನಪದ ರಂಗಭೂಮಿ ಬದಲಾವಣೆ ಹೊಂದಿ ಮತ್ತೆ ಸಣ್ಣಾಟಗಳು ವ್ಯವಸ್ಥಿತವಾಗಿ ಪುನರುಜ್ಜೀವನಗೊಂಡವು. ಸ್ತ್ರೀಯರು ಭಾಗವಹಿಸಿರುವುದು ಇಲ್ಲಿಯ ವಿಶೇಷ.

'ಅಪರಾಧ ಮಾಡುವುದು ತಪ್ಪು' ಎಂಬ ಜನಾಂಗಿಕ ಮೌಲ್ಯಗಳು ಸಣ್ಣಾಟಗಳಲ್ಲಿ ಪ್ರಚಾರಗೊಂಡು ಗ್ರಾಮೀಣರಲ್ಲಿ ನೈತಿಕ ಮನೋಧರ್ಮವನ್ನು ಬೆಳೆಸಿದವು. ರಾಧಾನಾಟ, ಕನಕದಾಸ, ಕಬೀರದಾಸ, ತಿರುನೀಲಕಂಠ, ಅಲ್ಲಮಪ್ರಭು, ನಿಜಗುಣ ಶಿವಯೋಗಿ, ಅಕ್ಕಮಹಾದೇವಿ, ಸಂಗ್ಯಾಬಾಳ್ಯಾ, ಬಸವಂತ-ಬಲವಂತ, ಕಟ್ಟಿಚೆನ್ನ ಮುಂತಾದ ಸಣ್ಣಾಟಗಳು ಈ ದಿಶೆಯಲ್ಲಿ ಯಶಸ್ಸನ್ನು ಪಡೆದಿವೆ. ನಡೆದ ಘಟನೆಗಳನ್ನು ಸಾಮಗ್ರಿಯನ್ನಾಗಿ ಮಾಡಿಕೊಂಡ ಸಣ್ಣಾಟಗಳು ನೀತಿ-ಅನೀತಿಯನ್ನು ಮಾರ್ಮಿಕವಾಗಿ ಪ್ರದರ್ಶಿಸಿದವು. ಕಥೆಯು ಸಹಜತೆಯಿಂದ ಜನರಿಗೆ ಹತ್ತಿರವೆನಿಸಿದವು.

ಸಮಾಜದಲ್ಲಿ ನಡೆಯುವ ವಿಶ್ವಾಸ [illegible], [illegible], ದ್ವೇಷ, ಕೋಪ, ದಬ್ಬಾಳಿಕೆ ಮುಂತಾದ ಪ್ರಸಂಗಗಳು

## ಸಾದರ ಸ್ವೀಕಾರ

**ಕರ್ನಾಟಕ ಲೋಚನ** (ಷಾಣ್ಮಾಸಿಕ ವಿದ್ವತ್ ಪತ್ರಿಕೆ)
*ಸಂ : ಎಸ್.ವಿ. ಶ್ರೀನಿವಾಸರಾವ್, ಡಾ|| ನ. ಸುಬ್ರಹ್ಮಣ್ಯ*
**ಪುಟ :** ೧೪೨ **ವಾರ್ಷಿಕ ಚಂದಾ : ರೂ.** ೪೦
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,** ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು - ೫೬೦ ೦೧೯

**ಉಡುಪರ ಆಯ್ದ ಕಥೆಗಳು** *ಸಂ : ವಿ. ಗಣೇಶ*
**ಪುಟ :** ೧೨೨ **ಬೆಲೆ : ರೂ.** ೬೦
**ಆಕಾಶ ಪ್ರಕಾಶನ,** ೫೬, ಚಾಮರಾಜಪೇಟೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ.

**ಕನಸಿನ ಹೊಸ ಅಧ್ಯಾಯ** (ಕಥಾ ಸಂಕಲನ)
*ಸಂ : ವಿಜಯಕಾಂತ ಪಾಟೀಲ*
**ಪುಟ :** ೯೬ **ಬೆಲೆ : ರೂ.** ೪೦
**ಸುಮುಖ ಪ್ರಕಾಶನ,** ೧೭೪೩/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯ ನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩.

**ನಾನು ಬುದ್ಧನಲ್ಲ** (ಕವನ ಸಂಕಲನ)
*ಸಂಗೇನಹಳ್ಳಿ ಅಶೋಕ್ ಕುಮಾರ್*
**ಪುಟ :** ೮೦ **ಬೆಲೆ : ರೂ.** ೬೦
**ಅಪೂರ್ವ ಪ್ರಕಾಶನ,** 'ಅಪೂರ್ವ', ೧ನೇ ಮುಖ್ಯರಸ್ತೆ, ಸರಸ್ವತೀಪುರಂ, ಚಿತ್ರದುರ್ಗ - ೫೭೭ ೫೦೧

**ಭ್ರಮೆಗಳ ಮೇಲೆ ಬೆಳಕು** (ಲೇಖನ ಸಂಗ್ರಹ)
*ಪ್ರೊ|| ಜ್ಯೋತಿ ಹೊಸೂರ*
**ಪುಟ :** ೬೪ **ಬೆಲೆ : ರೂ.** ೪೫
**ಕಾಲಗತಿ ಪ್ರಕಾಶನ,** ರಾಯಬಾಗ ಮತ್ತು ಬೆಳಗಾವಿ

**ಸ್ಮರಣಾಂಜಲಿ** (ದಿ|| ಎಂ. ಚಂದ್ರಶೇಖರ್ ಸ್ಮರಣಾರ್ಥ)
*ಸಂ. ಪ್ರೊ|| ಬಿ. ಆರ್. ವಿಜಯಶೇಖರ್*
**ಪುಟ :** ೬೮

**ಭ್ರೂಣದ ಲಿಂಗ ನಿರ್ಧಾರ ಬೇಡ**
*ಡಾ|| ಸಂಜೀವ ಕುಲಕರ್ಣಿ*
**ಪುಟ :** ೩೬ **ಬೆಲೆ : ರೂ.** ೧೦
**ನೆರವು,** ೧೬೬, ಚಾಮುಂಡಿನಗರ, ಗಿರಿನಗರ ೨ನೇ ಘಟ್ಟ, ಬೆಂಗಳೂರು - ೫೬೦ ೦೮೫

**ಕನ್ನಡ ಉಳಿಸಿ ಬೆಳಸುವ ಬಗೆ** (ಲೇಖನ ಸಂಗ್ರಹ)
*ಶಿಕಾರಿಪುರ ಕೆ. ಹರಿಹರೇಶ್ವರ*
**ಪುಟ :** ೧೮೮ **ಬೆಲೆ : ರೂ.** ೧೦೦

**ಮೋಡ ಕರಗಿದ ಮೇಲೆ ಮತ್ತು ಇತರ ಕತೆಗಳು**
*ಡಾ|| ಅಶ್ವತ್ಥ ನಾ. ರಾವ್*
**ಪುಟ :** ೨೧೨ **ಬೆಲೆ : ರೂ.** ೧೫೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಂವಹನ,** ನಂ. ೧೨/೧ಎ, ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಮಪೇಟೆ, ಮೈಸೂರು - ೧

**''ಕಲಿಕೆ-ಗಳಿಕೆ'' ಮತ್ತು ವಿದ್ಯಾರ್ಥಿಗಳ ಮೂಲಕ ಸಾಕ್ಷರತಾ ಯೋಜನೆಗಳ ಅನುಷ್ಠಾನ**
*ಎಂ. ಕೆ. ನೇಸರಗಿ*
**ಪುಟ :** ೫೬ **ಬೆಲೆ : ರೂ.** ೪೦
ಎಂ. ಎಂ. ನೇಸರಗಿ, ೧೬೬೮, ಆಂಜನೇಯನಗರ, ಸೆಕ್ಟರ್ ೮, ಮಾಳಮಾರುತಿ ಬಡಾವಣೆ, ಬೆಳಗಾವಿ -೧೬

ಮತ್ತು ಅವುಗಳ ಪರಿಣಾಮವನ್ನು ಪ್ರದರ್ಶಿಸಿ ಹೀಗೆ ಯಾರೂ ಮಾಡಬಾರದೆಂಬ ನೀತಿಯನ್ನು ಸೂಚ್ಯವಾಗಿ ತಿಳಿಸುತ್ತವೆ. ಸಂಗ್ಯಾ-ಗಂಗಿಯಂತೆ ನಾವು ನಡೆಯ ಬಾರದು, ಹಾಗೆ ನಡೆದರೆ ಅಪಾಯ ತಪ್ಪಿದ್ದಲ್ಲ ಎಂದು ಸಂಗ್ಯಾಬಾಳ್ಯಾ ಕಥೆಯಲ್ಲಿ ಎಲ್ಲಿಯೂ ಹೇಳುವುದಿಲ್ಲ. ಆದರೆ ಗಂಗಿ ಅವಮಾನಿತಳಾಗಿ ಎಲ್ಲವನ್ನೂ ಕಳೆದು ಕೊಂಡು ತವರುಮನೆ ಸೇರುವ ಮತ್ತು ಸಂಗ್ಯಾ ಪ್ರಾಣ ಭಿಕ್ಷೆ ಬೇಡುವ ದೃಶ್ಯಗಳೆರಡೂ ಪ್ರೇಕ್ಷಕರ ಮನಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ. ಇಂಥ ತಪ್ಪು ಮಾಡ ಬಾರದೆಂಬ ಎಚ್ಚರ ಮನಸ್ಸನ್ನು ಆವರಿಸುತ್ತದೆ. ಸಂಗ್ಯಾ ಮೂಲತಃ ಕಾಮುಕನಲ್ಲ. ಗಂಗಿಯನ್ನು ಪ್ರೀತಿಸಿ ಆಕಸ್ಮಿಕವಾಗಿ ತಪ್ಪು ಮಾಡುತ್ತಾನೆ. ಸಾಮಾಜಿಕ ಮೌಲ್ಯಕ್ಕೆ ಬದ್ಧಳಾದ ಗಂಗಿ ಮೊದಲು ಹಿಂಜರಿದರೂ ತನ್ನ ಅತೃಪ್ತ ಪ್ರಣಯ ನೀಗಿಸಿ ಕೊಳ್ಳಲು ಹಾದರಕ್ಕಿಳಿಯುತ್ತಾಳೆ. 'ನಡಿ ನಡಿ ಆಲಯಕ' 'ಸಂಗ್ಯಾ ನೀವು ತಡವ ಮಾಡೂದ್ಯಾಕ' ಎಂದು ಹೇಳುವಲ್ಲಿ ಈ ಧ್ವನಿ ಅಡಗಿದೆ. 'ಹಾದರ ಮಾಡಿದರೆ ಹಾಳಾಗುವುದು ನಿಶ್ಚಿತ' ಎನ್ನುವ ಸಾಮಾಜಿಕ ಮೌಲ್ಯ ಮತ್ತು ಅತೃಪ್ತಿಯ ಹೆಣ್ಣು ಹಾದರ ಮಾಡುತ್ತಾಳೆ ಎಂಬ ಕಲ್ಪನೆ ಈ ಕಥೆಯಲ್ಲಿ ಉತ್ತಮವಾಗಿ ಮೂಡಿಬಂದಿವೆ.

'ರೂಪಸೇನ' ಕಥೆ ಸಂಗ್ಯಾ ಬಾಳ್ಯಾ ಕಥೆಗೆ ವಿರೋಧ ವಾಗಿದೆ. ಸಂಗ್ಯಾ ಬಾಳ್ಯಾದಲ್ಲಿ ಗಂಡು ಹೆಣ್ಣನ್ನು ಹಾದರ ಕ್ಕಿಳಿಸಿದರೆ, ರೂಪಸೇನದಲ್ಲಿ ಹೆಣ್ಣು ಗಂಡಸನ್ನು ಹಾದರ ಕ್ಕಿಳಿಸುತ್ತಾಳೆ. ಸಿಪಾಯಿ ರಾಮಸಿಂಗನ ಮೇಲೆ ವೇಶ್ಯೆ ಕಮಲಾಕ್ಷಿ ಮನಸ್ಸು ಮಾಡಿದಾಗ ಆತನು ತಿರಸ್ಕರಿಸುತ್ತಾನೆ. ಹೆಣ್ಣು-ಗಂಡು, ಮೋಹ-ಮಾಯೆಗಳ ಚರ್ಚೆಯಾಗಿ ಕೊನೆಗೆ ಕಮಲಾಕ್ಷಿಯ ಕೈಸೆರೆಯಾಗಿ ಮನೆಯಲ್ಲಿ ಅವಳಿಂದಲೇ ಕೊಲೆಯಾಗುತ್ತಾನೆ. ಗ್ರಾಮಗಳಲ್ಲಿ ಹಾದರ ಮಾಡಿದವರಿಗೆ ಶಿಕ್ಷೆಯೆಂದರೆ 'ಕೊಲೆ' ಎಂಬ ನೀತಿಯನ್ನು ಈ ಕಥೆ ಸಾರಿ ಹೇಳುತ್ತದೆ.

'ಬಸವಂತ ಬಲವಂತ' ಕಾಲ್ಪನಿಕ ಸಣ್ಣಾಟವಾಗಿದ್ದು ಇಲ್ಲಿಯೂ ಹಾದರದ ಕಥೆ ಬರುತ್ತದೆ. ಆದರೆ 'ಸಂಗ್ಯಾ ಬಾಳ್ಯಾ', 'ರೂಪಸೇನ'ಗಳಲ್ಲಿ ಎರಡು ಕುಟುಂಬಗಳ ನಡುವೆ ಅನೈತಿಕ ಪ್ರಣಯ ನಡೆದರೆ ಇಲ್ಲಿ ಒಂದೇ ಕುಟುಂಬದೊಳಗೆ ಅದು ನಡೆಯುತ್ತದೆ. ಗಂಡನಿಂದ ಕಾಮತೃಪ್ತಿ ಕಾಣದ ತಾರಾವತಿ ಮೈದುನನನ್ನೇ ಕಾಮನಾಟಕ್ಕೆ ಕರೆಯುತ್ತಾಳೆ. ಅತ್ತಿಗೆಯೆಂದರೆ ತಾಯಿ ಇದ್ದಂತೆ; ಇಂಥ ಅನೀತಿ ಕೆಲಸ ನನ್ನಿಂದಾಗದು ಎಂದು ಬಲವಂತ ತಿರಸ್ಕರಿಸಲು, ತನಗೆ ಸಿಗಲಾರದ ಪ್ರೀತಿ ಇನ್ನೊಬ್ಬರಿಗೂ ಸಿಗಬಾರದು ಎಂಬ ಸೇಡಿನಿಂದ ಮೈದುನನ ಮನುಷ್ಯ ರೂಪವನ್ನೇ ಕಳಚಿ ಮಾಟದಿಂದ ನಾಯಿಯನ್ನಾಗಿ ಮಾಡುತ್ತಾಳೆ. ಸದ್ಗುಣವಂತ ಬಲವಂತನಿಗೆ ಮುಂದೆ ರಾಜನ ಪುತ್ರಿ ಪೂಲವತಿ ಮದುವೆ ಯಾಗುತ್ತಾಳೆ. ಒಲಿದರೆ ನಾರಿ ಮುನಿದರೆ ಮಾರಿ, ಅತ್ತಿಗೆಯೆಂದರೆ ತಾಯಿ ಸಮಾನ, ಸದ್ಗುಣಗಳಿಗೆ ಸದಾಕಾಲ ಒಳ್ಳೆಯದಾಗುತ್ತದೆ – ಎಂಬ ಮೂರು ಸಾಮಾಜಿಕ ಮೌಲ್ಯಗಳು ಈ ಕಥೆಯಲ್ಲಿ ಅಡಕವಾಗಿವೆ.

'ಕಟ್ಟಿ ಚೆನ್ನ' ಮೇಲಿನ ಮೂರಕ್ಕೂ ಭಿನ್ನವಾಗಿ ನಿಲ್ಲುತ್ತದೆ. 'ಸಮಾಜದಲ್ಲಿ ಸರ್ವರೂ ಸಮಾನರು' ಸಂಘರ್ಷಮಯ ಕಥಾವಸ್ತುವಿದ್ದು ಮೇಲುವರ್ಗದವರ ದಬ್ಬಾಳಿಕೆಯನ್ನು ಮುರಿದು ನಾಶಮಾಡುವ ಪ್ರಯತ್ನ ಈ ಕಥೆಯಲ್ಲಿದೆ. ಎತ್ತಿನ ಮೇಲೆ ಗೌಡರೊಬ್ಬರೇ ಹತ್ತ ಬೇಕು. ಮತ್ತಾರೂ ತಮ್ಮ ತಮ್ಮ ಎತ್ತಿನ ಮೇಲೆಯೂ ಕೂಡ ಹತ್ತಬಾರದೆಂಬ ಇಲ್ಲಿಯ ಮಾತು ಕೆಳವರ್ಗ ದವರ ಮೇಲಾಗುವ ಶೋಷಣೆಯನ್ನು ತಿಳಿಸುತ್ತದೆ. ಎಲ್ಲರೂ ಹತ್ತಬಹುದೆಂಬ ಕ್ರಾಂತಿಕಾರಕ ಭಾವನೆ ತುಂಬುವ ಪ್ರಯತ್ನ ಈ ಕಥೆಯಲ್ಲಿದೆ.

ದಾಸ ಸಂಪ್ರದಾಯ ಹಾಗೂ ಶರಣ ಸಂಪ್ರದಾಯದ ಸಣ್ಣಾಟಗಳಲ್ಲಿಯೂ ಪ್ರೀತಿ ಪ್ರಣಯಕ್ಕೆ ಸಾಕಷ್ಟು ಅವಕಾಶವುಂಟು. ಆದರೆ ಇಲ್ಲಿ ಭಕ್ತಿಯೇ ಮುಖ್ಯ ಅಂಶ ವಾಗಿರುತ್ತದೆ. ಮನುಷ್ಯನ ವಿಕಾರ ಭಾವನೆಗಳಿಂದ ದೋಷಗಳುಂಟಾಗಿ ಸಮಾಜದಲ್ಲಿ ಹಾಹಾಕಾರ ಉಂಟಾ ದಾಗ ಸುಖ ಶಾಂತಿ ನೆಮ್ಮದಿ ಕದಲುತ್ತದೆ. ಅಂಥ ವೇಳೆ ಯಲ್ಲಿ ಸಮಾಧಾನದಿಂದ ಶಾಂತಿಯಿಂದ ಭಕ್ತಿಯಿಂದ ವರ್ತಿಸಬೇಕು. ಅಂದಾಗ ಅನಾಹುತವಾಗುವುದಿಲ್ಲ. ಕೆಟ್ಟವರನ್ನು ತಿದ್ದಬೇಕು. ಆಗಲೇ ಸಮಾಜದಲ್ಲಿ ಸಂಸ್ಕೃತಿ ಉಳಿಯಲು ಬೆಳೆಯಲು ಸಾಧ್ಯ, ಎನ್ನುವ ನೀತಿಯ ಮೌಲ್ಯಗಳನ್ನು ಈ ಸಣ್ಣಾಟಗಳು ಸಾರುತ್ತವೆ. ಅಲ್ಲದೆ ಸದ್ಗುಣಗಳಿಂದ ಬದುಕಿ ಸಮಾಜದಲ್ಲಿ ಶಾಂತತೆ ಕಾಪಾಡಿಕೊಳ್ಳಬೇಕೆಂದು ಹೇಳುವುದರೊಂದಿಗೆ ಮತ ಪ್ರಚಾರ ಕೆಲಸವನ್ನು ಮಾಡುತ್ತವೆ.

ಪ್ರೀತಿ-ಹಾದರ, ದ್ವೇಷ-ಕೊಲೆ, ಶೋಷಣೆ-ಸಂಘರ್ಷ, ಭಕ್ತಿ-ಮತೀಯತೆಯಂತಹ ಮೌಲ್ಯಗಳು ಸಣ್ಣಾಟಗಳಲ್ಲಿ ಪ್ರಯೋಗಗೊಂಡು ಹಳೆ ಬಯಲಾಟ ರಂಗಭೂಮಿಯಿಂದ ಬೇಸತ್ತವರಿಗೆ ಆನಂದ ನೀಡಿದವು. ನ್ಯಾಯ-ಅನ್ಯಾಯ, ನೀತಿಪ್ರಜ್ಞೆ ಮೂಡಿಸಿದ ಸಣ್ಣಾಟಗಳು ಗ್ರಾಮೀಣರ ಬದುಕಿಗೆ ದಾರಿದೀಪಗಳಾದವು ಹಾಗೂ ನೀತಿಪಾಠಗಳಾದವು.

**ಸಮಾರೋಪ**

ಆದಿಮಾನವನು ಕುಣಿತ ಮಾಧ್ಯಮದ ಮೂಲಕ ಸುಖದುಃಖಗಳನ್ನು ಹಂಚಿಕೊಂಡಿದ್ದರಿಂದ ಜನಪದ ನಾಟಕಗಳು ಜನಪದರ ಜೀವನ ಮೂಲದಿಂದ ಹುಟ್ಟಿ ಬಂದಿವೆ. ಹೀಗಾಗಿ ಬಯಲಾಟಗಳು ದ್ರಾವಿಡರ ಬಳುವಳಿ ಯಾಗಿವೆ. ಪುರವಂತರ ಕುಣಿತ, ದಟ್ಟಿ ಕುಣಿತ, ಕರಡಿ ಕುಣಿತಗಳಿಗೆ ವೇಷಭೂಷಣ ತೊಡಿಸಿ ತಾಳ ಲಯಕ್ಕೆ ತಕ್ಕಂತೆ ನಿರ್ಮಿತವಾದ ಹಾಡುಗಳು ಬಯಲಾಟಕ್ಕೆ ಪ್ರೇರಣೆಗಳಾಗಿ, ನೃತ್ಯ ಅಭಿನಯ, ಗೀತ ಸಂಭಾಷಣೆಗಳು ಕೂಡಿಕೊಂಡವು. ಆದ್ದರಿಂದ ಜನಪದ ರಂಗಭೂಮಿ ಅಭಿಜಾತ ಕಲೆಗಿಂತ ಪ್ರಾಚೀನ ಹಾಗೂ ವಿಶೇಷ ವಾದದ್ದು, ಬಯಲಾಟಗಳಲ್ಲಿ ದೊಡ್ಡಾಟ, ಸಣ್ಣಾಟ ಹಾಗೂ ಯಕ್ಷಗಾನವೆಂದು ಮೂರು ಪ್ರಕಾರ. ಕರಾವಳಿ ಭಾಗದಲ್ಲಿ ಯಕ್ಷಗಾನವಿದ್ದರೆ, ಉತ್ತರ ಕರ್ನಾಟಕದಲ್ಲಿ ದೊಡ್ಡಾಟ ಸಣ್ಣಾಟಗಳಿವೆ. ಬಳ್ಳಾರಿ, ರಾಯಚೂರು, ಬೀದರ, ಬಿಜಾಪೂರ, ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳು ಬಯಲಾಟಕ್ಕೆ ಪ್ರಸಿದ್ಧವಾಗಿವೆ.

ಸಣ್ಣಾಟಗಳು ಬದುಕು ಹಾಗೂ ಸಾಮಾಜಿಕ ಘಟನೆ ಗಳನ್ನು ವಸ್ತು ಮಾಡಿಕೊಂಡದ್ದಲ್ಲದೆ ಭಕ್ತಿ ಮತ್ತು ಮತೀಯತೆಯನ್ನು ಸ್ವೀಕರಿಸಿ ಪ್ರಭಾವ ಬೀರಿದವು. ಆರಂಭದ ಸಣ್ಣಾಟಗಳು ತೋಂಡಿ ಸಂಪ್ರದಾಯಕ್ಕೆ ಸೇರಿದ್ದು ಆಮೇಲೆ ಲಿಖಿತರೂಪ ಪಡೆದಿವೆ.

ಮುಂದಿನ ಪುಟಕ್ಕೆ

# ಕಾರ್ಯ ಚೋದನೆ

ಮಂಕುತಿಮ್ಮನ ಕಗ್ಗದಲ್ಲಿ ಪ್ರಸ್ತಾಪವಾಗಿರುವ ವಿಷಯಗಳು ಭಾರತೀಯ ದಾರ್ಶನಿಕತೆಯ ಪುನರಾವರ್ತನೆ ಎಂಬ ಭಾವನೆ ಅನೇಕರಲ್ಲಿದೆ. ಆದರೆ ಆ ಮಾತು ಪೂರ್ಣ ಸತ್ಯವಲ್ಲ. ಧಾರ್ಮಿಕ ಬದುಕಿನ ವ್ಯಾಪ್ತಿಯಾಚೆಗಿನ ನಿಸರ್ಗದ ಚೋದ್ಯಗಳು 'ಮಂಕುತಿಮ್ಮ'ನ ಗಮನ ಸೆಳೆದಿರುವ ಬಗ್ಗೆ ಅನೇಕ ಪುರಾವೆಗಳಿವೆ. ನಮ್ಮ ಬದುಕಿಗೆ ಮಾರ್ಗದರ್ಶನ ಪ್ರಕೃತಿಯೂ ಮಾಡಬಲ್ಲದೆಂಬ ನಿಲುವು ಡಿ.ವಿ.ಜಿ.ಯವರಿಗಿದ್ದ ಬಗ್ಗೆ ಮಂಕುತಿಮ್ಮನ ಕಗ್ಗದಾಚೆಗೂ ಪುರಾವೆಗಳಿವೆ. ಅವರ ಪದ್ಯಗಳಲ್ಲಿ, ವಿಶೇಷವಾಗಿ 'ವನಸುಮ' ಪದ್ಯದಲ್ಲಿ ಕಾಡಿನಲ್ಲಿ ಅರಳುವ ಮಲ್ಲಿಗೆ ಹಾಗೂ ಹೂಹಣ್ಣುಗಳನ್ನು ನೀಡುವ ಮರದ ಒಳಿತು – ನೈಜವಾದ ಒಳ್ಳೆ ಎಂದು ಡಿ.ವಿ.ಜಿ. ಸಾರುತ್ತಾರೆ. ಅದು ನಮ್ಮ ಬದುಕಿನ ಆದರ್ಶವಾಗಬೇಕೆಂಬ ಅವರ ಅದೇ ಹಂಬಲವನ್ನು ಬಿಂಬಿಸುವ ಮಂಕುತಿಮ್ಮನ ಕಗ್ಗದ ಈ ಪದ್ಯವನ್ನು ನೋಡೋಣ :

ಅರಣ್ಯಕದ ಪುಷ್ಪಗಳ ಮೂಸುವವರಾರು
ಅರಿಹರು ಪತಗದುಡುಪನು ಹುಡುಕಿ ಮೆಚ್ಚಲ್ ?
ಬೇರೊಬ್ಬರೆಣಿಕೆಯಿಲ್ಲದೆ ಪ್ರಕೃತಿ ತನಗೆಂದೆ।
ಸ್ವಾರಸ್ಯವೆಸಗುವಳೊ ! – ಮಂಕುತಿಮ್ಮ ॥ (ಪದ್ಯಸಂಖ್ಯೆ : ೫೬೬)

ಈ ಪದ್ಯವನ್ನು ನಮ್ಮ ಬದುಕಿಗೆ ಅನ್ವಯಿಸಿಕೊಳ್ಳುವ ಮೊದಲು ಈ ಅಂಶಗಳನ್ನು ಗಮನಿಸಬೇಕು.

* ನಾವು ಮಾಡುವ ಕೆಲಸಗಳಿಗೆ ಕಚ್ಚಾ ಸಾಮಗ್ರಿಯನ್ನು ನಮ್ಮನ್ನು ಆವರಿಸಿರುವ ನಿಸರ್ಗವೇ ಒದಗಿಸುತ್ತದೆ. ಪ್ರತಿಯೊಂದು ಕೆಲಸವೂ ಅದರೊಂದಿಗೆ ಒಡನಾಟವೇ ! ನಾವು ಮಾಡುವ ಆಲೋಚನೆಗೆ ಕೂಡ ಸಾಮಗ್ರಿಯೊದಗುವುದು ನಿಸರ್ಗದ ಮೂಲಕವೆ ! ಹಾಗೆ ನೋಡಿದರೆ ನಾವು ಕಾರ್ಯ ಮಾಡುವ ಸಾಧನವಾದ ಕಾಯವೂ ನಿಸರ್ಗದ ಒಂದಂಗ ಆಗಿರುವುದು ವಿದಿತ.

* ನಾವು ಕಾರ್ಯ ಮಾಡಲು ಬೇಕಾದ ಒತ್ತಾಸೆ ಅನೇಕ ವೇಳೆ ಆ ಕಾರ್ಯವನ್ನು ಮೆಚ್ಚುವ ಮಂದಿಯ ಪ್ರೋತ್ಸಾಹವನ್ನು ಅವಲಂಬಿಸಿರುತ್ತದೆ. ಈ ಪ್ರೋತ್ಸಾಹ, ನಾವೆಂದು ಭಾವಿಸುವ ನಮ್ಮ ದೇಹ ಮನಸ್ಸುಗಳಾಚೆಗಿನದು. ಕಾರ್ಯೋತ್ಸಾಹಕೆ ನಾವು ಪರಾವಲಂಬಿಗಳಾಗಿರುವುದು ಕಚ್ಚಾಸಾಮಗ್ರಿಗಷ್ಟೇ ಅಲ್ಲ, ಮೆಚ್ಚುಗೆಗಾಗಿಯೂ ಎಂಬಂಶ ಮೇಲುನೋಟಕ್ಕೆ ಹೊಳೆಯುವುದಿಲ್ಲವಾದರೂ ಸತ್ಯ.

''ನಾನು ಒಬ್ಬಂಟಿಯಾಗಿ ಕೆಲಸಮಾಡುವುದು ನನ್ನ ಜೀವನಶೈಲಿಯಾಗಿರುವುದರಿಂದ ಮನುಷ್ಯ ಸಂಬಂಧದಿಂದ ಆಗುವ ಆನಂದ ನನಗೆ ಲಭ್ಯವಾಗುವ ಸಾಧ್ಯತೆ ಕಡಿಮೆ; ಇದು ನನಗಾದ ನಷ್ಟ. ಆದರೆ ಏಕಾಂಗಿಯಾಗಿ ಕೆಲಸಮಾಡುವುದರಿಂದ ನನಗೆ ಲಾಭವೂ ಇದೆ. ನನ್ನ ಕಾರ್ಯೋತ್ಸಾಹ ಇತರರು ನೀಡುವ ಪ್ರೋತ್ಸಾಹದ ಊರುಟುಗಲ್ಲಿನ ಮೇಲೆ ನಿಂತಿರದೆ ನನ್ನ ಪಾಡಿಗೆ ನಾನು ಕೆಲಸಮಾಡಲು ಸಾಧ್ಯವಾಗಿದೆ'' – ಎಂಬರ್ಥದ ಮಾತುಗಳನ್ನು ಆಲ್ಬರ್ಟ್ ಐನ್‌ಸ್ಟೈನ್ ಹೇಳಿದ್ದಾರೆ. ಅವರ ಕಾರ್ಯಶ್ರದ್ಧೆ ಪರಾವಲಂಬಿಯಲ್ಲ. ಮಂಕುತಿಮ್ಮನ ಕಗ್ಗದಲ್ಲಿ ಪ್ರಸ್ತಾಪವಾಗಿರುವ ಹಾಗೆ 'ಅರಳುವ ಸಾಮರ್ಥ್ಯವಿರುವ ಕಾರಣದಿಂದಲೇ ಅರಳುವ ಕಾಡಿನ ಹೂವಿಗೆ ಯಾರೂ ಮೂಸದಿದ್ದರೂ ಅಡ್ಡಿಯಿಲ್ಲ. ಚಿಟ್ಟೆಯ ರೆಕ್ಕೆಯ ಮೇಲಿನ ಚಿತ್ತಾರದ ಹಾಗೆ ಜನರ ಮನ್ನಣೆ ಹಾಗೂ ಖಂಡನೆಗಳು ಅಪ್ರಸ್ತುತ. ಸ್ವಾರಸ್ಯದ ಸಾರ್ಥಕತೆ ಇರುವುದು ಸೃಷ್ಟಿಸುವ ಕ್ರಿಯೆಯಲ್ಲಿ; ಮೆಚ್ಚಿ ಪ್ರೋತ್ಸಾಹಿಸುವ ಉದ್ದಿಷ್ಟ ಗುಂಪಿನ ಸಂತುಷ್ಟಿಯಲ್ಲಿ ಅಲ್ಲ'

ಈ ಬಗೆಯ ಪ್ರೋತ್ಸಾಹವನ್ನು ಅಂತರಂಗದಿಂದ ಚಿಮ್ಮಿದ ಉತ್ಸುಕತೆ ಎನ್ನೋಣ. ಅದನ್ನು ಒಪ್ಪುವುದಾದರೆ, ನಮ್ಮ ಕೆಲಸಕ್ಕೆ ಪ್ರಚೋದನೆ ಎರಡು ರೀತಿಯಿಂದ ಆದದ್ದು.

೧. ಅನೇಕರಿಗೆ ಸಂತಸವನ್ನು ನೀಡಬಲ್ಲೆನೆಂಬ ನಂಬಿಕೆಯಿಂದ ಬಂದಂತಹ, ಅನೇಕರನ್ನು ಅವಲಂಬಿಸಿದ – ಬಾಹ್ಯಪ್ರಚೋದನೆ.

೨. ನನಗಿರುವ ಸಾಮರ್ಥ್ಯದಿಂದ ನಾನು ಒಳ್ಳೆಯ ಕೆಲಸ ಮಾಡಬಲ್ಲೆ. ಪ್ರಕೃತಿಯಿಂದ ನನ್ನ ದೇಹ ಪಡೆದ ಸಾಮರ್ಥ್ಯದ ಸಾರ್ಥಕ ಬಳಕೆಯೆಂದರೆ ಅದೊಂದೆ – ಎಂಬ ಭಾವದ – ಆಂತರಿಕ ಪ್ರಚೋದನೆ.

ನಮ್ಮ ದೈನಂದಿನ ಕಾರ್ಯವಾಗಲಿ, ವಿಶೇಷ ಸಂದರ್ಭದಲ್ಲಿ ಕೈಗೊಳ್ಳುವ ಕೆಲಸಗಳಾಗಲಿ, ಇಲ್ಲವೆ ಆಸೆಪಟ್ಟು ಕೈಗೊಳ್ಳುವ ಕೆಲಸಗಳಾಗಲಿ – ಈ ಬಾಹ್ಯ ಪ್ರಚೋದನೆ, ಆಂತರಿಕ ಪ್ರಚೋದನೆ, ಇಲ್ಲವೆ ಈ ಎರಡು ಪ್ರಚೋದನೆಗಳ ಮಿಶ್ರಣದಿಂದಾದದ್ದು. ಆದರೆ, ತಂತಾನೆ ಈ ಪ್ರಚೋದನೆಯಿಲ್ಲದೆ ನಡೆಯುವ ಕಾರ್ಯವೆಂದರೆ – ಉಸಿರಾಟದಂತಹ ಅನೈಚ್ಛಿಕ ಸ್ನಾಯುಗಳ ಕಾರ್ಯಮಾತ್ರ.

* ಪ್ರಕೃತಿಯಲ್ಲಿ ನಡೆಯುವ ವಿದ್ಯಮಾನಗಳಾವುವೂ ಬಾಹ್ಯ ಪ್ರಚೋದನೆಯಿಂದ ನಡೆಯುವಂತಹವಲ್ಲ. ನಿಸರ್ಗದ ಬಹುಭಾಗ ನಿರ್ಜೀವಿ ಜಗತ್ತು. ಜೀವಿಗಳ ಉಗಮದ ಮೊದಲಿನಿಂದಲೂ ನಿರತವಾಗಿರುವ ನಿಸರ್ಗಕಾರ್ಯ, ಜೀವಿಗಳೆಲ್ಲವೂ ನಿರ್ಗಮಿಸಿದ ನಂತರವೂ ಮುಂದುವರಿಯುವ ವಿದ್ಯಮಾನ. ಹೀಗಾಗಿ ಈ ಕಾರ್ಯದಲ್ಲಿ ಪ್ರೇಕ್ಷಕರ ಅಪೇಕ್ಷೆ, ಆಕ್ಷೇಪ, ಇಲ್ಲವೆ ಪ್ರೋತ್ಸಾಹ ಎಲ್ಲವೂ ಅಪ್ರಸಕ್ತ. ಆ ಪ್ರಕೃತಿಯ ಅಂಗವಾದ ನಾವು ಮಾತ್ರ ಸಹಜೀವಿಗಳ ಬೆಂಬಲ ಹಾಗೂ ಮೆಚ್ಚುಗೆಯನ್ನು ಅವಲಂಬಿಸಬೇಕೇಕೆ ?

* ಆಂತರಿಕ ಪ್ರಚೋದನೆಗಳನ್ನು ಅವಲಂಬಿಸುವುದರಿಂದ ಬಾಹ್ಯ ಪ್ರಚೋದನೆಗಳಲ್ಲಿಲ್ಲದ ಕೆಲವು ಅನುಕೂಲಗಳಿವೆ.

ಬಾಹ್ಯಪ್ರಚೋದನೆಯ ಯಶಸ್ಸು ಅನಿಶ್ಚಿತವಾದದ್ದು – ಉದ್ದಿಷ್ಟ ಗುಂಪಿನ ಅಭಿರುಚಿಯನ್ನು ಊಹಿಸಿ ಕೈಗೊಂಡದ್ದು ಅಲ್ಲೇ ದೋಷವಿರಬಹುದು ಅಥವಾ ಉದ್ದಿಷ್ಟ ಗುಂಪಿನ ಇಷ್ಟಕ್ಕೆ ತಕ್ಕಂತಹ ಕಾರ್ಯ ಕೈಗೊಂಡರೂ ಉದ್ದಿಷ್ಟ ಗುಂಪಿನ ಗಮನಕ್ಕೆ ಬಾರದೆ ಹೋಗುವ ಸಂದರ್ಭಗಳೂ ಇರುತ್ತವೆ. ನಾವು ಚಿಂತಾಕ್ರಾಂತರಾಗಿದ್ದಾಗ ನಮ್ಮನ್ನು ನಗಿಸಲೆಂದೇ ಹೇಳಿದ ನಗೆಹನಿ ನಮ್ಮಲ್ಲಿ ಕಿರುನಗೆಯನ್ನೂ ಮೂಡಿಸಲಾರದೆ ವಿಫಲವಾಗುವುದಲ್ಲವೇ ?

'ಯಾರು ಒಲಿದರೇನು, ನಮಗಿನ್ಯಾರು ಮುನಿದರೇನು ?' ಎಂಬ ನಿಲುವಿನಿಂದ ಕೈಗೊಳ್ಳುವ ಆಂತರಿಕ ಪ್ರಚೋದನೆಗೆ ಇತರರ ಹಂಗಿಲ್ಲ. ತನ್ನಲ್ಲಿಯೇ ಸಂತುಷ್ಟಿ ಕಂಡುಕೊಳ್ಳುವ ಈ ವಿಧಾನದಲ್ಲಿ ನಿರಾಶೆ ಹತಾಶೆಗಳಿಲ್ಲ.

* ತುಷ್ಟಿಯೆಂದರೆ ತನ್ನ ಮಟ್ಟದಲ್ಲಿ ಕಂಡುಕೊಳ್ಳುವ ತೃಪ್ತಿ. ತುಷ್ಟಿಯಿಂದಲೋ ತೋಷ. ತೋಷದ ವಿಶೇಷವೇ ಸಂತೋಷ.

ಪ್ರೊ॥ ಎಮ್. ಆರ್. ನಾಗರಾಜು
ಎಫ್-೩, ಎಸ್ ಎಫ್ ಎಸ್ ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

---

*ಹಿಂದಿನ ಪುಟದಿಂದ (ಸಣ್ಣಾಟ)*

ಸರಳ, ಸಂಕ್ಷಿಪ್ತ, ನಿಗದಿತ ಅವಧಿಯಲ್ಲಿ ಪ್ರಯೋಗಗೊಳ್ಳುವ ಬಯಲಾಟದ ರೂಪಕ್ಕೆ ಸಣ್ಣಾಟ ಅಥವಾ ಡಪ್ಪಿನಾಟವೆಂದು ಕರೆದರು. ತರ್ಕಬದ್ಧ ಸಂಭಾಷಣೆಯಿದ್ದು ಲಾವಣಿ, ಸ್ವರವಚನ, ತತ್ವಪದ, ದಾಸರಪದ, ಭಜನೆ ಪದಗಳ ಧಾಟಿಗಳನ್ನು ಬಳಸಿಕೊಂಡಿವೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಜನಪದ ಮತ್ತು ಭಕ್ತಿ ಪಂಥದ ಸಣ್ಣಾಟಗಳು ಮಾನವರಲ್ಲಿ ನೀತಿ-ನ್ಯಾಯ, ಸಂಸ್ಕಾರ-ಸಂಸ್ಕೃತಿ, ಬೆಳೆಸುವಲ್ಲಿ ಸಹಕಾರಿಯಾಗಿದ್ದರಿಂದ ಸಾಮಾಜಿಕ ಮೌಲ್ಯಗಳು ಸೇರಿಕೊಂಡವು. ಸಮಾಜದ ಸಂಪೂರ್ಣ ಚಿತ್ರಣವನ್ನು ಪ್ರದರ್ಶಿಸಿ ಒಳ್ಳೆಯ, ಕೆಟ್ಟುದರ ಪ್ರಸಂಗ-ಪರಿಣಾಮ ತಿಳಿಸಿ ಸಂಸ್ಕೃತಿಯನ್ನು ಪ್ರಸಾರ ಮಾಡಿದ್ದು ಸಣ್ಣಾಟಗಳ ಕೊಡುಗೆಯಾಗಿದೆ.

ನಮ್ಮ ದೇಶವು ಜನಪದ ಕಲೆಗಳ ಕಣಜ. ಇಲ್ಲಿ ಜನಪದ ರಂಗಕಲೆಗಳಿಗೆ ಕೊರತೆಯಿಲ್ಲ, ನೋಡುವವರಿಲ್ಲದೆ ಆಡುವವರು ನಿರುತ್ಸಾಹಗೊಳ್ಳುತ್ತಿದ್ದಾರೆ. ಅವರಿಗೆ ಪ್ರೋತ್ಸಾಹ ದೊರೆಯುವಂತಾದರೆ ಕಲೆ ಉಳಿಯುತ್ತದೆ ಮತ್ತು ಬೆಳೆಯುತ್ತದೆ. ಈ ದಿಶೆಯಲ್ಲಿ ಜನರಿಂದ ಕಲಾವಿದರಿಂದ ಪ್ರಾಮಾಣಿಕ ಪ್ರಯತ್ನ ನಡೆಯಬೇಕು. ಕಲಾಕಾರರಿಗೆ ಒಳ್ಳೆಯ ಅನುಕೂಲ ಹಾಗೂ ಅವಕಾಶಗಳು ಸಿಕ್ಕರೆ ಅವರಿಂದ ಶ್ರೇಷ್ಠ ಮಟ್ಟದ ಸಣ್ಣಾಟಗಳು ಪ್ರದರ್ಶನಗೊಂಡು ಉತ್ತಮ ಸಮಾಜ ನಿರ್ಮಾಣವಾಗಬಹುದೆಂದು ಆಶಿಸಬಹುದಾಗಿದೆ. ಅಲ್ಲದೆ ಸಣ್ಣಾಟಗಳನ್ನು ಹೊಸ ಹೊಸ ತಂತ್ರಗಳಿಗೆ ಅಳವಡಿಸಿಕೊಳ್ಳಬೇಕಾಗಿದೆ. ಈ ದಿಶೆಯಲ್ಲಿ ಜೋಕುಮಾರಸ್ವಾಮಿ, ಟಿಂಗರು ಗುಡ್ಡಣ್ಣ, ಗೊಂದಲಿಗರ ಆಟ, ಲಕ್ಷಾಪತಿ ರಾಜನ ಕಥೆ, ಜೋಗೇರ ಆಟ ಮುಂತಾದವುಗಳು ಯಶಸ್ಸು ಕಂಡಿವೆ. ಚಂಪಾ, ಚಂದ್ರಶೇಖರ ಕಂಬಾರ, ಬಿ. ಜಯಶ್ರೀ ಮುಂತಾದವರು ಸಣ್ಣಾಟದ ತಂತ್ರಗಳನ್ನು ಬಳಸಿ ಹೊಸ ದೃಷ್ಟಿಕೋನ ತೋರಿಸಿದ್ದಾರೆ. ಹೀಗಾಗಿ ಅವರ ನಾಟಕಗಳು ಜನ ಮೆಚ್ಚುಗೆ ಪಡೆದಿವೆ. ಸಣ್ಣಾಟ, ದೊಡ್ಡಾಟಗಳ ನಿರಂತರ ಪ್ರಯೋಗಗಳಿಂದ ಮತ್ತೆ ಸಮಪಾತಳಿಯ ಬಯಲು ಸಂಸ್ಕೃತಿಯನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ.

ಡಾ॥ ಎಚ್. ಆಯ್. ತಿಮ್ಮಾಪೂರ
ಕನ್ನಡ ಪ್ರಾಧ್ಯಾಪಕರು, ಅಂಜುಮಾನ್ ಪದವಿ ಮಹಾವಿದ್ಯಾಲಯ ಧಾರವಾಡ

# ಸಾಮಾಜಿಕ ನ್ಯಾಯ - ಸಾಹಿತ್ಯ

ಆಧುನಿಕ ರಾಷ್ಟ್ರಗಳು ತಮ್ಮನ್ನು ತಾವು ಜನಕಲ್ಯಾಣ ರಾಜ್ಯ ಎಂದು ಘೋಷಿಸಿಕೊಂಡಿರುವುದರಿಂದ 'ಸಾಮಾಜಿಕ ನ್ಯಾಯ'ವನ್ನು ಅವು ತಮ್ಮ ಸಾಂವಿಧಾನಿಕ ಆಶಯವನ್ನಾಗಿ ಅಂಗೀಕರಿಸಿಕೊಂಡಿವೆ. ಭಾರತ ಕೂಡ ಇದಕ್ಕೆ ಹೊರತಲ್ಲ. ನಮಗೆ 'ಸಾಮಾಜಿಕ ನ್ಯಾಯ' ಎಂಬ ಈ ಪರಿಕಲ್ಪನೆ ಅದರ ಮುಖ್ಯ ಅರ್ಥವಲಯದೊಂದಿಗೆ ದೊರೆತದ್ದು ವಸಾಹತುಶಾಹಿ ಶಿಕ್ಷಣದ ಮೂಲಕವೇ. ಹಾಗಾದರೆ ನಮ್ಮ ಪರಂಪರೆಯಲ್ಲಿ 'ಸಾಮಾಜಿಕ ನ್ಯಾಯ'ದ ಕಲ್ಪನೆ ಇರಲೇ ಇಲ್ಲವೇ ? ಇಲ್ಲದೇ ಇಲ್ಲ. ಇಂದು ನಾವು ಯಾವ ಅರ್ಥವ್ಯಾಪ್ತಿಯ ಹಿನ್ನೆಲೆಯೊಳಗೆ 'ಸಾಮಾಜಿಕ ನ್ಯಾಯ'ದ ಬಗ್ಗೆ ಸಾಮಾನ್ಯವಾಗಿ ಮಾತನಾಡುತ್ತೇವೆಯೋ ಅದೇ ಪರಿಧಿಯಲ್ಲಿ ಈ ಪರಿಕಲ್ಪನೆ ಇಲ್ಲದೇ ಇದ್ದರೂ ಸಹ, ಒಟ್ಟಾರೆ 'ಸಾಮಾಜಿಕ ನ್ಯಾಯ'ದ ಆಶಯವುಳ್ಳಂತಹ ಚಿಂತನೆಗಳು ನಮ್ಮ ಪರಂಪರೆಯಲ್ಲಿ ಅಲ್ಲಲ್ಲಿ ಕಾಣಬರುತ್ತವೆ. ಮಾನವೀಯ ಮಿಡಿತವುಳ್ಳ ಕೆಲವು ಮನಸ್ಸುಗಳು ಆ ಬಗ್ಗೆ ತಮ್ಮೆಲ್ಲಾ ಚಾರಿತ್ರಿಕ ಸಂದರ್ಭದ ಒತ್ತಡಗಳನ್ನು ಮೀರಿಯೂ ಅಲ್ಲಲ್ಲಿ ಭರವಸೆಯ ಒರತೆಗಳನ್ನು ಕಾಣಿಸಿವೆ. ಪಂಪನ ಕರ್ಣ, ನಿರ್ನಾಮಿಕೆ, ವಚನಕಾರರ ಚಳವಳಿ, ಅವುಗಳಲ್ಲಿ ಮೂಲಸ್ತರದ ಸಮುದಾಯಗಳು, ವಿಭಿನ್ನ ವೃತ್ತಿ, ಜಾತಿಗಳ ಜನರು ತೊಡಗಿಸಿಕೊಳ್ಳುವ ಮುಖೇನ ಅವರು ತೋರಿದ ದಿಶೆ, ಇದೇ ಹಾದಿಯಲ್ಲಿ ಬಂದ ಹರಿಹರನ ಶರಣರು, ರಾಘವಾಂಕನ ಹೊಲತಿಯರು – ಅವರು ಎತ್ತಿದ ಪ್ರಶ್ನೆಗಳು, ಇವೆಲ್ಲಾ ಈ ಸಂದರ್ಭದಲ್ಲಿ ನೆನಪಾಗುತ್ತವೆ. ಅಂದರೆ ನಮ್ಮ ದೇಸೀಯ ಚಿಂತನೆಯ ಪರಿವಲಯದಲ್ಲಿ 'ಸಾಮಾಜಿಕ ನ್ಯಾಯ'ದ ಕಲ್ಪನೆ – ಅದು ಎಷ್ಟೇ ಕ್ಷೀಣವಾದುದಾದರೂ ಸಹ – ಇತ್ತು ಎಂದು ಒಪ್ಪಿಕೊಳ್ಳಬಹುದು. ಅದರ ಅರಿವಿನ ಆಧಾರದ ಮೇಲೆ ವರ್ತಮಾನದಲ್ಲಿ ನಾವು ಸಮಕಾಲೀನ ಸಂದಿಗ್ಧಗಳನ್ನು ಎದುರಿಸುತ್ತ 'ಸಾಮಾಜಿಕ ನ್ಯಾಯ'ದ ಕಲ್ಪನೆಯನ್ನು ವಿಸ್ತರಿಸಿಕೊಳ್ಳಬಹುದು ಎನಿಸುತ್ತದೆ.

'ಸಾಮಾಜಿಕ ನ್ಯಾಯ'ದ ಪರಿಕಲ್ಪನೆ ಸಂವಾದಿಯಾದದ್ದು. ಅದು ವರ್ತಮಾನದ ಆಶೋತ್ತರ, ಅಪೇಕ್ಷೆಗೆ ತಕ್ಕಂತೆ ಬೇರೆ ಬೇರೆಯಾಗಿ ರೂಪು ಪಡೆಯುತ್ತದೆ. ಅಲ್ಲದೆ ಅದಕ್ಕಿರುವ ರಾಜಕೀಯ, ಸಾಮಾಜಿಕ, ಆರ್ಥಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಆಯಾಮಗಳು ಅದನ್ನು ಬೇರೆ ಬೇರೆ ರೀತಿಯಿಂದ ಕಲ್ಪಿಸುವಂತೆ ಪ್ರೇರೇಪಿಸುತ್ತಿದೆ. ಮುಖ್ಯವಾಗಿ ವರ್ಗ ಮತ್ತು ಜಾತಿಗಳು ಹೆಚ್ಚುಕಡಿಮೆ ಬೇರ್ಪಡಿಸಲಾಗದಂತಹ ಸ್ಥಿತಿಯಲ್ಲಿ ಒಂದುಗೂಡಿರುವ ಭಾರತದಂತಹ ಚಾರಿತ್ರಿಕ ಸನ್ನಿವೇಶವುಳ್ಳ ರಾಷ್ಟ್ರದಲ್ಲಿಯಂತೂ ಇದು ಬಹಳ ಕಷ್ಟದ ಸಂಗತಿಯೆಂದೇ ತೋರುತ್ತದೆ. ಅಲ್ಲದೆ ಬಹುಮಟ್ಟಿಗೆ 'ಸಾಮಾಜಿಕ ನ್ಯಾಯ'ದ ತಾತ್ವಿಕ ಪ್ರಣಾಳಿಯನ್ನು ಬಹು ಸಂಖ್ಯಾಧಾರಿತ ಸಮಾಜವೊಂದು ತನ್ನ ಪ್ರಚ್ಛನ್ನ ಹಿತಾಸಕ್ತಿಗನುಗುಣವಾಗಿ ವ್ಯಾಖ್ಯಾನಿಸುವ ಸಾಧ್ಯತೆಯೂ ಇದೆ. ಇದು ಕೆಲವೊಮ್ಮೆ ಅಲ್ಪಸಾಂಖ್ಯಿಕ ಹಾಗೂ ಕೆಳಸ್ತರದ ಸಮಾಜಗಳ ಸಾಂಸ್ಕೃತಿಕ ಪರಿವೇಷಗಳಿಗೆ ಧಕ್ಕೆ ತರುವಂತಹ ಸಂಭಾವ್ಯತೆಗೂ ಕಾರಣವಾಗುತ್ತದೆ. ಇಂದು ಬಹು ಚರ್ಚಿತ ಸಮಾನ ನಾಗರಿಕ ಸಂಹಿತೆಯ ವಿಧೇಯಕದ ಬಗೆಗಿನ ವಾದ ಪ್ರತಿವಾದಗಳನ್ನು ಇದೇ ಸಂದರ್ಭದಲ್ಲಿ ನೆನೆಯಬಹುದು. ಆದರೆ ಹಾಗೆಂದು ಅರಾಜಕ ಪರಿಸ್ಥಿತಿಯಲ್ಲಿ ಮುಂದುವರೆಯಲು ಕೂಡ ಸಾಧ್ಯವಿಲ್ಲ. ವರ್ತಮಾನದ ತುರ್ತುಗಳಿಗೆ ಸ್ಪಂದಿಸಲೇಬೇಕಿದೆ. ಅದರಲ್ಲಿಯೂ ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳು ವರ್ಗಗಳ ನಡುವಿನ ಅಂತರವನ್ನು ಹೆಚ್ಚಿಸುತ್ತಿರುವಂತಹ, ಈ ಸಂದರ್ಭದಲ್ಲಿ ಜಾತೀಯತೆ, ಕೋಮುವಾದದ ಭೀತಿ, ನಿರುದ್ಯೋಗದ ಛಾಯೆ, ರೈತರ ಆತ್ಮಹತ್ಯಾಸರಣಿಗಳು, ಸಣ್ಣ ಹಾಗೂ ಗುಡಿ ಕೈಗಾರಿಕೆಗಳ ಅವಸಾನ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹೊಣೆಗಾರಿಕೆಯಿಂದ ಸರ್ಕಾರ ಹಿಂದೆಸರಿಯುತ್ತಿರುವ ಇಂದಿನ ಸಂಕೀರ್ಣ ಪರಿಸ್ಥಿತಿಯಲ್ಲಿ ಸಾಮಾಜಿಕ ನ್ಯಾಯದ ಮಹತ್ವವನ್ನು ಅರಿತು ಅದಕ್ಕಾಗಿ ಒತ್ತಾಯಿಸುವ ತುರ್ತು ಇಂದು ಹೆಚ್ಚಾಗಿದೆ.

'ಸಾಮಾಜಿಕ ನ್ಯಾಯ'ದ ಪರಿಕಲ್ಪನೆಯಲ್ಲಿ ಸಾಹಿತ್ಯದ ಅನುಸಂಧಾನ ಹೇಗೆ ಅಥವಾ ಹೇಗಿರಬೇಕು ಎಂಬುದನ್ನು ಚರ್ಚಿಸಬೇಕಿದೆ. ಈ ಸಂದರ್ಭದಲ್ಲಿ ಸಾಹಿತ್ಯ, ಅದರ ಉದ್ದೇಶ, ಧೋರಣೆ ಏನು ಎಂಬುದರ ಬಗ್ಗೆ, ಸಾಹಿತ್ಯ ಯಾರಿಗಾಗಿ ಎಂಬ ಬಗ್ಗೆ ಸಹಜವಾದ, ಆದರೆ ಗಂಭೀರವಾದ ಪ್ರಶ್ನೆಗಳನ್ನು ನಾವು ಎದುರಿಸಬೇಕಿದೆ.

ಸಾಹಿತ್ಯ ಅದರ ಪರಂಪರೆಯಲ್ಲಿ ಕೇವಲ ಕಲಾತ್ಮಕ ಅಭಿವ್ಯಕ್ತಿಯ ಒಂದು ಮಾಧ್ಯಮವಾಗಿ, ರಸಾನುಭವವೇ ಧ್ಯೇಯವಾಗಿ, ಭಾವನಾವಾದಿಗಳಿಗೆ ಅವರ ಧಾರ್ಮಿಕ ಆಶಯಗಳನ್ನು ಈಡೇರಿಸುವ ಸಾಧನವಾಗಿ ಅಸ್ತಿತ್ವದಲ್ಲಿದ್ದಿತು. ಕೆಲಮಟ್ಟಿಗೆ ಈಗಲೂ ಹಾಗೆಯೇ ಇದೆ. ಆದರೆ ಇಂದು ಬಹುಮಟ್ಟಿಗೆ ಸಾಹಿತ್ಯದ ಧ್ಯೇಯ ಮತ್ತು ಧೋರಣೆಗಳು ಅವುಗಳನ್ನು ಮೀರಿದುದಾಗಿದೆ. ಈ ಹೊತ್ತು ಸಾಹಿತ್ಯ ಶತಮಾನಗಳಿಂದ ಅರಿವಿನಿಂದ ವಂಚಿಸಲ್ಪಟ್ಟವರಿಗೆ ಸೊಡರಾಗಬೇಕಿದೆ, ನೊಂದವರ ದನಿಯಾಗಬೇಕಿದೆ, ಮೂಗರ ಬಾಯಾಗಬೇಕಿದೆ. ಆಗಲೇ ಅದು 'ಸಾಮಾಜಿಕ ನ್ಯಾಯ'ದ ಪರಿಕಲ್ಪನೆಗೆ ತನ್ನ ಕೊಡುಗೆ ನೀಡಲು ಸಾಧ್ಯ. ಆದ್ದರಿಂದಲೇ ಇಂದು ಕೇವಲ ಸಾಹಿತ್ಯಕ್ಕಾಗಿ ಸಾಹಿತ್ಯವಲ್ಲ, ಸೌಂದರ್ಯಕ್ಕಾಗಿ ಸೌಂದರ್ಯವಲ್ಲ. ಇಂದು ಬದುಕಿಗಾಗಿ ಸಾಹಿತ್ಯ, ಮಾನವತೆಗಾಗಿ ಸಾಹಿತ್ಯ ಎಂಬುದನ್ನು ಬೆಂಬಲಿಸಬೇಕಿದೆ. ಸಾಹಿತ್ಯ ಇಂದು ಮನುಷ್ಯ ಎದುರಿಸುತ್ತಿರುವ ಸಂದಿಗ್ಧತೆಗಳಿಗೆ ಮುಖಾಮುಖಿಯಾಗಬೇಕಾದಂತಹ ಅನಿವಾರ್ಯತೆ ಉಂಟಾಗಿದೆ. ಹಾಗೆಂದು ಸಾಹಿತ್ಯ ಕೇವಲ ಅಬ್ಬರದ ಘೋಷಣೆ ಅಥವಾ ಉಪದೇಶವಾಗಬೇಕಿಲ್ಲ. ತಾನು ಹೇಳಬೇಕಾದಂತಹ ಸಾಮಾಜಿಕ ಆಶಯಗಳನ್ನು ಸೂಕ್ಷ್ಮವಾಗಿ, ಕಲಾತ್ಮಕತೆಯ ಸ್ಪರ್ಶದೊಂದಿಗೆ ಒಳಗೊಳ್ಳಲು ಸಾಧ್ಯವಿದೆ. ಈ ರೀತಿಯ ಸಾಹಿತ್ಯ ಓದುಗನಿಗೆ, ಆತನ ಅರಿವನ್ನು ತೀಕ್ಷ್ಣಗೊಳಿಸುವ ಮುಖೇನ, ಅವನ ಸಂವೇದನೆಯನ್ನು ಸೂಕ್ಷ್ಮಗೊಳಿಸುತ್ತದೆ. ವರ್ತಮಾನದ ಪರಿಸ್ಥಿತಿಯನ್ನು ಹೆಚ್ಚು ವೈಚಾರಿಕವಾಗಿ, ಸೂಕ್ಷ್ಮವಾಗಿ ನಿರ್ವಹಿಸಲು ಆತನಿಗೆ ಸಾಧ್ಯವಾಗುತ್ತದೆ. ಇಂದು ಸಾಹಿತ್ಯ ಮುಖ್ಯವಾಗಿ ಇಂತಹ ಪ್ರಯತ್ನದಲ್ಲಿ ಹೆಚ್ಚು ತೊಡಗಬೇಕಿದೆ.

ಸಾಹಿತ್ಯ ವ್ಯಕ್ತಿಪ್ರತಿಭಾಜನ್ಯವಾದಂತಹ ಪ್ರಕ್ರಿಯೆ. ಅದರ ಅನನ್ಯತೆಯನ್ನು ನಾವು ಒಪ್ಪಲೇಬೇಕು. ಅದು ವ್ಯಕ್ತಿಯೊಬ್ಬನ ಬೌದ್ಧಿಕ ಉತ್ಪನ್ನ. ಆತನ – ಸಾಹಿತಿಯ – ಪ್ರಜ್ಞೆಯಿಂದ ಅದು ಸೃಜಿಸಲ್ಪಟ್ಟಿರುತ್ತದೆ. ಆದರೆ ವ್ಯಕ್ತಿಪ್ರಜ್ಞೆಯೆಂಬುದು ಸರ್ವಸ್ವತಂತ್ರವಲ್ಲ. ಅದು ಆತನ ಪರಿಸರದ ಸಾಮಾಜಿಕ, ಚಾರಿತ್ರಿಕ ಸನ್ನಿವೇಶಗಳಿಂದ ರೂಪುಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯವೆಂಬುದು ಸಮಾಜದ ಹಲವು ಉತ್ಪಾದನೆಗಳಲ್ಲಿ ಒಂದು. ಅದಕ್ಕೆ ಅಂತಿಮವಾಗಿ ಸಾಮಾಜಿಕ ಹೊಣೆಗಾರಿಕೆಯಿರಬೇಕಾಗುತ್ತದೆ. ಇಲ್ಲಿ ಮತ್ತೊಂದು ಅಂಶವನ್ನು ಮುಖ್ಯವಾಗಿ ಲಕ್ಷಿಸಬೇಕು. ಸಾಹಿತ್ಯ ವ್ಯಕ್ತಿಜನ್ಯ ಬೌದ್ಧಿಕ ಕ್ರಿಯೆ. ಆದ್ದರಿಂದ ಸಾಹಿತ್ಯದ ಹೊಣೆಗಾರಿಕೆಯನ್ನು ಒಂದರ್ಥದಲ್ಲಿ ಸಾಹಿತಿಯ ಹೊಣೆಗಾರಿಕೆ ಎಂದೂ ಅರ್ಥಮಾಡಬೇಕಾಗುತ್ತದೆ. ಸೂಕ್ಷ್ಮಪ್ರಜ್ಞೆಯ ಸಂವೇದನಾಶೀಲನಾದ ಸಾಹಿತಿ 'ಸಮಾಜ ಪ್ರಜ್ಞೆ'ಯನ್ನು ಪ್ರಭಾವಿಸಬಲ್ಲವನಾದ್ದರಿಂದ, ಅದಕ್ಕೊಂದು ದಿಶೆಯನ್ನು ತೋರಬಲ್ಲವನಾದ್ದರಿಂದ ಆತನ ಬದ್ಧತೆ, ಹೊಣೆಗಾರಿಕೆ ಹೆಚ್ಚು ಮುಖ್ಯವಾಗುತ್ತದೆ. ಅದರಲ್ಲಿಯೂ ನಮ್ಮ ಸದ್ಯ ವರ್ತಮಾನದಲ್ಲಿ ಉದ್ಭವಿಸಿರುವಂತಹ ತಲ್ಲಣಗಳ ಸಂದರ್ಭದಲ್ಲಿಯಂತೂ ಇದು ಬಹಳ ಮುಖ್ಯ. ಇಂತಹ ಸಂದರ್ಭದಲ್ಲೆ ನಮಗೆ ದಲಿತ-ಬಂಡಾಯ ಸಾಹಿತ್ಯ ಚಳವಳಿಗಳ ಮಹತ್ವ ಅರಿವಾಗುವುದು. 'ಸಾಮಾಜಿಕ ನ್ಯಾಯ'ದ ಹಕ್ಕೊತ್ತಾಯದ ಹಿನ್ನೆಲೆಯೊಂದಿಗೆ ಅಸ್ತಿತ್ವಪಡೆದ ಈ ಸಾಹಿತ್ಯ ಚಳವಳಿ ಅಂಬೇಡ್ಕರ್-ಗಾಂಧಿಯ ಜಗಳದಿಂದ, ಮಾರ್ಕ್ಸ್‌ನ ಚಿಂತನೆಗಳಿಂದ, ರಾಮ ಮನೋಹರನ ವಿಚಾರಗಳಿಂದ, ಸ್ತ್ರೀ ಚಳವಳಿಗಳಿಂದ ತನ್ನ ಸಾಮಾಜಿಕ ನಿಲುವುಗಳನ್ನು ನೇರ್ಪುಗೊಳಿಸಿಕೊಂಡಿದೆ, ತನ್ನ ದನಿಯನ್ನು ಗಟ್ಟಿಗೊಳಿಸಿಕೊಂಡಿದೆ. ದಲಿತರ, ಕಾರ್ಮಿಕರ, ಮಹಿಳೆಯರ, ನೊಂದವರ ಪರವಾಗಿ ದನಿಯೆತ್ತಿದೆ.

ಇಂದು ಪರಿಸ್ಥಿತಿ ಸಂಕೀರ್ಣವಾಗಿದೆ. ಸಮಸ್ಯೆಗಳು ತೀವ್ರವಾಗಿವೆ. ವಿಶ್ವವ್ಯಾಪಾರ ಸಂಸ್ಥೆಯೊಂದಿಗಿನ ಒಪ್ಪಂದಗಳಿಂದ ಸಂಭವಿಸಬಹುದಾದ ಪರಿಣಾಮಗಳು ಇಂದು ಸಾವಕಾಶವಾಗಿ ನಮ್ಮ ಅರಿವಿಗೆ ನಿಲುಕುತ್ತಿವೆ. ನಿರುದ್ಯೋಗದ ಸಮಸ್ಯೆ ವ್ಯಾಪಕವಾಗುತ್ತಿದೆ. ಉದ್ಯೋಗದ ಭರವಸೆಗಳು ಯುವಜನರಿಗೆ ಇಲ್ಲವಾಗುತ್ತಿವೆ. ಸಣ್ಣ ಕೈಗಾರಿಕೆಗಳು, ಗೃಹ ಉದ್ಯಮಗಳು ನೆಲಕಚ್ಚುತ್ತಿವೆ. ರೈತ ಆಶಾಹೀನನಾಗಿದ್ದಾನೆ. ಆಧುನಿಕತೆ ಮತ್ತು ಅಭಿವೃದ್ಧಿಯ ಗುಂಗಿನಲ್ಲಿ ಮಾನವೀಯ ಸಂಬಂಧಗಳು ತಮ್ಮ ಅರ್ಥ ಕಳೆದುಕೊಳ್ಳುತ್ತಿವೆ. ದುರಂತವೆಂದರೆ ಇವೆಲ್ಲವುಗಳ ಮಧ್ಯೆ ಸಾಹಿತಿ-ಸಾಹಿತ್ಯ ನಿಷ್ಕ್ರಿಯವಾಗುತ್ತಿದೆ. ಯಾವ ರಾಷ್ಟ್ರ-ಸಮಾಜದಲ್ಲಿ ಸಾಹಿತ್ಯ ಮತ್ತು ಸಾಹಿತಿಗಳು ವರ್ತಮಾನದ ತುರ್ತುಗಳಿಗೆ ಸ್ಪಂದಿಸದೆ ಸಂವೇದನಾಶೂನ್ಯರಾಗಿ ನಿಷ್ಕ್ರಿಯರಾಗುತ್ತಾರೊ ಅಂತಹ ರಾಷ್ಟ್ರ-ಸಮಾಜಕ್ಕೆ ಭವಿಷ್ಯವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ನಮ್ಮೆಲ್ಲರ ಮೇಲೂ ಹೊಣೆಗಾರಿಕೆಯಿದೆ.

ಪ್ರಸ್ತುತ ಸಂದಿಗ್ಧತೆಗಳನ್ನು ನೀಗುವ ಮುಖೇನ 'ಸಾಮಾಜಿಕ ನ್ಯಾಯ'ವನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ನಾವೆಲ್ಲರೂ ಯೋಚಿಸಬೇಕಿದೆ. ಮುಖ್ಯವಾಗಿ ಇದರಲ್ಲಿ ಸಾಹಿತಿ-ಸಾಹಿತ್ಯಗಳ ಪಾತ್ರ ಮುಖ್ಯವಾದುದು. ಅವರು ಈ ಅಭಿಯಾನದಲ್ಲಿ ನಿರ್ಣಾಯಕ ಪಾತ್ರ ನಿರ್ವಹಿಸಬೇಕಿದೆ. ಅವರು ಈ ಜವಾಬ್ದಾರಿಯಿಂದ ವಿಮುಖರಾಗುವಂತಿಲ್ಲ. ಹಾಗೇನಾದರೂ ಆದರೆ ಮುಂದಿನ ಜನಾಂಗ ಬರ್ಟೋಲ್ಟ್ ಬ್ರೆಕ್ಟ್ ಹೇಳುವಂತೆ, ''ಇಂತಹ ಸಂದಿಗ್ಧತೆಯ ಸ್ಥಿತಿಯಲ್ಲಿ ಜನರೇನೋ ಸುಮ್ಮನಿದ್ದರು, ಆದರೆ ಕವಿಗಳೇನು ಮಾಡುತ್ತಿದ್ದರು ?'' ಎಂದು ಕೇಳುವ ಸಂದರ್ಭ ಉಂಟಾಗುತ್ತದೆ.

ರವಿ
ಕೇರಾಫ್ ಹೇಮಣ್ಣ, ಎಸ್ ಕೆ - ೪೫, ನ್ಯೂ ಕಾಲನಿ
ಭದ್ರಾವತಿ - ೫೭೭ ೩೦೧

# ಶುಕ್ರಗ್ರಹದ ಪುನರಾಗಮನ

ಡಿಸೆಂಬರ್‌ನ ಶುಭ್ರ ಆಕಾಶದಲ್ಲಿ ಸ್ಫುಟವಾಗಿ ಕಾಣುವ ನಕ್ಷತ್ರಗಳ ಸೌಂದರ್ಯವನ್ನು ಸವಿಯಲು ಈ ನಕ್ಷೆ ನಿಮಿತ್ತ ಮಾತ್ರ. ಪೂರ್ವದ ಭಾಗದಲ್ಲಿ ಕಾಣುವ ಪ್ರಕಾಶಮಾನ ನಕ್ಷತ್ರಪುಂಜಗಳು ವೃಷಭ, ಮಹಾವ್ಯಾಧ (ಒರೈಯನ್). ಹಾಗೆಯೇ ಉತ್ತರದಲ್ಲಿ ಕಣ್ಸೆಳೆಯುವ ಕುಂತಿ (ಕಾಸಿಯೋಪಿಯಾ), ಪಾರ್ಥ (ಪರ್ಸಿಯುಸ್), ದ್ರೌಪದಿ (ಆಂಡ್ರೋಮಿಡಾ) ಇವು. ಆಕಾಶಗಂಗೆಯ ಒಂದು ಭಾಗ ಈ ಎಲ್ಲ ಪುಂಜಗಳ ಮೂಲಕ ಹಾದುಹೋಗುವುದನ್ನು ಚಂದ್ರನಿಲ್ಲದ ನಿರಭ್ರ ಆಕಾಶದಲ್ಲಿ ಸುಲಭವಾಗಿ ಗುರುತಿಸಬಹುದು. ಸಾಧಾರಣವಾಗಿ ಈ ತಿಂಗಳಲ್ಲಿ ಆಕಾಶ ಶುಭ್ರವಾಗಿಯೇ ಇರುತ್ತದೆ. ಆದ್ದರಿಂದ ಆಕಾಶಗಂಗೆಯ ಈ ಭಾಗದಲ್ಲಿ, ನೆಬ್ಯುಲ, ಗುಚ್ಛಗಳನ್ನು ಸುಲಭವಾಗಿಯೇ ಗುರುತಿಸಬಹುದು. ಆಕಾಶದ ಇನ್ನೊಂದು ಭಾಗದಲ್ಲಿ ಉದಾಹರಣೆಗೆ ದಕ್ಷಿಣ ಮತ್ತು ಪಶ್ಚಿಮ ಆಕಾಶದಲ್ಲಿ, ಪ್ರಕಾಶಮಾನವಾದ ನಕ್ಷತ್ರಗಳಿಗೇ ಕೊರತೆ ಇದೆ ಎಂದು ಗಮನಿಸಬಹುದು. ದಕ್ಷಿಣದಲ್ಲಿ ಬಕ ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳನ್ನು ಹೊರತುಪಡಿಸಿದರೆ ಆಕಾಶ ಖಾಲಿ ಎನ್ನಿಸುತ್ತದೆ. ಆದರೆ ಕ್ಷೀಣ ಪುಂಜಗಳಾದ ಮಕರ, ಕುಂಭ ಮತ್ತು ಮೀನಗಳನ್ನು ಗುರುತಿಸಲು ಇದೇ ಸದವಕಾಶ. ದಕ್ಷಿಣದಲ್ಲಿ ಕಾಣುವ ಇನ್ನೊಂದು ಪ್ರಕಾಶಮಾನ ನಕ್ಷತ್ರ ವೈತರಣೀ ಮುಖ. ಒರೈಯನ್ ಮಹಾವ್ಯಾಧನ ಕಾಲಿನ ಬಳಿ ಆರಂಭವಾಗುವ ಈ ಪುಂಜ ಅಂಕುಡೊಂಕಾಗಿ ನದಿಯಂತೆಯೇ ಹರಿದು ದಕ್ಷಿಣಕ್ಕೆ ಸಾಗುತ್ತದೆ. ಇದನ್ನು ಗುರುತಿಸಲು ನಕ್ಷೆಯ ಸಹಾಯ ಬೇಕೇಬೇಕು.

ಗ್ರಹಗಳಿಲ್ಲದ ಕೊರತೆಯನ್ನು ತುಂಬಲು ಸಂಜೆಯ ಆಕಾಶಕ್ಕೆ ಶುಕ್ರ ಆಗಮಿಸಿದೆ. ತಿಂಗಳ ಮೊದಲಲ್ಲೇ ಇದನ್ನು ಕಾಣಬಹುದಾದರೂ ಸ್ಫುಟವಾಗಿ ಗುರುತಿಸಲು ತಿಂಗಳ ಕೊನೆಯವರೆಗೂ ಕಾಯಬೇಕು. ೨೨ರ ಸಂಜೆ ಬಾಲಚಂದ್ರನನ್ನು ಹುಡುಕಲು ಪ್ರಯತ್ನಿಸಿ. ಶುಕ್ರ ಕೂಡ ಕಣ್ಣಿಗೆ ಬೀಳುವುದು.

ಶನಿಗ್ರಹ ಮಧ್ಯರಾತ್ರಿಯ ಹೊತ್ತಿಗೆ ಉದಯಿಸುವುದರಿಂದ ಬೆಳಗಿನ ಜಾವ ಸ್ಫುಟವಾಗಿ ಕಾಣುವುದು. ೧೦ರಂದು ಚಂದ್ರನ ಪಕ್ಕ ಕಾಣುವುದು. ವಾಸ್ತವದಲ್ಲಿ ಇದು ಚಂದ್ರನ ಹಿಂದೆ ಮರೆಯಾಗುವುದಾದರೂ, ಆಚ್ಛಾದನೆ ಎಂಬ ಈ ಘಟನೆಯ ನೋಟ ನಮಗಿಲ್ಲ. ಇದೇ ರೀತಿ ೧೫ರಂದು ಚಂದ್ರ ಚಿತ್ರಾ ನಕ್ಷತ್ರವನ್ನು, ೧೯ರಂದು ಜ್ಯೇಷ್ಠಾ ನಕ್ಷತ್ರವನ್ನು, ಮರೆಮಾಡುವ ಆಚ್ಛಾದನೆಯ ನೋಟಗಳು ನಮಗೆ ದೊರಕುವುದಿಲ್ಲ. ಆದರೆ ೩೧ರಂದು ಕೃತ್ತಿಕಾ ಗುಚ್ಛದ ಆಚ್ಛಾದನೆ ಕಾಣಲಿದೆ. ಸೂರ್ಯನ ದಿಕ್ಕಿನಲ್ಲಿ ಗುಂಪುಗೂಡಿರುವ ಗುರು, ಬುಧ ಮತ್ತು ಮಂಗಳ ಈ ತಿಂಗಳು ಬೇರ್ಪಡುವುದನ್ನು ಪ್ರತಿ ಬೆಳಗಿನ ಜಾವ ಪೂರ್ವ ದಿಕ್ಕನ್ನು ಗಮನಿಸುತ್ತಿದ್ದರೆ ಕಾಣಬಹುದು. ತಿಂಗಳ ಮೊದಲವಾರದಲ್ಲಿ ಬುಧ ಸ್ಪಷ್ಟವಾಗಿ ಕಾಣುತ್ತದೆ. ೧೦ರಂದು ಈ ಮೂರೂ ಗ್ರಹಗಳು ಪುಟ್ಟ ತ್ರಿಕೋಣ ರಚಿಸುತ್ತವೆ. ೧೯ರ ಹೊತ್ತಿಗೆ ಬುಧ ದಿಗಂತದ ಅಂಚಿಗೆ ಓಡಿರುತ್ತದೆ. ತಿಂಗಳ ಕೊನೆಗೆ ದೂರಸರಿದ ಮಂಗಳ ಮತ್ತು ಗುರು ಮಾತ್ರ ಕಾಣುತ್ತದೆ. ಬುಧ ಓಡಿಬಿಟ್ಟಿರುತ್ತದೆ. ಉತ್ತರಾಯಣ ಎಂಬುದು ಸೂರ್ಯ ದಕ್ಷಿಣದ ಮಿತಿಯನ್ನು ಮುಟ್ಟುವ ದಿನ. ಅದು ಈ ತಿಂಗಳ ೨೨ರ ಬೆಳಗಿನ ಜಾವ ನಡೆಯಲಿದೆ.

ಜೆಮಿನಿಡ್ಸ್ ಹೆಸರಿನ ಉಲ್ಕಾವೃಷ್ಟಿ ೧೪ರಂದು ಕಾಣಲಿದೆ. ಬೆಳಗಿನ ಜಾವ ಗಂಟೆಗೆ ಸುಮಾರು ೬೦ರಿಂದ ೮೦ ಉಲ್ಕೆಗಳು ಕಾಣಬಹುದು. ಆದರೆ ಚಂದ್ರನ ಪ್ರಕಾಶದ ಕಾರಣ ಕೆಲವೊಂದು ಕ್ಷೀಣವಾದವು ಕಾಣದೇ ಇರಬಹುದು.

ಡಿಸೆಂಬರ್ ೨೨ರ ಹೊತ್ತಿಗೆ ಇನ್ನೊಂದು ಉಲ್ಕಾವೃಷ್ಟಿಯೂ ಗರಿಷ್ಠ ಚಟುವಟಿಕೆ ಪಡೆಯಲಿದೆ. ಉರ್ಸಿಡ್ಸ್ ಎಂಬ ಹೆಸರಿನ ಇದು ಉರ್ಸಾಮೈನರ್ ಅಂದರೆ ಲಘು ಸಪ್ತರ್ಷಿಮಂಡಲದಿಂದ ಹೊರಟಂತೆ ಕಾಣುವ ಉಲ್ಕೆಗಳ ವೃಷ್ಟಿ. ಇದು ಅಂದಾಜಾಗಿ ಧ್ರುವ ನಕ್ಷತ್ರದ ಸಮೀಪವೇ ಆಗುವುದರಿಂದ ರಾತ್ರಿ ಇಡೀ ಉಲ್ಕೆಗಳನ್ನು ಕಾಣಬಹುದು. ಕಳೆದ ತಿಂಗಳು ಧೂಮಕೇತುವೊಂದು ಇದ್ದಕ್ಕಿದ್ದಂತೆ ಪ್ರಕಾಶವಾಗಿ ಹವ್ಯಾಸೀ ಖಗೋಳ ವೀಕ್ಷಕರಿಗೆ ಖುಷಿ ಕೊಟ್ಟಿತ್ತು. ಈ ತಿಂಗಳಲ್ಲಿ ಫಾಯೆ ಎಂಬ ಕ್ಷೀಣ ಧೂಮಕೇತು ಸೆಟಸ್ (ತಿಮಿಂಗಿಲ) ಪುಂಜದ ಮೂಲಕ ಹಾದುಹೋಗಲಿದೆ. ಆದರೆ ದೂರದರ್ಶಕಗಳಿಂದ ಮಾತ್ರ ಇದನ್ನು ನೋಡಬಹುದು.

೧೦ರ ಬೆಳಗಿನ ಜಾವ
ಪೂರ್ವ ದಿಕ್ಕಿನ ನೋಟ
ಬುಧ-ಗುರು-ಮಂಗಳ
ರಚಿಸುವ ಪುಟ್ಟ ತ್ರಿಕೋಣ

## ಖಗೋಳ ದಿನಚರಿ

ಡಿಸೆಂಬರ್ ೨ ಕೃತ್ತಿಕಾ-ಚಂದ್ರ ಜೋಡಿ *
ಚಂದ್ರ-ಭೂಮಿ ದೂರ ಕನಿಷ್ಠ
೫ ಹುಣ್ಣಿಮೆ
೯ ಬುಧ-ಮಂಗಳ ೧ ಡಿಗ್ರಿ ಅಂತರ
೧೦ ಶನಿ-ಚಂದ್ರ ನಡುವೆ ೧-೨ ಡಿಗ್ರಿ ಅಂತರ
ಬುಧ-ಗುರು ಕನಿಷ್ಠ ಕೋನ, ಮಂಗಳ-ಗುರು ಕನಿಷ್ಠ ಕೋನ
ಬುಧ-ಮಂಗಳ-ಗುರು ಇವುಗಳ ಪುಟ್ಟತ್ರಿಕೋಣ *
೧೨ ಚಾಂದ್ರಮಾಸದ ಕೊನೆಯ ಪಾದ,
ಚಂದ್ರೋದಯ ನಡುರಾತ್ರಿಗೆ, ಚಂದ್ರ ಕೇತು ಬಿಂದುವಿನಲ್ಲಿ
೧೩ ಚಂದ್ರ-ಭೂಮಿ ದೂರ ಗರಿಷ್ಠ
೧೪ ಜೆಮಿನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ *
೧೫ ಚಂದ್ರ-ಚಿತ್ರಾ ಜೋಡಿ *
೧೮ ಚಂದ್ರ-ಗುರು ನಡುವೆ ಕನಿಷ್ಠ ಕೋನ
೧೯ ಮಂಗಳ, ಚಂದ್ರ, ಗುರು, ಬುಧ ಮತ್ತು ಜ್ಯೇಷ್ಠಾ ಇವುಗಳೆಲ್ಲಾ ಒಟ್ಟಿಗೇ ಗುಂಪಾಗಿ ಕಾಣುವುವು. ಜ್ಯೇಷ್ಠಾ ಆಚ್ಛಾದನೆ*
೨೨ ಅಮಾವಾಸ್ಯೆ ೧೯:೩೧ಕ್ಕೆ, ಉತ್ತರಾಯಣ ೫:೫೨ಕ್ಕೆ
೨೫ ಯುರೇನಸ್ ಗ್ರಹದ ಆಚ್ಛಾದನೆ
೨೬ ಚಂದ್ರ ರಾಹುಬಿಂದುವಿನಲ್ಲಿ
೨೭ ಚಾಂದ್ರಮಾಸದ ಪ್ರಥಮ ಪಾದ, ಚಂದ್ರಾಸ್ತ ನಡುರಾತ್ರಿಗೆ
೩೧ ಕೃತ್ತಿಕಾ-ಚಂದ್ರ ಜೋಡಿ *
ಜನವರಿ ೦೩ ಕ್ವಾಡ್ರಾಂಟಿಡ್ ಉಲ್ಕಾವೃಷ್ಟಿ, ಹುಣ್ಣಿಮೆ ೧೯:೨೭ಕ್ಕೆ
೫ ಗುರು-ಜ್ಯೇಷ್ಠಾ ಜೋಡಿ
೬ ಚಂದ್ರ-ಶನಿ ಜೋಡಿ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈ ಗ್ರೌಂಡ್, ಬೆಂಗಳೂರು - ೫೬೦ ೦೦೧

# ಸಜನಾ



## ಸಾಮಾನ್ಯನ ಕೆಲವು ನೆನಪುಗಳು

ನೆನಪುಗಳು ವಿಚಿತ್ರ. ಕಣ್ಣೀರಿಟ್ಟ ಘಟನೆಗಳ ನೆನಪು ಕಾಲಕ್ರಮೇಣ ನಗೆ ತರಿಸಿದರೆ, ಸಂತೋಷದ, ಕೃತಾರ್ಥತೆಯ ನೆನಪುಗಳು ದುಃಖ ಕೋಡಿ ಹರಿಯುವಂತೆ ಮಾಡುತ್ತವೆ. 'ಸಜನಾ'ರನ್ನು ಕೆಲವೇ ಕ್ಷಣಗಳೇ ಆಗಲಿ ಕಂಡು ಮಾತಾಡಿಸಿದ್ದವರ ಪಾಡು ಅವರ ಸಾವಿನ ಸುದ್ದಿ ಕೇಳಿ ಇದೇ ಆಗಿರುತ್ತದೆ. ಅವರನ್ನು ಏನೆಂದು ವರ್ಣಿಸುವುದು ? ಹೆಸರಾಂತ ವೈದ್ಯವಿಜ್ಞಾನಿ, ಮ್ಯೂಸಿಯಂಗಳ ಜನಕ, ಆದರ್ಶ ಶಿಕ್ಷಕ, ಅಪೂರ್ವ ಮಾನವ ಶ್ರೇಷ್ಠ, ಸರಳ ಸಜ್ಜನ, ಶ್ರೇಷ್ಠ ಲೇಖಕ ಏನೆಲ್ಲ ವಿಶೇಷಣಗಳನ್ನು ಬಳಸಿದರೂ ಪರಿಚಯಸ್ಥರಲ್ಲಿ ನೆನಪಾಗುವುದು ಅವರ 'ಆರಾಮಿದ್ದೀರೇನು ?' ಎಂಬ ಕಾಳಜಿಪೂರ್ವಕ ಕುಶಲಪ್ರಶ್ನೆ.

ನನಗೆ ಅವರ ಸಂಪರ್ಕ ಬಂದದ್ದು, ೧೦ ವರ್ಷಗಳ ಹಿಂದೆ ಅವರು ಮೈಸೂರಿನ ಜೆ.ಎಸ್.ಎಸ್. ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ. ಅವರ ಕೆಲವು ಪುಸ್ತಕಗಳನ್ನೋದಿದ್ದ ನನಗೆ, ಒಂದು ವಿದೇಶಿ ವಿಶ್ವಕೋಶದಲ್ಲಿನ ಒಂದು ತಪ್ಪು ಕಣ್ಣಿಗೆ ಬಿತ್ತು. ಆ ವಿಶ್ವಕೋಶದಲ್ಲಿದ್ದ ಮಾಹಿತಿ ತಪ್ಪೆಂದು ಸಾಬೀತು ಮಾಡಿದ್ದು ನಾಗಲೋಟಿಮಠರ ಸಂಶೋಧನೆ. ಅದನ್ನು ಅವರಿಗೆ ತಿಳಿಸಿ ಆ ವಿದೇಶಿ ವಿಶ್ವಕೋಶದ ಸಂಪಾದಕರಿಗೆ ಪತ್ರ ಬರೆಯಿರೆಂದು ಬರೆದೆ. ಅವರು ಬಹಳ ಸಂತೋಷಪಟ್ಟು ಉತ್ತರಿಸಿದರು. ಹೀಗೆ ಆರಂಭವಾದ ಅವರ ಪರಿಚಯ ನನ್ನ ಪಾಲಿಗೆ ಸುಮಾರು ಹತ್ತು ವರ್ಷಗಳಿದ್ದವು. ಡಾ|| ಬಿ. ಸಿ. ರಾಯ್ ಪ್ರಶಸ್ತಿ ಹಾಗೂ ಅಲೆಂಬಿಕ್ ಆಶ್ರಮದ ಹರಿಂ ಓಂ ಪ್ರಶಸ್ತಿ ಈ ಎರಡನ್ನೂ ಪಡೆದ ಕೆಲವೇ ವೈದ್ಯರಲ್ಲಿ ಡಾ|| ಸಜನಾ ಒಬ್ಬರು. ಇಂತಹವರು ಸಾಮಾನ್ಯರಲ್ಲಿ ಸಾಮಾನ್ಯನಂತೆ, ಗೆಳೆಯನಂತೆ ಪರಿಚಯಸ್ಥರನ್ನು ಮಾತನಾಡಿಸುತ್ತಿದ್ದ ಪರಿಯನ್ನು ನೆನೆಸಿಕೊಂಡರೆ ಹೃದಯ ತುಂಬಿಬರುತ್ತದೆ.

ಸಜನಾರ ಬದುಕು 'ಸತ್ಯ, ಕಲ್ಪನೆಗಿಂತ ಹೆಚ್ಚು ವಿಲಕ್ಷಣವಾದುದು' (ಟ್ರೂತ್ ಈಸ್ ಸ್ಟ್ರೇಂಜರ್ ದ್ಯಾನ್ ಫಿಕ್ಷನ್) ಎಂಬುದಕ್ಕೆ ನಿದರ್ಶನ. ಜೀವನ ಮನುಷ್ಯನನ್ನು ಮಾರ್ಪಡಿಸುತ್ತದೆ ಎನ್ನುತ್ತದೆ ಸುಭಾಷಿತ; ಇಲ್ಲ, ಅದು ಮನುಷ್ಯ ಏನೆಂದು ತೋರಿಸುತ್ತದೆ ಎನ್ನುತ್ತದೆ ಅನುಭವೋಕ್ತಿ. ಇದನ್ನು ಸಜನಾ ಅವರ ಆತ್ಮಕತೆ 'ಬಿಚ್ಚಿದ ಜೋಳಿಗೆ' ಓದಿಯೇ ತಿಳಿಯಬೇಕು. ಬಾಲ್ಯದ ಸೊಗಸು, ಕಷ್ಟಸಹಿಷ್ಣುತೆ, ವಿನಯ, ಶ್ರಮಜೀವನ, ಕರ್ತವ್ಯನಿಷ್ಠೆ, ಶಿಸ್ತು, ಈ ಎಲ್ಲ ಅಮೂರ್ತಗಳ ಮೂರ್ತರೂಪ ಸಜನಾರ ಆತ್ಮಕತೆ. ಇದನ್ನು ಸರ್ಕಾರ ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಮರುಮುದ್ರಿಸುತ್ತದಂತೆ! ಅದೇನೇ ಇರಲಿ, ನಮ್ಮ ಎಲ್ಲ ಮಕ್ಕಳು ಇದನ್ನು ಓದಬೇಕು. ಪಠ್ಯಪುಸ್ತಕವಾಗಲು ಅರ್ಹವಾದ ಕೃತಿಯಿದು. 'ಎಲ್ಲ ಪ್ರತಿಭಾವಂತರು ಸಣ್ಣ ಮನಸ್ಸಿನವರ ಕ್ರೌರ್ಯಕ್ಕೆ ತುತ್ತಾದವರೆ' ಎಂಬ ಐನ್‌ಸ್ಟೀನ್ ವಾಣಿ ಸಜನಾರ ವಿಷಯದಲ್ಲಿ ಸುಳ್ಳೇನೂ ಆಗಲಿಲ್ಲ. ಇವರನ್ನು ಹುಬ್ಬಳ್ಳಿಯ ಸರ್ಕಾರಿ ವೈದ್ಯಕೀಯ ಕಾಲೇಜಿನ ಪ್ರಥಮ ನಿರ್ದೇಶಕರು ಎಂದು ಮಾಧ್ಯಮಗಳು (ನಿಧನಾನಂತರ) ಬಿಂಬಿಸುತ್ತಿವೆ. ಕೆಎಂಸಿಗೆ ಬಂದು ಸುಧಾರಣೆಗಳನ್ನು ತರಲೆತ್ನಿಸಿದ ಡಾ|| ನಾಗಲೋಟಿಮಠರಿಗೆ ಅಲ್ಲಿನ ಸ್ಥಳೀಯ ರಾಜಕಾರಣಿಗಳು ಮಾಡಿದ್ದನ್ನು ಅವರ ಬಾಯಿಂದಲೇ ಕೇಳಬೇಕು. ಒಬ್ಬ ಹೇಳಿದನಂತೆ : ''ನೋಡ್ರಿ ಡಾಕ್ಟ್ರೆ! ನಿಮಗೆ ಪಗಾರ ಇರುತ್ತೆ. ಬೇರೆ ಕೆಲವರಿಗೆ ಇರುವುದಿಲ್ಲ. ಅದನ್ನು ನೀವು ಹೊಂದಿಸಿ ಕೊಡಬೇಕು ! ಈ ಸಲ ನಾನು ನಿಮ್ಮಿಂದ ಅಪೇಕ್ಷಿಸುವುದು ನಾಲ್ಕು ಕೋಟಿಯಷ್ಟೆ. ಉಳಿದಿದ್ದನ್ನು ನೀವು ಏನನ್ನಾದರೂ ಮಾಡಿ!'' ಇದಕ್ಕೆಲ್ಲ ಒಪ್ಪದ ನಾಗಲೋಟಿಮಠರಿಗೆ ಕೊನೆಗೆ ಆದದ್ದು ''... ನಾನು ತಂದ ಸುಧಾರಣೆಗಳನ್ನು ಮಾಧ್ಯಮಗಳಿಗೆ ಬಿಡುಗಡೆ ಮಾಡಿದೆ. ಚಳವಳಿ ನಿಲ್ಲುವಂತೆ ಕಾಣಲಿಲ್ಲ. ನೌಕರರು ಕಾರಣವಿಲ್ಲದೆ ಮುಷ್ಕರ ಹಿಡಿದರು. ಅವರೊಂದಿಗೆ ಮಾತನಾಡಲು ಹೋದೆ. ಯಾರೂ ನನ್ನೊಂದಿಗೆ ಮಾತನಾಡಲು ಸಿದ್ಧರಿರಲಿಲ್ಲ. ನನ್ನಿಂದ ಬಹಳ ಸಹಾಯ ಪಡೆದ ಕೆಲಸಗಾರರು ನನ್ನನ್ನು ಎಳೆದಾಡತೊಡಗಿದರು. ಕೆಳಗೆ ಕೆಡವಿದರು. ಅಂಗಿಯನ್ನು ಹರಿದರು. ಏನು ಮಾಡಬೇಕೆಂದು ಹೊಳೆಯಲಿಲ್ಲ. ಕೆಲವರು ಕೂದಲು ಎಳೆದರು. ಕೆಲವರು ಹೊಡೆದೂ ಬಿಟ್ಟರು.'' ಮುಂದಿನ ವಾರದಲ್ಲಿ ಸಜನಾ ರಾಜೀನಾಮೆ ನೀಡಿ ಹೊರಬಂದರು. ಸರ್ಕಾರ ಫ್ಯಾಕ್ಸ್ ಮೂಲಕ ರಾಜೀನಾಮೆ ಒಪ್ಪಿಕೊಂಡಿತು! ರೋಗನಿದಾನದ (ಪೆಥಾಲಜಿ) ಪ್ರಕಾಂಡ ಪಂಡಿತರಾದ ನಾಗಲೋಟಿಮಠರಿಗೆ ಭ್ರಷ್ಟಾಚಾರದ ರೋಗನಿದಾನ ನಿಧಾನವಾಗಿ ಅರ್ಥವಾಯಿತು.

ಇದಾವುದರಿಂದಲೂ ಧೃತಿಗೆಡದ ಸಜನಾ ಮುಂದೆ ಬಾಗಲಕೋಟೆಯ ಕಾಲೇಜಿಗೆ ಭದ್ರ ಬುನಾದಿ ಹಾಕಿದರು. ನಡುವೆಯೇ ಕನ್ನಡದಲ್ಲಿ, ಇಂಗ್ಲಿಷ್‌ನಲ್ಲಿ ನೂರಾರು ಲೇಖನ, ಪುಸ್ತಕಗಳನ್ನು ಬರೆದರು. ಭಾಷಣ ಅವರಿಗೆ ಸಿದ್ಧಿಸಿದ ಕಲೆ. ಧಾರವಾಡದ ಗಂಡು ಭಾಷೆಯ ಅವರ ಭಾಷಣ ಕೇಳಿದವರಿಗೆ ತಮ್ಮ ಜೀವನಶೈಲಿಯನ್ನು ಬದಲಿಸಿಕೊಳ್ಳುವ ಮನಸ್ಸಾಗದೇ ಇರುತ್ತಿರಲಿಲ್ಲ. ಇವರ ಒಂದು ಭಾಷಣದ ಪ್ರಭಾವವನ್ನು ಪ್ರೊ|| ಜಿ. ಟಿ. ನಾರಾಯಣರಾಯರು ದಾಖಲಿಸಿದ್ದಾರೆ. ಭಾಷಣದ ವಿಷಯ : 'ಮಾದಕ ಚಟಗಳ ಮಾರಕ ಪರಿಣಾಮಗಳು'. ಇದನ್ನು ಕೇಳಿದ ಹಳ್ಳಿಯವನೊಬ್ಬ ಗದ್ಗದಿತನಾಗಿ, ''ಇನ್ನು ಮುಂದೆ ಬೀಡಿ ಸೇದಾಕಿಲ್ಲ, ಹೆಂಡಾ ಕುಡಿಯಾಕಿಲ್ಲ, ಎಲ್ಲ ಬುಟ್ಬುಟೆ'' ಎಂದನಂತೆ.

ನಮ್ಮ ರಾಜ್ಯ-ಕೇಂದ್ರ ಸರ್ಕಾರಗಳು, ಇವರನ್ನು ಹೇಗೆ ಬಳಸಿಕೊಂಡವು ಎಂದು ಯೋಚಿಸಿದರೆ, ಯೋಚಿಸುತ್ತಲೇ ಇರಬೇಕಾಗುತ್ತದೆ. ಅವರ ಮನೆಯವರಿಗೆ, ಜೊತೆಯವರಿಗೆ ಅವರೊಂದಿಗೆ ಹೃತ್ಪೂರ್ವಕವಾಗಿ ಸಹಕರಿಸಿದ ತೃಪ್ತಿಯಿರುತ್ತದೆ. ನಿಷ್ಕ್ರಿಯತೆ, ಸೋಮಾರಿತನಗಳ ಅಕ್ಷಮ್ಯ ಅಪರಾಧಿಗಳಿಗೆ ? ನಮಗೆ ?

ಕೆ. ಎಸ್. ನವೀನ್
೨-೩, ಓಬಳಪ್ಪ ಅಡ್ಡರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು - ೫೬೦ ೦೦೪

## ಪರಿಸರ

ಅಂದು :
ಗಂಗಾ ಸ್ನಾನ
ತುಂಗಾ ಪಾನ

ಇಂದು :
ಗಂಗಾ ಸ್ನಾನ
ತುಂಗಾ ಪಾನ
ನಿಮ್ಮ ಆರೋಗ್ಯ
ಜೋಪಾನ !



ಬಿ. ಶ್ರೀನಿವಾಸ ಹಾನಗಲ್ಲ, ವಿಜಯನಗರ ಬಡಾವಣೆ, ಹಾನಗಲ್ಲ, ಹಾವೇರಿ ಜಿಲ್ಲೆ

# ಹಿಂದಿನ ಕರ್ನಾಟಕದಲ್ಲಿದ್ದ 'ಬೆಸವೊಕ್ಕಳು'

ಇಂದು 'ಪ್ರಜಾಪ್ರಭುತ್ವ' ಜನಪ್ರಿಯ ರಾಜಕೀಯ ಪರಿಭಾಷೆ. ನಮ್ಮಂಥ ಬಂಡವಾಳಶಾಹಿ ದೇಶಗಳಲ್ಲಿ 'ಪ್ರಜೆ' ಪ್ರಭುವಾಗಿರಲಾರ. ಇಲ್ಲಿರುವುದು ಬೂರ್ಷ್ವಾ ಪ್ರಜಾಪ್ರಭುತ್ವ. ಅನೇಕ ವರ್ಗಗಳು (ಶೋಷಕ ಮತ್ತು ಶೋಷಿತ) ಇರುವ ಸಮಾಜದಲ್ಲಿ ಇದು ಅನಿವಾರ್ಯ. ವರ್ಗರಹಿತ ಸಮಾಜವಾದಿ ದೇಶಗಳಲ್ಲಿ 'ಜನತೆಯ ಪ್ರಜಾಪ್ರಭುತ್ವ'ವಿರುತ್ತದೆಂದು ಹೇಳಲಾಗುತ್ತದೆ.

ಕನ್ನಡ ಶಾಸನಗಳನ್ನು ಓದುತ್ತಿದ್ದರೆ ಹಿಂದಲ ಊಳಿಗಮಾನ್ಯ ಕಾಲದಲ್ಲೂ ಅನೇಕ ವರ್ಗಗಳು ಅಸ್ತಿತ್ವದಲ್ಲಿದ್ದುದು ಖಚಿತವಾಗುತ್ತದೆ. ಗ್ರಾಮೀಣ ಭಾಗದ ಪ್ರಧಾನ ಭೂಮಾಲಿಕ ವರ್ಗವಾದ ಗೌಡರುಗಳಿಗೆ 'ಪ್ರಜೆ' ಎಂಬ ಪದವನ್ನು ಬಳಸುತ್ತಿದ್ದರು. ಒಂದು ನಿದರ್ಶನವನ್ನು ಕೊಡುವುದಾದರೆ –

ಹಲಕೂರಿನ (ಎಪಿಗ್ರಾಫಿಯ ಕರ್ನಾಟಿಕಾ ೧೦) ೧೨ನೇ ಶತಮಾನದ ಒಂದು ಶಾಸನ ಭೂಮಾಲಿಕರಾದ ಹಲವು ಗೌಡರನ್ನು 'ಸಮಸ್ತ ಪ್ರಜೆ ಗಾವುಂಡು'ಗಳು ಎಂದರೆ ಮತ್ತೊಂದು ಶಾಸನ ಜಮೀನುದಾರ ಗೌಡರುಗಳ ಜತೆ ದೇಗುಲಗಳ ಸ್ಥಾನಿಕರಾದ ಜೀಯರನ್ನು ಒಳಗೊಂಡು 'ಸಮಸ್ತ ಪ್ರಜೆ'ಗಳು ಎಂದಿದೆ. ಜೇಡಗೊತ್ತಳಿ ಮತ್ತು ೧೨ ಹಿಟ್ಟಿನ ಕಾರುಕ ವರ್ಗವನ್ನು 'ಬೆಸವಕ್ಕಳು' ಎನ್ನುತ್ತದೆ. ಇಂಥ ನಿದರ್ಶನಗಳು ಸಾಕಷ್ಟು ದೊರಯುತ್ತವೆ. ಊಳಿಗಮಾನ್ಯ ಕಾಲದಲ್ಲಿ ಶೋಷಕ ಮತ್ತು ಶೋಷಿತರಲ್ಲಿದ್ದ ವಿವಿಧ ಸಮೂಹಗಳನ್ನು ಸೂಚಿಸುವ ವಿಶೇಷ ಪದಗಳು ಬಳಕೆಯಲ್ಲಿದ್ದವು.

ಈ ವರ್ಗಗಳ ಮಧ್ಯೆ ಇದ್ದ ವೈರುಧ್ಯವೆಂಥದು ? ಸಮಾಜವನ್ನು ಚಲನಶೀಲಗೊಳಿಸಿದ್ದ ಪ್ರಧಾನ ವೈರುಧ್ಯ ಯಾವ ವರ್ಗಗಳ ಮಧ್ಯೆ ಇತ್ತು? ಅವುಗಳ ನಡುವೆ ಸಂಘರ್ಷ ಯಾವ ಸ್ವರೂಪದಲ್ಲಿತ್ತು? ಇಂಥ ಪ್ರಶ್ನೆಗಳು ನಮ್ಮ ನಿಜವಾದ ಚರಿತ್ರೆಯನ್ನು ಸಮರ್ಪಕವಾಗಿ ತಿಳಿದುಕೊಳ್ಳಲು ತುಂಬ ಮುಖ್ಯ.

ಚಕ್ರವರ್ತಿಯಿಂದ ಹಿಡಿದು ಮಹಾಪ್ರಧಾನ, ದಣ್ಣಾಯಕ, ಮಹಾಪ್ರಭು, ಮಹಾಸಾಮಂತ ಮೊದಲಾದ ಮೊದಲ ಹಂತದ ಶೋಷಕ ವರ್ಗಕ್ಕೆ 'ಶ್ರೀಮತ್' ಎಂಬ ವಿಶೇಷಣ ಮತ್ತು ಬಿರುದು ಬಾವಲಿಗಳನ್ನು ಬಳಸುವುದು ಸಾಮಾನ್ಯ. ಇವರ ಜತೆ ಇನ್ನೊಂದು ಪ್ರಮುಖ ಶೋಷಕ ವರ್ಗ ದೊಡ್ಡ ವ್ಯಾಪಾರಸ್ಥರದು.

ಶ್ರಮಿಕ ವರ್ಗದಲ್ಲಿ ಪ್ರಮುಖರಾದವರು ಕರಕುಶಲಕರ್ಮಿ ವರ್ಗ (ಆರ್ಟಿಸಾನ್ ಕ್ಲಾಸ್). ನಮ್ಮ ಶಾಸನಗಳು ಇವರಿಗೆ ೮ ಹಿಟ್ಟು, ಪಂಚಾಳ, ಕಾರುಕ, ೫ ವರ್ಗ, ಆಯಗಾರ ಮುಂತಾದ ಹಲವು ಪರಿಭಾಷೆಗಳನ್ನು ಬಳಸಿವೆ. ಭೂರಹಿತ ಕೃಷಿ ಕೂಲಿಕಾರರನ್ನು ಮತ್ತು ಇತರ ಬಡವರನ್ನು ಬೆಸವೊಕ್ಕಳು (ಕೆಲಸಕ್ಕಿದ್ದ ಸೇವಕರು), ಬಿನುಗು, ಚಿಲುವಾನ, ವೋವಕ್ಕಳು ಎಂದು ಹೆಸರಿಸಿದರೆ; ಗದ್ದೆ, ತೋಟ, ಹೊಲಗಳನ್ನು ಮಾಡುತ್ತಿದ್ದ ರೈತರಿಗೆ ಒಕ್ಕಲು (೬೦ ಒಕ್ಕಲು, ೧೦೦ ಒಕ್ಕಲು, ೫೦ ಒಕ್ಕಲು, ೧೦೦೦ ಒಕ್ಕಲು ಇತ್ಯಾದಿ), ಕೀಳು ಒಕ್ಕಲು, ೪ ಎಳಮೆ, ತೋಟಿಗರು, ಯಾಣಿಕಾರ, ಕೇಣಿಕಾರ, ಗೇಣಿಕಾರ, ತಂಬುಲಿಗ (ಸಾಸಿರ್ವರು, ಐನೂರ್ವರು ಇತ್ಯಾದಿ), ಮೇಟಿ, ಉಗುರ ೩೦೦ರ್ವರು ಮುಂತಾಗಿ ಹೇಳಲಾಗುತ್ತಿತ್ತು.

ಎಕ್ಕಟಿಗರು, ಲೆಂಕರು, ೧೦೦೦ ಪರಿಗ್ರಹ, ಬಂಟ ೧೦೦೦, ಬಿಲ್ಲ ೩೦೦, ಹುಲಿಯ (ಹೊಲೆಯ), ಜಂಗುಳಿ, ಅಂಕಕಾರ, ವೇಳೆವಾಳಿ, ಗರುಡ, ಬಾಣದ ಮುಂತಾದ ಸೈನಿಕರು ಅಥವಾ ಸೈನಿಕ ಸಂಘಗಳು ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ಹೊಲೆಯ, ಮಾದಿಗ, ತಳವಾರ, ಬೇಡ, ಮೇದ, ಗೊಲ್ಲ, ಗಾಣಿಗ, ಉಪ್ಪಾರ, ಅಗಸ, ನಾಯಿಂದ, ಕಂಚುಗಾರ, ಕಲುಕುಟಿಗ, ಒಡ್ಡರು, ಕುಂಬಾರ, ಅಕ್ಕಸಾಲಿ, ಜೇಡ, ಬಡಿಗ, ಕಮ್ಮಾರ, ಕುರುಬ, ಸಮಗಾರ, ಕೋಲುಕಾರ, ಡೊಂಬ, ಅಂಬಿಗ, ಬೋವ, ಶೂದ್ರ ಮುಂತಾದ ಜಾತಿವಾಚಕ ಪರಿಭಾಷೆಯೂ ಸಾಕಷ್ಟು ಬಳಕೆಯಾಗಿದೆ. ತೊತ್ತು, ಸೂಳೆ, ಊಳಿಗ, ಜೀತ, ಬಿಟ್ಟಿ, ವಿರಾಡ, ಕೂಲಿ, ಹಳ್ಳಿಕಾರ ಮುಂತಾದ ಪದಗಳು ಆ ಕಾಲದ ಇತರ ಶೋಷಿತ ವರ್ಗವನ್ನು ಮತ್ತು ಸ್ಥಿತಿಗತಿಯನ್ನು ಸೂಚಿಸುತ್ತಿತ್ತು.

ಈ ಲೇಖನದಲ್ಲಿ ಶಾಸನಗಳು ಹೆಸರಿಸುವ ಬೆಸವೊಕ್ಕಳು ಎಂಬ ತೀರ ಸಾಮಾನ್ಯ ವರ್ಗವನ್ನು ಕುರಿತು ಮಾತ್ರ ಚರ್ಚೆ ಮಾಡಲಾಗಿದೆ. ಕಲ್ನಾಟಿನ ವಿಷಯವನ್ನು ತಿಳಿಸುವ ೧೦ನೇ ಶತಮಾನದ ಗಂಗರ ಕಾಲದ ಒಂದು ಶಾಸನ (ಈ. ಸಿ. ೩ ಇಗ್ಗಲಿ. ನಂಜನಗೂಡು ತಾಲ್ಲೂಕು) ಬೆಸಮಕ್ಕಳ ಹೆಸರುಗಳನ್ನು ಹೇಳುವುದು ವಿಶೇಷ. ಸಂಪಾದಕರು ಬೆಸವಕ್ಕಳಿಗೆ 'ಸಬೊರ್ಡಿನೇಟ್ಸ್', 'ಅದರ್ ರಿಸ್ಪಾನ್ಸಿಬಲ್ ಸಿಟಿಜನ್ಸ್' ಎಂಬ ಅರ್ಥ ಹೇಳಿದ್ದು, ಒಟ್ಟಾರೆ ಅಧ್ಯಯನದ ಹಿನ್ನೆಲೆಯಲ್ಲಿ ಈ ಅರ್ಥ ಅಸಮರ್ಪಕವೆನಿಸುತ್ತದೆ. ಏಕೆಂದರೆ, ಇತರರ ಹೆಸರನ್ನು ಹೇಳಿ ಬೆಸವಕ್ಕಳು ಎಂದು ಪ್ರತ್ಯೇಕವಾಗಿ ಈ ಶಾಸನ ಸೂಚಿಸುರುವಂತೆ ತೋರುತ್ತದೆ.

'ಬೆಸವಕ್ಕಳು ಬೀರವಣ' ಎಂಬ ತೆರಿಗೆ ಸಾಕಷ್ಟು ಹಿಂದಿನದು. ಕ್ರಿ.ಶ. ೧೦೪೮ರ ತೊಣಚಿ (ಈ.ಸಿ. ೬. ಕೃಷ್ಣರಾಜಪೇಟೆ ತಾಲ್ಲೂಕು) ಎಂಬಲ್ಲಿಯ ಶಾಸನದಲ್ಲಿ ಈ ಅಂಶವಿದೆ. ಬೆಸವಕ್ಕಳಿಗೆ ಸಂಪಾದಕರು ಇಲ್ಲಿ 'ಅಟೆಂಡೆಂಟ್ಸ್' ಎಂದಿರುವುದನ್ನು ಗಮನಿಸಿ. ಅನೇಕ ಕಡೆ ತೆರಿಗೆಯ ಹೆಸರಾಗಿ ಬರುವ 'ಬೀರವಣ' ಬೆಸವಕ್ಕಳಿಗ ಸಂಬಂಧಿಸಿತ್ತು ಎಂಬುದು ಈ ಶಾಸನದಿಂದ ಖಚಿತವಾಗುವ ಸಂಗತಿ. ಇದು ಬೆಸವಕ್ಕಳನ್ನು ಇಟ್ಟುಕೊಂಡಿದ್ದ ಒಡೆಯರು ಸಲ್ಲಿಸುತ್ತಿದ್ದ ತೆರಿಗೆ ಎಂದು ಊಹಿಸಬಹುದು. ಇಲ್ಲವೆ ಬೆಸವೊಕ್ಕಳೇ ಸ್ವತಃ ಕೊಡಬೇಕಿದ್ದ ತೆರಿಗೆಯೂ ಇರಬಹುದು.

ಗಂಗರ ಕಾಲದ (ಈ. ಸಿ. ೫ ಮೈಸೂರು. ೧೧ನೇ ಶತಮಾನ) ಮತ್ತೊಂದು ಕಲ್ನಾಡ ದತ್ತಿ ತಾಮ್ರ ಶಾಸನದಲ್ಲಿ ಬರುವ ಬೆಸಮಕ್ಕಳು ಎಂಬ ಪದಕ್ಕೆ ಸಂಪಾದಕರು 'ಫಾರ್ಮರ್ಸ್' ಎಂಬ ಅರ್ಥ ಹೇಳಿದ್ದಾರೆ. ಹೀಗೆ ಮೂರು ಕಡೆ ಬೇರೆ ಬೇರೆ ಅರ್ಥವನ್ನು ಹೇಳಿರುವುದು ಈ ಪದದ ಬಗೆಗಿರುವ ಅರ್ಥದ ಗೊಂದಲಕ್ಕೆ ಸಾಕ್ಷಿ.

೧೨ನೇ ಶತಮಾನದಲ್ಲಿ ಅರಸೀಕೆರೆ (ಹಾಸನ ಜಿಲ್ಲೆ) (ಈ. ಸಿ. ೧೦. ಜಯಚಾಮರಾಜಪುರ) ಭಾಗದಲ್ಲಿ ಹನ್ನೆರಡು ಹಿಟ್ಟಿನ ಬೆಸವಕ್ಕಳು ಎಂಬ ಪದ ಪ್ರಚಲಿತವಿತ್ತು. ಉತ್ತರ ಕರ್ನಾಟಕದಲ್ಲಿ ಎಂಟು ಹಿಟ್ಟು ಎಂಬುದು ಇದಕ್ಕೆ ಪರ್ಯಾಯ ಪದ. ಕಾರುಕರನ್ನು (ಕರಕುಶಲ ಕರ್ಮಿ ವರ್ಗ) 'ಹಿಟ್ಟು' ಎನ್ನಲಾಗುತ್ತಿತ್ತು. ಹಾಗಾಗಿ ಕೆಲವು ಕಡೆ 'ಬೆಸವಕ್ಕಳು' ಬಡಿಗ, ಕಮ್ಮಾರ ಮುಂತಾದ ಕರಕುಶಲಿಗಳನ್ನು ಸೂಚಿಸುವ ಪದವಾಗಿತ್ತು. ಇವರ ಸಾಮಾಜಿಕ ಸ್ಥಾನಮಾನ ತೀರ ಕೆಳಗಿರಲಿಲ್ಲ ಎಂದು ಈ ಶಾಸನ ಸಂದರ್ಭದಿಂದ ಊಹಿಸಬಹುದು. ಊಳಿಗಮಾನ್ಯ ಕಾಲದ ಪ್ರಾರಂಭ ಹಂತದಲ್ಲಿ ಕರಕುಶಲ ಕರ್ಮಿಗಳು ಸಾಮಾನ್ಯ ಜನವಾಗಿದ್ದರು. ಆದರೆ ಆರ್ಥಿಕತೆ ವೃದ್ಧಿಸಿದಂತೆ ಇವರಲ್ಲಿ ಕೆಲವು ವಿಭಾಗಗಳು (ಉದಾಹರಣೆಗೆ – ಶಿಲ್ಪಿಗಳು, ಅಕ್ಕಸಾಲಿಗರು, ಕಮ್ಮಾರರು ಮುಂತಾದವರು) ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲೆ ಬಂದಂತೆ ತೋರುತ್ತದೆ. ಆಗ ಇವರನ್ನು ಬೆಸವಕ್ಕಳಿಂದ ಪ್ರತ್ಯೇಕಿಸಿ ಹೇಳುವ ರೂಢಿ ಬಂತು.

ಬಸದಿಯ ಅಜ್ಜಿಯರ ಆಹಾರ ದಾನಕ್ಕೆ ಗದ್ದೆಯನ್ನು ಬಿಡುವ ಪ್ರಸಂಗದಲ್ಲಿ ಊರೊಡೆಯರ ಜತೆ ಬೆಸವಕ್ಕಳೂ ಇದ್ದರೆಂದು ದುಗ್ಗಾವತಿಯ (ಹಂಪಿ ಕ.ವಿ.ವಿ. ಶಾಸನ ಸಂ. ೧ ಬಳ್ಳಾರಿ ಜಿಲ್ಲೆ) ೧೨ನೇ ಶತಮಾನದ ಶಾಸನ ಹೇಳುತ್ತದೆ. ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣ್ಣೆಕಲ್ಲಿನ ಕ್ರಿ.ಶ. ೧೨೨೬ರ ಶಾಸನ ೮ ಹಿಟ್ಟು ಮತ್ತು ಬೆಸವಕ್ಕಳನ್ನು ಪ್ರತ್ಯೇಕವಾಗಿ ಹೇಳುವುದರಿಂದ ೮ ಕರಕುಶಲಿ ವರ್ಗವನ್ನು ಹೊರತುಪಡಿಸಿ ಇತರ ಶ್ರಮಿಕರನ್ನು ಬೆಸವಕ್ಕಳು ಎಂದು ಹೇಳುವ ರೂಢಿ ಬಂದಿತ್ತು ಎಂದು ಹೇಳಬೇಕಾಗುತ್ತದೆ.

ರಾಣೆಬೆನ್ನೂರು ತಾಲೂಕಿನ ಕ್ರಿ.ಶ. ೧೨೩೫ರ ಬಿನ್ನವೂರ ಶಾಸನದಲ್ಲಿ ಬರುವ ಬೆಸವಕ್ಕಳಿಗೆ ಸಂಪಾದಕರು (ಕೆ.ಐ. ೨ ನಂ. ೩೭) 'ವಿಲೇಜ್ ಸರ್ವಂಟ್ಸ್' ಎಂಬರ್ಥ ಹೇಳಿದ್ದಾರೆ. ಶೋಷಕ ವರ್ಗಕ್ಕೆ 'ಪ್ರಜೆ' ಎಂಬ ಪದ ಬಳಕೆ ಇದ್ದುದು ಈ ಶಾಸನದಿಂದಲೂ ತಿಳಿದುಬರುತ್ತದೆ.

ದೇಗುಲಗಳಿಗೆ ಮತ್ತು ಇತರರಿಗೆ ದಾನವನ್ನು ನೀಡುವ ಸಂದರ್ಭದಲ್ಲಿ ಶೋಷಕ ಮತ್ತು ಶೋಷಿತರೆಲ್ಲ ಒಂದೆಡೆ ಸೇರುತ್ತಿದ್ದರು. ಇವರಲ್ಲಿ ಬೆಸವಕ್ಕಳೂ ಸೇರಿರುತ್ತಿದ್ದರು. ಕೋಡಿಯಮಠದ (ಈ.ಸಿ. ೭.೮ ಶಿವಮೊಗ್ಗ ಜಿಲ್ಲೆ) ಕ್ರಿ.ಶ. ೧೨೪೩ರ ಶಾಸನದಲ್ಲಿ ಈ

ಎಸ್. ಎಸ್. ಹಿರೇಮಠ

ವಿಷಯವಿದೆ. ತಾವು ಕೆಲಸ ಮಾಡುವ ಧಣಿ ಬೇರೆಯವನಾಗುತ್ತಿದ್ದುದರಿಂದ, ಬೆಸಮಕ್ಕಳಿಗೂ ಹೊಸ ಧಣಿಗಳ ಪರಿಚಯವಾಗುವುದು ಅಗತ್ಯವಿರುತ್ತಿತ್ತು.

'ನೆತ್ತರು ಕೆಯ್ಯಿ' (ಒಡೆಯನಿಗಾಗಿ ಹೋರಾಡಿ ಮಡಿದವರು) ಮೂಲಕ ಬೆಸವಕ್ಕಳಿಗೂ ಒಂದಿಷ್ಟು ಭೂಮಿ ಸ್ವಂತ ಆಸ್ತಿಯಾಗಿ ದೊರಕುತ್ತಿತ್ತೋ ಏನೋ ? ಹೀಗಾಗಿ ಬೆಸವಕ್ಕಳೂ ಸಣ್ಣ ಹಿಡುವಳಿದಾರರಾಗಲು ಸಾಧ್ಯವಾಗುತ್ತಿತ್ತೆಂಬುದನ್ನು ಹಿರೇಕೆರೂರು ತಾಲ್ಲೂಕು ನೂಲಗೇರಿಯ ಶಾಸನ ಸೂಚಿಸುತ್ತದೆ (ಕೆ.ಐ. ೪. ೧೨೪೬ ಕ್ರಿ.ಶ.). ಆದರೆ ಇಂಥ ನಿದರ್ಶನ ಇದೊಂದೆ. ಇದೂ ಕೂಡ ಅನುಮಾನಾಸ್ಪದ.




ಯಳಂದೂರ ತಾಲ್ಲೂಕು ಹೊನ್ನೂರಿನ ಕ್ರಿ.ಶ. ೧೨೮೩ರ ಶಾಸನದಲ್ಲಿ ಬರುವ ಉಪ್ಪಲಿಗರಿಗೆ (ಉಪ್ಪಾರರು) ಬೆಸವಕ್ಕಳೆಂದು ಹೇಳಲಾಗಿದೆ ಎಂದು ಈ. ಸಿ. ೪ ಸಂಪಾದಕರು ನಿರೂಪಿಸಿದ್ದಾರೆ. ೧೫ನೇ ಶತಮಾನದ ನಂತರದ ಶಾಸನಗಳಲ್ಲಿ ಬಿನುಗು – ಬೆಸವಕ್ಕಳನ್ನು (ಬೆಸವಕ್ಕಲು ಎಂದೂ ಹೇಳಿದೆ) ತೆರಿಗೆ, ಸುಂಕ, ಪೂರ್ವಮರ್ಯಾದೆಗಳ ಪಟ್ಟಿಯಲ್ಲಿ ಸೇರಿಸುತ್ತಿದ್ದುದನ್ನು ಕಾಣಬಹುದು. ನಿದರ್ಶನಕ್ಕೆ – ಈ. ಸಿ. ೪ರ ಚಾಮರಾಜನಗರ ತಾಲ್ಲೂಕಿನ ಕ್ರಿ. ಶ. ೧೪೨೨ರ ಮಲೆಯೂರು ಶಾಸನ; ಈ.ಸಿ. ೩ರ ಯೀರೇದೇವನಪುರದ ಕ್ರಿ.ಶ. ೧೪೮೮ರ ಶಾಸನ; ಈ. ಸಿ. ೩ರ ಗುಂಡ್ಲುಪೇಟೆ ತಾಲ್ಲೂಕಿನ ತ್ರಿಯಂಬಕಪುರದ ಕ್ರಿ.ಶ. ೧೪೯೨ರ ಶಾಸನ ; ಈ.ಸಿ. ೩ರ ವೀರನಪುರದ ೧೬ನೇ ಶತಮಾನದ ಶಾಸನ; ಇದೇ ಸಂಪುಟದ ಪುತ್ತನಪುರದ ಕ್ರಿ.ಶ. ೧೬೭೦ರ ಶಾಸನ ಮುಂತಾದುವನ್ನು ನೋಡಬಹುದು.

ಜೀವಂತ ವ್ಯಕ್ತಿಗಳಾಗಿ ಗುರುತಿಸಲಾಗುತ್ತಿದ್ದ ಹಂತದಿಂದ, ಸುಂಕ, ತೆರಿಗೆಗಳ ನಿರ್ಜೀವ ಪಟ್ಟಿಯಲ್ಲಿ ಬಿನುಗು – ಬೆಸವಕ್ಕಳನ್ನು ನಮೂದಿಸುವ ಹಂತಕ್ಕೆ ಕುಸಿದುದರ ಅರ್ಥವೇನು ? ಬೆಸವಕ್ಕಳು ಸಾಮಾಜಿಕವಾಗಿ ಇನ್ನೂ ಪಾತಾಳಕ್ಕೆ ನೂಕಲ್ಪಟ್ಟರೆಂದೇ ? ಇಷ್ಟೇ ಅಲ್ಲ, ಶಾಪಾಶಯಗಳಲ್ಲಿ ಹೊಲೆಯ ಮಾದಿಗರನ್ನು ಹೆಸರಿಸುತ್ತಿದ್ದಂತೆ ಬೆಸವಕ್ಕಳನ್ನೂ ಹೆಸರಿಸುವ ರೂಢಿ ಜಾರಿಗೆ ಬಂದಿತು. ಕ್ರಿ.ಶ. ೧೫೩೦ರ ಗೊಲ್ಲರ ಹೊಸಹಳ್ಳಿ ಶಾಸನ (ಈ. ಸಿ. ೧೦ ಚನ್ನರಾಯಪಟ್ಟಣ ತಾಲ್ಲೂಕು) ಹೇಳುವ ಧರ್ಮಕ್ಕೆ ಪ್ರತಿಕೂಲವಾದವರು 'ತಂಮ ಮಹಿಮಾನಿಕೆಯು ಕೃಷ್ಣನಾಯಕನ ಬೆಸದವರಿಗೆ ಕೊಟ್ಟವರು' (ತಮ್ಮ ಹೆಂಡಿರನ್ನು ದಾನಿಯ ಬೆಸವಕ್ಕಳಿಗೆ ಕೊಟ್ಟಂತೆ ಎಂಬರ್ಥ) ಎಂದೂ; 'ಯಿ ಗ್ರಮಕೆ ತಪಿದವರು ತಂನ ಹೆಂಡಿರನು ತಂನ ಬೆಸವರಿಗೆ ಕೊಟ್ಟ ಸಮಾನ' ಎಂದು (ಈ. ಸಿ. ೧೦ ಅಂಕನಹಳ್ಳಿಯ ಕ್ರಿ.ಶ. ೧೫೩೭ರ ಶಾಸನ); ದಾನ ಕೆಡಿಸಿದವರು 'ರಘುಪತಿರಾಯರ ಒಡೆಯರ ಬೆಸಕರಿಗೆ ತಮ್ಮ ಹೆಂಡಿರ ಕೊಟ್ಟವರು' ಎಂದು (ಈ. ಸಿ. ೮ ಆಲೂರು ತಾಲ್ಲೂಕು ಪಾಳ್ಯ ೧೫೩೫) ಹೇಳುವುದನ್ನು ಗಮನಿಸಬೇಕು.

ಈ ಎಲ್ಲ ಸಂದರ್ಭಗಳಿಂದ 'ಬೆಸವಕ್ಕಳು' ಎಂದರೆ ಒಡೆಯರ ಸೇವಕರು ಎಂದು ಸ್ಪಷ್ಟವಾಗುತ್ತದೆ. ಇವರೇ ಊಳಿಗಮಾನ್ಯ ಕಾಲದ ಜೀತದಾಳುಗಳಾಗಿದ್ದರೇ ? ಇವರು ತೊತ್ತುಗಳಿಗೆ (ಗಂಡುದೊತ್ತು, ಹೆಣ್ಣುದೊತ್ತು) ಸಮಾನವಾಗಿದ್ದರೇ ? ಅಥವಾ ಭಿನ್ನವಾಗಿದ್ದರೇ ? ಇದೂ ಚರ್ಚೆಯ ವಿಷಯ. ಏಕೆಂದರೆ ಶಾಸನಗಳು ತೊತ್ತುಗಳನ್ನು ಪ್ರತ್ಯೇಕವಾಗಿ ನಮೂದಿಸುತ್ತವೆ. 'ಬಿನುಗು', 'ಚಿಲುವಾನ' ಪ್ರತ್ಯೇಕ ವಿವೇಚನೆಯನ್ನು ಬೇಡುವ ಇಂಥದೇ ಪರಿಭಾಷೆಗಳು. ವಿಶೇಷವೆಂದರೆ 'ಬೆಸವೊಕ್ಕಳು' ಉಲ್ಲೇಖವಿರುವ ಬಹುತೇಕ ಶಾಸನಗಳು ಮಧ್ಯ ಮತ್ತು ದಕ್ಷಿಣ ಕರ್ನಾಟಕಕ್ಕೆ ಸೀಮಿತವಾಗಿವೆ. ಉತ್ತರ ಕರ್ನಾಟಕದಲ್ಲಿ ಇವರಿಗೆ ಏನೆಂದು ಕರೆಯುತ್ತಿದ್ದರು ?

ಒಟ್ಟಾರೆ ಬೆಸವೊಕ್ಕಳು, ಬಿನುಗು, ಚಿಲುವಾನಗಳು ಶೋಷಿತ ವರ್ಗದಲ್ಲಿ, ವರ್ಗ ಹೋರಾಟವನ್ನು ಕಟ್ಟಿ ಬೆಳೆಸುವಷ್ಟು ಪ್ರಬಲ ಸಮೂಹವಾಗಿರಲಿಲ್ಲ. ಆದರೆ ೧೨ನೇ ಶತಮಾನದ ಚಳುವಳಿಯಲ್ಲಿ ಇವರು ಅಲ್ಪ ಪ್ರಮಾಣದಲ್ಲಾದರೂ ಸೇರಿಕೊಂಡಿದ್ದಿರಬೇಕು. ರಾಘವಾಂಕನ 'ಸಿದ್ಧರಾಮ ಚರಿತೆ'ಯಲ್ಲಿ ಬರುವ, ಸಿದ್ಧರಾಮನ ಅನುಯಾಯಿಗಳಾಗಿದ್ದ 'ಏಕ್ಕವಿಂಡು' ಇಂಥ ಊಹೆಗೆ ಆಧಾರವಾಗುತ್ತದೆ.

**ಎಸ್. ಎಸ್. ಹಿರೇಮಠ**
ಪ್ರಾಚಾರ್ಯರು, ಕೊಟ್ಟೂರೇಶ್ವರ ಮಹಾವಿದ್ಯಾಲಯ, ಕೊಟ್ಟೂರು - ೫೮೩ ೧೩೪

---

ಈ ವರ್ಷ ಸುವರ್ಣ ಕರ್ನಾಟಕ ವರ್ಷಾಚರಣೆಯ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಮಹನೀಯರಿಗೆ ಕರ್ನಾಟಕ ಏಕೀಕರಣ ಪ್ರಶಸ್ತಿ ನೀಡಿ ಗೌರವಿಸಿತು. ಈ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನ ಮತ್ತು ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಗಳ ವತಿಯಿಂದ ಪುರಸ್ಕೃತರನ್ನು ಅಭಿನಂದಿಸಲು ಔತಣಕೂಟ ಏರ್ಪಡಿಸಲಾಗಿತ್ತು. ಕನ್ನಡ ರಾಜ್ಯೋತ್ಸವದ ದಿನ ಜರುಗಿದ ಔತಣಕೂಟದಲ್ಲಿ ಪುರಸ್ಕೃತರಾದ ಶ್ರೀ ಕೋ. ಚೆನ್ನಬಸಪ್ಪ, ಶ್ರೀ ಎಚ್. ಎಸ್. ದೊರೆಸ್ವಾಮಿ, ಪ್ರೊ॥ ಜಿ. ವೆಂಕಟಸುಬ್ಬಯ್ಯ, ಶ್ರೀ ಅಳವಂಡಿ ಶಿವಮೂರ್ತಿ ಸ್ವಾಮಿ, ಶ್ರೀ ಬಿ. ವಿ. ಕಕ್ಕಿಲ್ಲಾಯ ಮತ್ತು ಎರಡೂ ಸಂಸ್ಥೆಗಳ ಸದಸ್ಯರು ಪಾಲ್ಗೊಂಡಿದ್ದರು.




ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಮಾತನಾಡಿ ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ದಿನಗಳನ್ನು ಮತ್ತು ಎಲ್ಲ ಮಹನೀಯರ ಪಾತ್ರವನ್ನು ಸ್ಮರಿಸಿದರು. ಮಾನ್ಯ ಕಕ್ಕಿಲ್ಲಾಯ ಅವರು ದೇಶ, ರಾಜ್ಯ ಮತ್ತು ಕನ್ನಡ ಭಾಷೆಗೆ ಸಂಬಂಧಿಸಿದಂತೆ ಕಿರಿಯರ ಜವಾಬ್ದಾರಿ ಏನಿರಬೇಕೆಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದರು. ಚಿತ್ರದಲ್ಲಿರುವವರು ಎಡದಿಂದ ಬಲಕ್ಕೆ : ಶ್ರೀ ಕೋ. ಚೆನ್ನಬಸಪ್ಪ, ಶ್ರೀ ಎಚ್. ಎಸ್. ದೊರೆಸ್ವಾಮಿ, ಪ್ರೊ॥ ಜಿ. ವೆಂಕಟಸುಬ್ಬಯ್ಯ, ಶ್ರೀ ಅಳವಂಡಿ ಶಿವಮೂರ್ತಿ ಸ್ವಾಮಿ, ಶ್ರೀ ಬಿ. ವಿ. ಕಕ್ಕಿಲ್ಲಾಯ ಮತ್ತು ಕಕ್ಕಿಲ್ಲಾಯ ಅವರ ಅಣ್ಣನ ಮಗನಾದ ಶ್ರೀ ಬಿ. ವಿ. ಕಕ್ಕಿಲ್ಲಾಯ ಅವರು. (ಕಾಸರಗೋಡು ಏಕೀಕರಣ ಸಮಿತಿಯ ಅಧ್ಯಕ್ಷರು.)

# ಹೊಸ ಪರಮಾಣು ನೀತಿ



**ಡಾ॥ ಎಚ್. ಆರ್. ಪ್ರಭಾಕರ**

ಪರಮಾಣು ಎಂದಕೂಡಲೇ ತಲೆಯಲ್ಲಿ ಮೊದಲು ಸುಳಿಯುವುದು ಆಟಂ ಬಾಂಬ್, ಹೈಡ್ರೋಜನ್ ಬಾಂಬ್, ಹಿರೋಷಿಮಾ, ನಾಗಸಾಕಿ, ಚೆರ್ನೊಬಿಲ್ ಇತ್ಯಾದಿ. ನಂತರ ಮನವರಿಕೆಯಾಗುವುದು ಪರಮಾಣು ವಿದ್ಯುತ್ ಸ್ಥಾವರಗಳು, ಪರಮಾಣು ವೈದ್ಯಕೀಯ ಮುಂತಾದ ಸದುಪಯೋಗಗಳು. ಸ್ವಾತಂತ್ರ್ಯಾನಂತರ ಹೋಮಿ ಭಾಭಾರವರ ನೇತೃತ್ವದಲ್ಲಿ ಪರಮಾಣು ಸಂಶೋಧನಾ ಘಟಕಗಳು ಸ್ಥಾಪನೆಗೊಂಡವು. ಮಹಾತ್ಮಾ ಗಾಂಧಿಯವರ ಮುಂದಾಳತ್ವದಲ್ಲಿ ಶಾಂತಿಯುತ ಹೋರಾಟದಿಂದ ಸ್ವಾತಂತ್ರ್ಯವನ್ನು ಪಡೆದ ಭಾರತ, ಪರಮಾಣುವನ್ನು ವಿಧ್ವಂಸಕ ಕಾರ್ಯಗಳಿಗೆ ಉಪಯೋಗಿಸಬಾರದೆಂದು ಎಲ್ಲರಿಗೂ ಮನವರಿಕೆ ಮಾಡಿಕೊಡಲು ಪಣ ತೊಟ್ಟಿತು. ಈ ನಿಲುವು ಅಮೆರಿಕಾ, ಕೆನಡಾ ಮುಂತಾದ ದೇಶಗಳಿಂದ ಪರಮಾಣು ತಂತ್ರಜ್ಞಾನ ಮತ್ತು ಸಂಶೋಧನೆಯಲ್ಲಿ ಗಣನೀಯ ಸಹಕಾರವನ್ನು ಪಡೆಯಲು ಸಹಾಯಕ ವಾಯಿತು. ಇಪ್ಪತ್ತು ವರ್ಷಗಳಲ್ಲಿ ಪರಮಾಣು ಸಂಶೋಧನೆಯ ಭದ್ರ ಬುನಾದಿ ಹಾಕಲ್ಪಟ್ಟಿತು.

೧೯೭೧ರ ಯುದ್ಧದಲ್ಲಿ ಪಾಕಿಸ್ತಾನದ ವಿಭಜನೆಯ ನಂತರ ಪರಿಸ್ಥಿತಿ ಬದಲಾಯಿಸಿತು. ಅಮೆರಿಕಾ ಮುಂತಾದ ದೇಶಗಳು ಭಾರತದ ಶಾಂತಿಮಂತ್ರವನ್ನು ಶಂಕಿಸ ತೊಡಗಿದವು. ಪರಾಭವಗೊಂಡ ಪಾಕಿಸ್ತಾನ ನಮ್ಮ ಮೇಲೆ ಸೇಡುತೀರಿಸಲು ಅಣ್ವಸ್ತ್ರಗಳನ್ನು ಅಭಿವೃದ್ಧಿಗೊಳಿಸುತ್ತಿದೆ ಎಂದು ಸರ್ಕಾರಕ್ಕೆ ವದಂತಿಗಳು ತಲುಪಿದವು. ಇಂದಿರಾ ಗಾಂಧಿಯವರ ಸರ್ಕಾರ ಅಣ್ವಸ್ತ್ರಗಳನ್ನು ಅತಿ ಶೀಘ್ರವಾಗಿ ತಯಾರಿಸಿ ಆಸ್ಫೋಟಿಸಲು ನಮ್ಮ ಪರಮಾಣು ಸಂಸ್ಥೆಗೆ ಆದೇಶಕೊಟ್ಟಿತು. ಇದು ಬಹುಕಷ್ಟದ ಕೆಲಸವೇನೂ ಆಗಿರಲಿಲ್ಲ. ಪರಮಾಣು ವಿದ್ಯುತ್ ಸ್ಥಾವರಗಳಲ್ಲಿ ಯುರೇನಿಯಂನಿಂದ ಉತ್ಪತ್ತಿಯಾದ ಪ್ಲುಟೋನಿಯಂ ಧಾತುವನ್ನು ಬೇರ್ಪಡಿಸಬಹುದಾಗಿತ್ತು. ಹೀಗೆ ಬೇರ್ಪಡಿಸಿದ ಪ್ಲುಟೋನಿಯಂನಿಂದ ಮಾಡಿದ ಪರಮಾಣು ಸ್ಫೋಟಕವನ್ನು ಥಾರ್ ಮರುಭೂಮಿಯಲ್ಲಿ ೧೯೭೪ರಲ್ಲಿ ನೆಲದಡಿ ಮೊದಲಬಾರಿಗೆ ಸಿಡಿಸಲಾಯಿತು.

ನಮ್ಮ ಶಾಂತಿನಿಲುವಿನ ಬಗ್ಗೆ ಮೊದಲೇ ಶಂಕೆ ತಾಳಿದ್ದ ದೇಶಗಳಿಗೆ ಸಿಟ್ಟುಬಂದಿದ್ದು ಸಹಜ. ಪರಮಾಣು ಸ್ಫೋಟಕ ಕೇವಲ ಶಾಂತಿಯುತವಾದದ್ದೆಂದೂ ಅಣ್ವಸ್ತ್ರವಲ್ಲ ಎಂದೂ ನಮ್ಮ ಸರ್ಕಾರ ಹೇಳಿದ ಹಸಿಸುಳ್ಳನ್ನು ಯಾರೂ ನಂಬಲಿಲ್ಲ. ಪಾಶ್ಚಿಮಾತ್ಯ ದೇಶಗಳು ಮತ್ತು ಜಪಾನ್ ನಮ್ಮ ಮೇಲೆ ಪರಮಾಣು ದಿಗ್ಬಂಧನಗಳನ್ನು ಹೇರಿ ಅಸ್ಪೃಶ್ಯ ದೇಶದಂತೆ ಕಾಣತೊಡಗಿದವು. ಪರಮಾಣು ಕ್ಷೇತ್ರಕ್ಕೆ ಸಂಬಂಧಿಸಿದಂತೆ ಯಾವುದೇ ಸಹಕಾರ ದೊರೆಯ ದಾಯಿತು. ಈ ದಿಗ್ಬಂಧನ ಬಾಹ್ಯಾಕಾಶ ಮತ್ತು ಇತರ ಕ್ಷೇತ್ರಗಳನ್ನೂ ಆವರಿಸಿತು. ಒಂದು ಪರಮಾಣು ಸ್ಫೋಟ ದಿಂದ ನಾವು ಸ್ವಾವಲಂಬಿಗಳಾಗುವುದಿಲ್ಲವೆಂಬುದು ಕಟು ಸತ್ಯ. ೧೯೭೪ರಿಂದ ಈಚೆಗೆ ಪರಮಾಣು, ಬಾಹ್ಯಾಕಾಶ ಇನ್ನೂ ಮುಂತಾದ ಮುಂಚೂಣಿ ಕ್ಷೇತ್ರಗಳಲ್ಲಿ ನಮ್ಮ ಚಳವಳಿ ಬಹಳ ಕುಂಠಿತವಾಯಿತು. ಸೋವಿಯತ್ ಒಕ್ಕೂಟ ೧೯೮೦ರ ದಶಕದಲ್ಲಿ ಛಿದ್ರಗೊಂಡ ನಂತರ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಿತು. ಅನೇಕ ಯೋಜನೆಗಳು ಮಂದಗತಿಯಲ್ಲಿ ಸಾಗಲಾರಂಭಿಸಿದವು.

ಇಪ್ಪತ್ತುಸಾವಿರ ಮೆಗಾವಾಟ್ ಪರಮಾಣು ವಿದ್ಯುತ್ ಉತ್ಪಾದಿಸುವ ಕನಸು ಇನ್ನೂ ನನಸಾಗಿಲ್ಲ. ಭೂಸ್ಥಿರ ಕಕ್ಷೆಯಲ್ಲಿ ಉಪಗ್ರಹವನ್ನು ಹಾರಿಸುವ ಸಾಮರ್ಥ್ಯವನ್ನು ಇನ್ನೂ ಪೂರ್ಣವಾಗಿ ಸಾಧಿಸಲಾಗಿಲ್ಲ. ಎಂದೋ ತಯಾರಾಗಬೇಕಿದ್ದ ಲಘು ಯುದ್ಧವಿಮಾನ ಇದೀಗ ಕಣ್ಣು ಬಿಡುತ್ತಿದೆ. ಅನೇಕ ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ನಾವು ಪಾಶ್ಚಿಮಾತ್ಯರಿಗಿಂತ ಸುಮಾರು ಇಪ್ಪತ್ತು ವರ್ಷಗಳಷ್ಟು ಹಿಂದಿದ್ದೇವೆ. ಈಗ ಚೀನಾ ಮತ್ತು ಕೊರಿಯಾ ದೇಶಗಳೂ ನಮಗಿಂತ ಮುಂದಿವೆ.

ನರಸಿಂಹ ರಾವ್ ಸರ್ಕಾರ ೧೯೯೦ರ ದಶಕದಲ್ಲಿ ಆರ್ಥಿಕ ನೀತಿಯನ್ನು ಸಡಿಲಿಸಿ ದೇಶೀಯ ಮಾರುಕಟ್ಟೆಯನ್ನು ವಿದೇಶೀಯರಿಗೆ ತೆರೆಯಿತು. ಇದರ ಪ್ರಯೋಜನವನ್ನು ಪಡೆಯಲು ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳು ತಾಂತ್ರಿಕ ದಿಗ್ಬಂಧನಗಳನ್ನು ಸ್ವಲ್ಪಮಟ್ಟಿಗೆ ಸಡಿಲಿಸಿದುವು. ಇದರಿಂದ ನಮಗಾದ ಅನುಕೂಲ ಅಷ್ಟೇನಿಲ್ಲ. ನಂತರ ಅಧಿಕಾರಕ್ಕೆ ಬಂದ ವಾಜಪೇಯಿ ಸರ್ಕಾರ ೧೯೯೮ರಲ್ಲಿ ಥಾರ್ ಮರುಭೂಮಿಯಲ್ಲಿ ಪರಮಾಣು ಬಾಂಬ್‌ಗಳ ಸರಣಿಯನ್ನೇ ಸ್ಫೋಟಿಸಿ ಪರಿಸ್ಥಿತಿಗೆ ಹೊಸ ರೂಪವನ್ನು ಕೊಟ್ಟಿತು. ಭಾರತ ತಾನು ಪರಮಾಣು ರಾಷ್ಟ್ರವೆಂದು ಸ್ವಯಂ ಘೋಷಿಸಿತು.

ಪಾಕಿಸ್ತಾನ ಇದಕ್ಕೆ ತಕ್ಕ ಉತ್ತರ ನೀಡಿತೆಂಬುದು ಬೇರೆಯ ವಿಷಯ. ಭಾರತ, ಪಾಕಿಸ್ತಾನ (ಇಸ್ರೇಲ್, ದಕ್ಷಿಣ ಆಫ್ರಿಕಾ, ಉತ್ತರ ಕೊರಿಯ...)ಗಳ ಬಳಿ ಅಣ್ವಸ್ತ್ರಗಳಿವೆಯೆಂಬುದು ಎಲ್ಲರಿಗೂ ತಿಳಿದ 'ಗೋಪ್ಯ' ವಿಷಯವಾಗಿತ್ತು! ವಾಜಪೇಯಿ ಸರ್ಕಾರ ಅದನ್ನು ಬಹಿರಂಗಗೊಳಿಸಿತಷ್ಟೆ. ಹಾಗೆ ಮಾಡಲು ಕಾರಣಗಳೇನು? ಈ ಕೆಲಸವನ್ನು ನರಸಿಂಹ ರಾವ್ ಸರ್ಕಾರವೇ ಮಾಡಬೇಕೆಂದಿತ್ತಂತೆ. ಆದರೆ ಈ ಯೋಜನೆ ಅಮೆರಿಕನ್ನರಿಗೆ ತಿಳಿದು ಬಂದದ್ದರಿಂದ ಹಾಗೆ ಮಾಡಲಾಗಲಿಲ್ಲವಂತೆ. ಅಂದರೆ ಇದು ಬಿ.ಜೆ.ಪಿ.ಯ ತಾತ್ವಿಕ ನಿಲುವಿನ ಫಲವಲ್ಲ, ಭಾರತ ಸರ್ಕಾರ ದೀರ್ಘವಾಗಿ ಯೋಚಿಸಿ, ವಿಮರ್ಶಿಸಿ ತೆಗೆದುಕೊಂಡ ನಿರ್ಧಾರ. ಭಾರತ ತಾನು ಪರಮಾಣು ರಾಷ್ಟ್ರವೆಂದು ಘೋಷಿಸುವುದರ ಜೊತೆಗೇ, ತಾನು ಮುಂದೆಂದೂ ಪರಮಾಣು ಸ್ಫೋಟಕಗಳ ಪ್ರಯೋಗ ವನ್ನು ನಡೆಸುವ ಅವಶ್ಯಕತೆಯೇ ಇಲ್ಲವೆಂದೂ ಸಾರಿತು. ಆದರೆ ಇದು ಒಣ ಜಂಭದ ಮಾತು. ಕೇವಲ ಏಳೆಂಟು ಪ್ರಯೋಗಗಳಿಂದ ಪರಮಾಣು ಸಾಮರ್ಥ್ಯವನ್ನು ಕರಗತ ಮಾಡಿಕೊಳ್ಳಲು ಸಾಧ್ಯವಿಲ್ಲ. ಇತರ ರಾಷ್ಟ್ರಗಳು ಅಂತಹ ಸಾವಿರಾರು ಪ್ರಯೋಗಗಳನ್ನು ನಡೆಸಿವೆ. ವಸ್ತುತಃ ಭಾರತದ ಹೈಡ್ರೋಜನ್ ಬಾಂಬ್ ಪ್ರಯೋಗ ವಿಫಲ ವಾಯಿತೆಂದು ಕೆಲವರ ಅಭಿಪ್ರಾಯ. ನಮ್ಮ ದೇಶ ನಿಜವಾದ ಪರಮಾಣು ಬಲವೆಂದು ಪರಿಗಣಿಸಲ್ಪಡ ಬೇಕಾದಲ್ಲಿ ಇನ್ನೂ ಅನೇಕ ಪ್ರಯೋಗಗಳನ್ನು ನಡೆಸುವುದಷ್ಟೇ ಅಲ್ಲ, ಪರಮಾಣುಶಸ್ತ್ರ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸುತ್ತಲೇ ಇರಬೇಕು. ಆದರೂ ನಮ್ಮಲ್ಲಿ (ಮತ್ತು ಪಾಕಿಸ್ತಾನದಲ್ಲಿ) ಇರುವ ಅಣ್ವಸ್ತ್ರಗಳು ಲಕ್ಷಾಂತರ ಜನರನ್ನು ಮತ್ತು ಅನೇಕ ನಗರಗಳನ್ನು ನಿರ್ನಾಮ ಮಾಡಬಲ್ಲವು. ಜೊತೆಗೇ, ಈ ಮಾರಕಾಸ್ತ್ರಗಳನ್ನು ಕೊಂಡೊಯ್ಯಬಲ್ಲ ಕ್ಷಿಪಣಿಗಳನ್ನು ಎರಡು ದೇಶಗಳೂ ಅಭಿವೃದ್ಧಿಪಡಿಸುತ್ತಲೇ ಇವೆ. ಚೀನಾದೇಶ ಅಣ್ವಸ್ತ್ರ ಬಲವನ್ನು ೩೦ ವರ್ಷಗಳಿಂದಲೂ ಬೆಳೆಸಿಕೊಂಡು ಬಂದಿದೆ. ಅಮೆರಿಕಾ ನಮಗಾಗಿ ಯೋಜಿಸಿದ್ದ ಪ್ರಸರಣ ನಿಷೇಧ ಒಪ್ಪಂದ (ಎನ್.ಪಿ.ಟಿ.) ಮೊದಲೇ ವಿಫಲ ವಾಗಿತ್ತು. ಈ ಬೆಳವಣಿಗೆಗಳು ಅಮೆರಿಕಾ ಮತ್ತು ಇತರ ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳ ಯೋಜನೆಗಳನ್ನು ಬುಡಮೇಲು ಮಾಡಿವೆ. ಆದರೆ ಯಾವುದೂ ಸ್ಥಿರವಲ್ಲ. ಹೊಸ ಪರಿಸ್ಥಿತಿಗೆ ತಕ್ಕಂತೆ ಹೊಸ ನೀತಿಗಳನ್ನು ರೂಪಿಸಿ ಕೊಳ್ಳಬೇಕು. ಕಳೆದ ಒಂದು ದಶಕದಿಂದ ಭಾರತದ ಆರ್ಥಿಕ ಬೆಳವಣಿಗೆ ತೀವ್ರಗೊಂಡು ಪಾಶ್ಚಿಮಾತ್ಯ ತಯಾರಕರಿಗೆ ಇದು ದೊಡ್ಡ ಮಾರುಕಟ್ಟೆಯಾಗಿದೆ.

---

**ಭಾರತ ಇಟರ್‌ನಲ್ಲಿ ಪಾಲುಗಾರಿಕೆಯನ್ನು ಗಿಟ್ಟಿಸಿರುವುದು ಹೊಸ ಪರಮಾಣು ನೀತಿಯ ಒಂದು ಉದಾಹರಣೆಯೆನ್ನಬಹುದು. ಈ ಹೊಸ ನೀತಿಯ ತಾತ್ಪರ್ಯ – ನಾವು ವಿದೇಶಿಯರೊಂದಿಗೆ ಸಹಕರಿಸಿ ವಿಜ್ಞಾನ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಮುಂದುವರೆಯಬಹುದೇ ಹೊರತು ಅವರೊಂದಿಗೆ ಸೆಣಸಾಟ ನಡೆಸುವುದರಿಂದ ಅಲ್ಲ. ಆದರೆ ಇದು ಒನ್ ವೇ ಅಲ್ಲ. ವಿದೇಶಿಯರಿಗೂ ಸಹ ಭಾರತೀಯ ವಿಜ್ಞಾನಿಗಳ ಮತ್ತು ಇಂಜಿನಿಯರ್‌ಗಳ ಹಾಗೂ ನಮ್ಮ ಮಾರುಕಟ್ಟೆಯ ಅವಶ್ಯಕತೆ ಇದ್ದೇ ಇದೆ.**

---

ನೂರು ಕೋಟಿಗಿಂತಲೂ ಹೆಚ್ಚು ಬಳಕೆದಾರರಿರುವ ಈ ದೇಶವನ್ನು ಯಾರೂ ಅಸಡ್ಡೆ ಮಾಡುವಂತಿಲ್ಲ. ವಿಶ್ವದ ಈ ಭಾಗದಲ್ಲಿ ಅಣುಯುದ್ಧದ ಪರಿಸ್ಥಿತಿ ಉಂಟಾದರೆ ಅದರ ಬಿಸಿ ಅಮೆರಿಕಾ ಮುಂತಾದ ದೇಶಗಳನ್ನು ತಟ್ಟುವುದು ಖಂಡಿತ. ಹೀಗಾಗಿ ಪಾಶ್ಚಿಮಾತ್ಯ ದೇಶಗಳು ಭಾರತವನ್ನು ಕೈಬಿಡುವಂತಿಲ್ಲ. ನಮ್ಮ ಸ್ಥಿತಿಯೂ ಹಾಗೆಯೇ ಇದೆ. ಪಾಶ್ಚಿಮಾತ್ಯ ದೇಶಗಳ ತಾಂತ್ರಿಕ ಮತ್ತು ವೈಜ್ಞಾನಿಕ ಸಹಕಾರವಿಲ್ಲದೆ ಆರ್ಥಿಕ ಬೆಳವಣಿಗೆ ಸಾಧ್ಯವಿಲ್ಲ. ನಮ್ಮ ಮಟ್ಟಿಗೆ ಹೇಳುವುದಾದರೆ ಅಣ್ವಸ್ತ್ರಗಳಲ್ಲಿ ಇತರ ದೇಶಗಳೊಂದಿಗೆ ಪೈಪೋಟಿ ನಡೆಸುವುದು ಮೂರ್ಖತನ. ಆರ್ಥಿಕವಾಗಿಯಾಗಲೀ ಅಥವಾ ತಾಂತ್ರಿಕವಾಗಿಯಾಗಲೀ ಅದು ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ, ಅದರ ಅವಶ್ಯಕತೆಯೂ ಇಲ್ಲ. ಪ್ರವಾಹಕ್ಕೆ ವಿರುದ್ಧವಾಗಿ ಈಜುವುದಕ್ಕಿಂತ ಪ್ರವಾಹದೊಂದಿಗೆ ಈಜುವುದು ಒಳ್ಳೆಯದು. ಆದ್ದರಿಂದ ಪಾಶ್ಚಿಮಾತ್ಯ ದೇಶಗಳೊಂದಿಗೆ ಸಹಕರಿಸಿ ನಮ್ಮ ತಾಂತ್ರಿಕ ಬುನಾದಿಯನ್ನು ಭದ್ರಪಡಿಸುವುದು ಬುದ್ಧಿವಂತಿಕೆ.

ಪ್ರಧಾನಿ ಮನಮೋಹನ್ ಸಿಂಗ್ ಮತ್ತು ಅಧ್ಯಕ್ಷ ಬುಷ್‌ರವರ ಈಚಿನ ಒಪ್ಪಂದವನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಇದರಂತೆ ಭಾರತ ತನ್ನ ಅಣುಸ್ಥಾವರಗಳನ್ನು ಎರಡಾಗಿ ವಿಭಜಿಸಬೇಕು. ಮೊದಲನೆಯದು ರಕ್ಷಣಾಕಾರ್ಯಗಳಿಗೆ, ಎರಡನೆಯದು ಶಾಂತಿಕಾರ್ಯಗಳಿಗೆ. ಮೊದಲನೆಯದಕ್ಕೆ ಪಾಶ್ಚಿಮಾತ್ಯ ರಾಷ್ಟ್ರಗಳು ಯಾವ ಸಹಕಾರವನ್ನೂ ಕೊಡುವುದಿಲ್ಲ ಮತ್ತು ನಾವು ಅದನ್ನು ಗೋಪ್ಯವಾಗಿಟ್ಟುಕೊಳ್ಳಬಹುದು. ಎರಡನೆಯ ಗುಂಪಿಗೆ ಸೇರಿದ ನಾಗರಿಕ ಅಣುಸ್ಥಾವರಗಳಿಗೆ ಪಾಶ್ಚಿಮಾತ್ಯ ತಂತ್ರಜ್ಞಾನದ ಸಹಕಾರ ಲಭ್ಯ.

ಆದರೆ ಇವನ್ನು ರಕ್ಷಣಾ ಕಾರ್ಯಗಳಿಗೆ ಬಳಸುವಂತಿಲ್ಲ. ಇವು ಅಂತರರಾಷ್ಟ್ರೀಯ ಅಣುಸಂಸ್ಥೆ (IAEA)ಯ ವೀಕ್ಷಣೆಗೆ ಮುಕ್ತವಾಗಿರಬೇಕು. ಪಾಶ್ಚಿಮಾತ್ಯ ರಾಷ್ಟ್ರಗಳೂ ಈ ವಿಭಜನೆಯನ್ನು ಅನುಸರಿಸುತ್ತವೆ. ಅಲ್ಲಿ ಅನೇಕ ಖಾಸಗೀ ಸಂಸ್ಥೆಗಳು ಅಣು ವಿದ್ಯುತ್ ಕೇಂದ್ರಗಳನ್ನು ಅಭಿವೃದ್ಧಿಪಡಿಸಿ ವ್ಯಾಪಾರ ಮಾಡುವುದರಲ್ಲಿ ನಿರತವಾಗಿವೆ. ನಮ್ಮ ಅಣುಸ್ಥಾವರಗಳನ್ನೂ ಈ ರೀತಿ ವಿಭಜಿಸುವುದು ಸೂಕ್ತವೆಂದು ತೋರುತ್ತದೆ. ಇದು ಯಶಸ್ವಿಯಾಗಬೇಕಾದರೆ ಪ್ರಾಮಾಣಿಕತೆ ಮುಖ್ಯ. ಶಾಂತಿ ಕಾರ್ಯಗಳಿಗಾಗಿ ಪಡೆದ ಉಪಕರಣಗಳನ್ನಾಗಲೀ, ಪರಮಾಣು ಇಂಧನವನ್ನಾಗಲೀ ರಕ್ಷಣಾಕಾರ್ಯಗಳಿಗೆ ವರ್ಗಾಯಿಸುವಂತಿಲ್ಲ. ಇದು ನಮ್ಮ ಜವಾಬ್ದಾರಿ. ಶಾಂತಿಸ್ಥಾವರಗಳಿಗೆ ಸಂಬಂಧಪಟ್ಟ ಯಾವುದೇ ತಂತ್ರಜ್ಞಾನವನ್ನು ಪಾಶ್ಚಿಮಾತ್ಯ ರಾಷ್ಟ್ರಗಳು ತಡೆಹಿಡಿಯುವಂತಿಲ್ಲ. ಇದು ಅವರ ಜವಾಬ್ದಾರಿ.

ಆಧುನಿಕ ಉಪಕರಣಗಳು ಲಭ್ಯವಾಗುವುದರಿಂದ ನಮ್ಮ ವೈಜ್ಞಾನಿಕ ಹಾಗೂ ತಾಂತ್ರಿಕ ಸಂಶೋಧನೆಗಳು ಹೆಚ್ಚು ತ್ವರಿತಗತಿಯಲ್ಲಿ ಸಾಗಲು ಸಹಾಯವಾಗುತ್ತದೆ. ಆದರೆ ಇದರಿಂದ ತಾಂತ್ರಿಕ ಬೆಳವಣಿಗೆಗೆ ತೊಂದರೆಯೂ ಆಗಬಹುದು. ಮುಂದುವರೆದ ದೇಶಗಳಿಗೆ ಹೊಸ ತಂತ್ರಜ್ಞಾನ ಅಥವಾ ಉಪಕರಣ ಬೇಕಾದಲ್ಲಿ ಅದನ್ನು ಅವರೇ ರೂಪಿಸಿ ರಚಿಸಿಕೊಳ್ಳಬೇಕಾಗುತ್ತದೆ – ಏಕೆಂದರೆ ಅವು ಬೇರೆಲ್ಲಿಯೂ ಸಿಗುವುದಿಲ್ಲ. ಹೀಗಾಗಿ ಅಲ್ಲಿ ಹೊಸ ಆವಿಷ್ಕಾರಗಳು ಸಾಧ್ಯ. ಆದರೆ ನಮಗೆ

## ಜಾಹೀರಾತು



ಮಸೀದಿ
ಕಟ್ಟುವ
ರಾಮರು

ಮಂದಿರ
ಕಟ್ಟುವ
ರಹೀಮರು

ತ್ರಿಶೂಲ–ಕೊಡಲಿ
ಲಾಠಿಗಳ
ಕಿತ್ತೊಗೆವ
ರಾಮ–ರಹೀಮರು
ಬೇಕಾಗಿದ್ದಾರೆ.

ಬಿ. ಶ್ರೀನಿವಾಸ ಹಾನಗಲ್ಲ
ವಿಜಯನಗರ ಬಡಾವಣೆ, ಹಾನಗಲ್ಲ
ಹಾವೇರಿ ಜಿಲ್ಲೆ

ಹೊಸದೇನಾದರೂ ಬೇಕಿದ್ದಲ್ಲಿ ಅದು ಮುಂದುವರೆದ ದೇಶಗಳಲ್ಲಿ ದೊರೆಯುವುದರಿಂದ ಹೊಸದನ್ನು ಸೃಷ್ಟಿಸುವ ತೊಂದರೆ ತೆಗೆದುಕೊಳ್ಳುವ ಅವಶ್ಯಕತೆ ಇರುವುದಿಲ್ಲ. ಇದಕ್ಕೆ ಕಾರಣ ನಾವು ಮುಂದುವರೆದ ದೇಶಗಳ ಹಿಂದೆ ಬಿದ್ದಿರುವುದು! ಪ್ರತಿ ನಾಲ್ಕೈದು ವರ್ಷಗಳಲ್ಲಿ ಹಳತಾಗುವ ಉಪಕರಣಗಳನ್ನು ನಾವು ದುಬಾರಿ ಬೆಲೆ ಕೊಟ್ಟು ಕೊಳ್ಳುವ ಸಾಧ್ಯತೆಗಳು ಬಹಳವಾಗಿವೆ. ಹೊಸ ಆಟದ ವಸ್ತು ಸಿಕ್ಕಕೂಡಲೇ ಹಳೆಯದನ್ನು ಮೂಲೆಗೆ ಎಸೆಯುವ ಮಕ್ಕಳಂತಾಗುತ್ತಾರೆ ನಮ್ಮ ವಿಜ್ಞಾನಿಗಳು. ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆ ಒಂದನ್ನೊಂದು ಅವಲಂಬಿಸಿದೆ. ವಿಜ್ಞಾನದ ಪ್ರಗತಿಗೆ ಅವಶ್ಯಕವಾದ ಉಪಕರಣಗಳನ್ನು ಅಭಿವೃದ್ಧಿಗೊಳಿಸದೆಯೇ ಮೂಲಭೂತ ಸಂಶೋಧನೆ ಒಟ್ಟಾರೆ ಸಾಧ್ಯವಿಲ್ಲ. ಪ್ರತಿಯೊಬ್ಬ ವಿಜ್ಞಾನಿಯೂ ತನಗೆ ಬೇಕಾದ ಉಪಕರಣಗಳನ್ನು ತಾನೇ ಸೃಷ್ಟಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಒಂದು ದೇಶ – ಭಾರತದಂತಹ ವಿಶಾಲ ದೇಶ – ಹಾಗೆ ಮಾಡದಿದ್ದಲ್ಲಿ ಅದು ಮುಂದುವರೆದ ದೇಶಗಳ ಹಿಂದೆ ಕುಂಟುತ್ತಲೇ ನಡೆಯುತ್ತಿರಬೇಕಾಗುತ್ತದೆ. ಈ ದಿಕ್ಕಿನಲ್ಲಿ ನಮ್ಮ ಸರ್ಕಾರದ ಹೊಸ ಪರಮಾಣು ನೀತಿ ಎಷ್ಟು ಫಲಕಾರಿಯಾಗುತ್ತದೆ ಎಂಬುದು ಬಹಳ ಮುಖ್ಯ.

ಈ ಮಧ್ಯೆ ಭಾರತವನ್ನು ಇಟರ್ (ITER–International Thermo – nuclear Experimental Reactor)ಗೆ ಏಳನೇ ರಾಷ್ಟ್ರವನ್ನಾಗಿ ಸೇರಿಸಿಕೊಳ್ಳಲಾಗಿದೆ. ಇಟರ್ ಎಂಬುದು ಪರಮಾಣು ಸಂಯೋಜನೆಯನ್ನು ಬಳಸಿ ಶಕ್ತಿಯನ್ನು ಉತ್ಪಾದಿಸುವ ಪ್ರಯೋಗಾತ್ಮಕ ಯಂತ್ರ. ಈಗಿನ ಪರಮಾಣು ವಿದ್ಯುತ್ ಸ್ಥಾವರಗಳಲ್ಲಿ ಯುರೇನಿಯಂನಂತಹ ಭಾರವಾದ ಪರಮಾಣುವನ್ನು ವಿಭಜಿಸಿ ಶಕ್ತಿಯನ್ನು ಪಡೆಯಲಾಗುತ್ತಿದೆ. ಯುರೇನಿಯಂ ಧಾತು ದುರ್ಲಭವಾದ ವಸ್ತು. ನಮ್ಮ ದೇಶದಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ದೊರೆಯುತ್ತದೆ. ಇಂತಹ ವಿದ್ಯುತ್ ಸ್ಥಾವರಗಳು ಅಪಘಾತಕ್ಕೀಡಾದರೆ ಉಂಟಾಗುವ ಹಾನಿ ಅಪಾರ. ಇಲ್ಲಿ ಉತ್ಪತ್ತಿಯಾಗುವ ವಿಕಿರಣ ಧಾತುಗಳನ್ನು ವಿನಾಶಕಾರಿ ಅಸ್ತ್ರಗಳಲ್ಲಿ ಉಪಯೋಗಿಸಬಹುದು. ಆದರೆ ಪರಮಾಣು ಸಂಯೋಜನೆಯಲ್ಲಿ ಜಲಜನಕದಂತಿರುವ ಡ್ಯುಟಿರಿಯಂ ಎಂಬ ಮೂಲಧಾತುವನ್ನು ಉಪಯೋಗಿಸುತ್ತಾರೆ. ಇದು ಸಮುದ್ರದ ನೀರಿನಲ್ಲಿ ದೊರೆಯುತ್ತದೆ. ಇದಕ್ಕೆ ಮಿತಿ ಇಲ್ಲ. ಡ್ಯುಟಿರಿಯಂ ಸಂಯೋಜನೆಯಿಂದ ಶಕ್ತಿಯನ್ನು ಪಡೆಯಲು ಅದನ್ನು ನೂರು ಮಿಲಿಯನ್ ಡಿಗ್ರಿಗಳಷ್ಟು ತಾಪಮಾನಕ್ಕೆ ಬಿಸಿಮಾಡಿ ಶೇಖರಿಸಿಡಬೇಕಾಗುತ್ತದೆ. ಇದು ಬಹಳ ಕಷ್ಟಸಾಧ್ಯವಾದ ಕೆಲಸ. ಈ ದಿಕ್ಕಿನಲ್ಲಿ ಕಳೆದ ಅರ್ಧ ಶತಮಾನದಿಂದ ಸಂಶೋಧನಾಕಾರ್ಯ ನಡೆಯುತ್ತಲೇ ಇದೆ. ಇದು ಸಫಲವಾದಲ್ಲಿ ಮುಂದೆಂದೂ ವಿದ್ಯುತ್ತಿನ ಕೊರತೆಯೇ ಇರುವುದಿಲ್ಲ! ಇದೊಂದು ಮರೀಚಿಕೆಯಲ್ಲ ಎಂಬುದು ವಿಜ್ಞಾನಿಗಳ ದೃಢನಂಬಿಕೆ. ಇಂತಹ ಪ್ರಯೋಗಾತ್ಮಕ ಯಂತ್ರಗಳಿಗೆ ತಗುಲುವ ಖರ್ಚು ಮತ್ತು ಅವಶ್ಯಕವಾದ ತಂತ್ರಜ್ಞಾನ ಅಪಾರ. ೧೯೮೫ರಲ್ಲಿ ಯೂರೋಪಿಯನ್ ಒಕ್ಕೂಟ, ಜಪಾನ್ ಮತ್ತು ರಷ್ಯಾ ದೇಶಗಳು ಒಂದಾಗಿ ''ಪರಮಾಣು ಸಂಯೋಜನೆಯಿಂದ ವಿದ್ಯುತ್ತನ್ನು ಪಡೆಯುವುದು ವೈಜ್ಞಾನಿಕವಾಗಿಯೂ ಮತ್ತು ತಾಂತ್ರಿಕವಾಗಿಯೂ ಸಾಧ್ಯ'' ಎಂದು ಸಿದ್ಧಪಡಿಸಲು ಇಟರ್ ಯಂತ್ರವನ್ನು ರಚಿಸಲು ತೀರ್ಮಾನಿಸಿದುವು. ಅಮೆರಿಕಾ ದೇಶ ಈ ಗುಂಪಿಗೆ ೧೯೮೮ರಲ್ಲಿ ಸೇರಿ ೧೯೯೯ರಲ್ಲಿ ಹಿಂದೆ ಸರಿಯಿತು. ರಷ್ಯಾ, ಜಪಾನ್ ಮತ್ತು ಯೂರೋಪಿಯನ್ ಒಕ್ಕೂಟಗಳು ಸೇರಿ ೨೦೦೧ರ ಹೊತ್ತಿಗೆ ಈ ಯಂತ್ರದ ತಾಂತ್ರಿಕ ರೂಪುರೇಷೆಗಳನ್ನು ಸಿದ್ಧಗೊಳಿಸಿದವು. ಅಮೆರಿಕಾ ಪುನಃ ಈ ಗುಂಪನ್ನು ೨೦೦೩ರಲ್ಲಿ ಸೇರಿಕೊಂಡಿತು. ಈಗ ಕೆನಡಾ, ಚೀನಾ, ಇಂಗ್ಲೆಂಡ್, ಕೊರಿಯಾ ಮತ್ತು ಸ್ವಿಟ್ಜರ್‌ಲಾಂಡ್ ದೇಶಗಳೂ ಈ ಗುಂಪಿನಲ್ಲಿವೆ. ರಾಜಕೀಯ ಕಾರಣಗಳಿಂದಾಗಿ ಈ ಯಂತ್ರದ ರಚನೆ ಇದುವರೆವಿಗೂ ಸಾಧ್ಯವಾಗಿರಲಿಲ್ಲ. ಅದು ಯಾವ ದೇಶದಲ್ಲಿ ಸ್ಥಾಪಿಸಲ್ಪಡಬೇಕೆಂಬುದೇ ಒಂದು ದೊಡ್ಡ ವಿವಾದವಾಗಿದ್ದಿತು. ಜಪಾನ್, ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳು ಇಟರ್ ತಮ್ಮ ದೇಶದಲ್ಲೇ ಇರಬೇಕೆಂದು ಹೇಳುತ್ತಿದ್ದವು. ಇತ್ತೀಚೆಗೆ ಈ ವಿವಾದ ಬಗೆಹರಿದು ಇಟರ್‌ಅನ್ನು ಫ್ರಾನ್ಸ್‌ನಲ್ಲಿ ಸ್ಥಾಪಿಸಲು ನಿಶ್ಚಯಿಸಲಾಗಿದೆ.

ಇಟರ್ ಪ್ರಾರಂಭವಾದಾಗ ಭಾರತದಲ್ಲಿ ಪರಮಾಣು ಸಂಯೋಜನೆಯ ಬಗ್ಗೆ ವಿಶೇಷ ಸಂಶೋಧನೆ ನಡೆಯು

ತ್ತಿರಲಿಲ್ಲ. ತಾಂತ್ರಿಕ ಬೆಳವಣಿಗೆಗೂ ಆದ್ಯತೆ ಇರಲಿಲ್ಲ. ಇನ್ನೂ ಜಾಗತೀಕರಣಗೊಳ್ಳದ ನಮ್ಮ ಮಾರುಕಟ್ಟೆಯ ಬಗ್ಗೆ ಪಾಶ್ಚಿಮಾತ್ಯರಿಗೆ ಅಸಡ್ಡೆ. ಹೀಗಾಗಿ ಇಟರ್‌ಗುಂಪಿಗೆ ಭಾರತ ಸೇರುವ ಅವಕಾಶ ಒದಗಿಬಂದಿರಲಿಲ್ಲ. ಇಂದು ಪರಿಸ್ಥಿತಿ ಬದಲಾಗಿದೆ. ಜಾಗತೀಕರಣದ ನಂತರ ನಮ್ಮ ಮಾರುಕಟ್ಟೆಗಳು ವಿದೇಶಿಯರನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿವೆ. ನಮ್ಮ ದೇಶ ಈಗ ಐ.ಟಿ. ಉದ್ಯಮಕ್ಕೆ ಹೆಸರುವಾಸಿಯಾಗಿದೆ. ವಿದೇಶೀ ವಿನಿಮಯ ಹೇರಳವಾಗಿದೆ. ಒಟ್ಟಿನಲ್ಲಿ ಭಾರತವನ್ನು ವಿದೇಶಿಯರು ಉದಾಸೀನ ಮಾಡುವಂತಿಲ್ಲ. ಈ ಮಧ್ಯೆ, ಅಹಮದಾಬಾದ್ ಬಳಿ ಇರುವ ಪ್ಲಾಸ್ಮಾ ಸಂಶೋಧನಾ ಸಂಸ್ಥೆ ಪರಮಾಣು ಸಂಯೋಜನೆಗೆ ಸಂಬಂಧಪಟ್ಟ ವಿಷಯಗಳಲ್ಲಿ ಸಂಶೋಧನೆ ನಡೆಸುತ್ತಿರುವುದಷ್ಟೇ ಅಲ್ಲದೆ ಅದಕ್ಕೆ ಬೇಕಾದ ತಂತ್ರಜ್ಞಾನಗಳನ್ನೂ ಅಭಿವೃದ್ಧಿಗೊಳಿಸುತ್ತಿದೆ. 'ಆದಿತ್ಯ' ಎಂಬ ಹೆಸರಿನ ಟೋಕ್‌ಮಾರ್ಕ್ ಅನ್ನು ಹತ್ತು ವರ್ಷಗಳ ಹಿಂದೆಯೇ ಅಲ್ಲಿ ನಿರ್ಮಿಸಲಾಯಿತು. ಈಗ ಇನ್ನೂ ಹೆಚ್ಚು ಕ್ಷಮತೆ ಉಳ್ಳ, ಅತಿವಾಹಕಗಳನ್ನು ಉಪಯೋಗಿಸುವ ಮತ್ತು ಹೆಚ್ಚು ಜಟಿಲವಾದ ಟೋಕ್‌ಮಾರ್ಕ್‌ಅನ್ನು ಅಲ್ಲಿ ನಿರ್ಮಿಸಲಾಗುತ್ತಿದೆ. ಕಳೆದ ಹತ್ತು ವರ್ಷಗಳಲ್ಲಿ ಜಾಗತಿಕ ರಾಜಕೀಯ ವಾತಾವರಣವೂ ಬಹಳ ಬದಲಾಗಿದೆ. ಈ ಎಲ್ಲ ಕಾರಣಗಳಿಂದಾಗಿ ಭಾರತವನ್ನು ಇಟರ್ ಗುಂಪಿಗೆ ಹೊಸ ಸದಸ್ಯರಾಷ್ಟ್ರವನ್ನಾಗಿ ಸೇರಿಸಿಕೊಳ್ಳಲಾಗಿದೆ.

ಒಂದು ಮೂಲದ ಪ್ರಕಾರ ಇಟರ್‌ಗೆ ತಗಲುವ ಖರ್ಚು ೫೯೯೦ ಮಿಲಿಯನ್ ಡಾಲರ್‌ಗಳು! ಇದು ೧೯೯೮ರ ಲೆಕ್ಕ. ಇದರಲ್ಲಿ ಹನ್ನೊಂದನೇ ಒಂದು ಭಾಗ ಭಾರತದ್ದು. ಅಂದಿನ ಲೆಕ್ಕದಲ್ಲಿ ಇದು ಸುಮಾರು ರೂ. ೨೪೦೦ ಕೋಟಿ. ಇಟರ್ ಕಾರ್ಯನಿರತವಾಗುವುದು ೨೦೧೫ರಲ್ಲಿ. ಆ ವೇಳೆಗೆ ಈ ಮೊತ್ತ ದ್ವಿಗುಣಗೊಳ್ಳುವುದರಲ್ಲಿ ಸಂದೇಹವಿಲ್ಲ. ಆದರೆ ಈ ಮೊತ್ತವನ್ನು ನಾವು ಹಣದ ರೂಪದಲ್ಲಿ ಕೊಡಬೇಕಿಲ್ಲ. ಈ ಬೆಲೆಯ ಕೆಲಸ ಕಾರ್ಯಗಳನ್ನು ಇಟರ್‌ಗೆ ಮಾಡಿಕೊಡಬೇಕು. ತಡವಾಗಿ ಸೇರಿದ ಭಾರತಕ್ಕೆ ಇಟರ್ ವಿನ್ಯಾಸದ ಬಗ್ಗೆ ಕೆಲಸ ಮಾಡುವ ಅವಕಾಶವಿಲ್ಲ. ಈ ವಿನ್ಯಾಸಗಳು ಈಗಾಗಲೇ ತಯಾರಾಗಿವೆ. ಯಾವ ರಾಷ್ಟ್ರಗಳು ಯಾವ ಕೆಲಸಗಳನ್ನು ಮಾಡಬೇಕೆಂಬುದನ್ನೂ ನಿರ್ಧರಿಸಲಾಗಿದೆ. ತಡವಾಗಿ ಸೇರಿದ ಭಾರತಕ್ಕಾಗಿ ಕೆಲವು ರಾಷ್ಟ್ರಗಳು ತಮ್ಮ ಪಾಲಿನ ಜವಾಬ್ದಾರಿಯನ್ನು ನಮಗಾಗಿ ಬಿಟ್ಟುಕೊಡಬೇಕಾಗಿದೆ. ಇಟರ್ ಬಹಳ ಕ್ಲಿಷ್ಟವಾದ ಯಂತ್ರ. ಇದರಲ್ಲಿ ಅನೇಕ ಮುಖ್ಯಭಾಗಗಳೂ ಉಪಭಾಗಗಳೂ ಉಪ ಉಪಭಾಗಗಳೂ ಇರುತ್ತವೆ. ಉದಾಹರಣೆಗೆ, ಕಾಂತೀಯ ಕ್ಷೇತ್ರಗಳನ್ನು ಸೃಷ್ಟಿಸಲು ಅತಿವಾಹಕಗಳು ಬೇಕು. ಇವು ಕೆಲಸ ಮಾಡುವುದು ಶೂನ್ಯ ತಾಪಮಾನದ ಹತ್ತಿರ (~ 4°K). ಇವನ್ನು ದ್ರವೀಕರಿಸಿದ ಹೀಲಿಯಂ ಮತ್ತು ಸಾರಜನಕಗಳಲ್ಲಿ ಇಟ್ಟಿರಬೇಕು. ಇವನ್ನು ಶೇಖರಿಸಲು ನಿರ್ವಾತದಲ್ಲಿರುವ ವಿಶೇಷ ಪಾತ್ರೆಗಳು ಬೇಕು. ಇಂಧನವನ್ನು ಬಿಸಿಮಾಡಲು ಶಕ್ತಿಶಾಲಿ ರೇಡಿಯೋ ಮತ್ತು ಮೈಕ್ರೋವೇವ್ ತರಂಗಗಳು ಬೇಕು. ಪರಮಾಣು ಸಂಯೋಜನೆಯಲ್ಲಿ ಉತ್ಪನ್ನವಾದ ವಿಕಿರಣಗಳನ್ನು ಹೀರಲು ವಿಶೇಷ ಕವಚಗಳು ಬೇಕು – ಇತ್ಯಾದಿ. ಈಗಾಗಲೇ ಸಿದ್ಧವಾಗಿರುವ ವಿನ್ಯಾಸಗಳನ್ನು ಪಡೆದುಕೊಂಡು ಅವುಗಳಂತೆ ಉಪಕರಣಗಳನ್ನು ಸಿದ್ಧಗೊಳಿಸಿ ಇಟರ್ ಯಂತ್ರಕ್ಕೆ ಜೋಡಿಸುವುದು ನಮ್ಮ ಕೆಲಸ. ಆದ್ದರಿಂದ ಇಲ್ಲಿ ವಿಜ್ಞಾನಕ್ಕಿಂತ ತಂತ್ರಜ್ಞಾನಕ್ಕೇ ಹೆಚ್ಚು ಆದ್ಯತೆ. ಅಂದರೆ ನಮ್ಮ ಕೈಗಾರಿಕೆಗಳದೇ ಹೆಚ್ಚು ಜವಾಬ್ದಾರಿ. ಆದರೆ ಕೈಗಾರಿಕೆಗಳು ವಿಜ್ಞಾನಿಗಳ ಮಾರ್ಗದರ್ಶನದಲ್ಲಿಯೇ ಕೆಲಸ ಮಾಡಬೇಕು. ಒಟ್ಟಿನಲ್ಲಿ ನಮ್ಮ ವಿಜ್ಞಾನಿಗಳು ವಿನ್ಯಾಸಗಳನ್ನು ಅರ್ಥಮಾಡಿಕೊಂಡು ಇಂಜಿನಿಯರ್‌ಗಳಿಗೆ ವಿವರಿಸಿ ಉಪಕರಣಗಳನ್ನು ಸಿದ್ಧಪಡಿಸಬೇಕು. ನವಪೀಳಿಗೆಯ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರ್‌ಗಳಿಗೆ ಆಧುನಿಕ ತಂತ್ರಜ್ಞಾನಗಳನ್ನು ಜೀರ್ಣಿಸಿಕೊಂಡು ಅಳವಡಿಸಲು ಇದೊಂದು ಸದವಕಾಶ. ಇದು ಎಷ್ಟರಮಟ್ಟಿಗೆ ಸಾರ್ಥಕವಾಗುತ್ತದೆ ಎಂಬುದನ್ನು ಕಾದುನೋಡಬೇಕು.

ಭಾರತ ಇಟರ್‌ನಲ್ಲಿ ಪಾಲುಗಾರಿಕೆಯನ್ನು ಗಿಟ್ಟಿಸಿರುವುದು ಹೊಸ ಪರಮಾಣು ನೀತಿಯ ಒಂದು ಉದಾಹರಣೆಯೆನ್ನಬಹುದು. ಈ ಹೊಸ ನೀತಿಯ ತಾತ್ಪರ್ಯ – ನಾವು ವಿದೇಶೀಯರೊಂದಿಗೆ ಸಹಕರಿಸಿ ವಿಜ್ಞಾನ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಮುಂದುವರೆಯಬಹುದೇ ಹೊರತು ಅವರೊಂದಿಗೆ ಸೆಣಸಾಟ ನಡೆಸುವುದರಿಂದ ಅಲ್ಲ. ಆದರೆ ಇದು ಒನ್ ವೇ ಅಲ್ಲ. ವಿದೇಶಿಯರಿಗೂ ಸಹ ಭಾರತೀಯ ವಿಜ್ಞಾನಿಗಳ ಮತ್ತು ಇಂಜಿನಿಯರ್‌ಗಳ ಹಾಗೂ ನಮ್ಮ ಮಾರುಕಟ್ಟೆಯ ಅವಶ್ಯಕತೆ ಇದ್ದೇ ಇದೆ.

**ಡಾ॥ ಎಚ್. ಆರ್. ಪ್ರಭಾಕರ**
೧೨೯, ಬ್ಲಾಕ್-೧೪, ಜೀವನ್‌ಮಿತ್ರ ಕಾಲೋನಿ
೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

## ಈ ಕ್ಷಣದೊಳಗಿನ ಹಕ್ಕಿಯ ಹಾಡು

ಮಧ್ಯಾಹ್ನ ಮೂರರ ವೇಳೆ
ಬೈಕು ಕಾರುಗಳ ಓಟದ ಸದ್ದು
ಮನದೊಳಗಿನ ಮಾತಿನ ಕಾಟದ ಸದ್ದು
ಎಲ್ಲವನು ಮೀರಿ ಕು ಕು ಕು ಕು ಎಂದು
ಹಕ್ಕಿಯ ಲಯಬದ್ಧ ಹಾಡು ಕೇಳುವುದೇನು ?

ಸೂರ್ಯ ಕಿರಣಗಳು ಬೆಳ್ಳಿ ಬೆಳಕಿನ ಹಾಗೆ
ಚೆಲ್ಲಿಕೊಂಡಿದೆ ಈ ಧರೆಯ ತುಂಬ
ಮರಗಿಡದ ಎಲೆಗಳು ಹಸಿರು ನಳನಳಿಸಿವೆ
ನೂರಾರು ಖಾಲಿ ಕುರ್ಚಿಗಳ ನಡುವೆ
ಒಂಟಿ ಕೂತಿದ್ದೇನೆ ರಂಗಮಂದಿರದಲ್ಲಿ.

ಸಂಜೆ ಪ್ರದರ್ಶನಕ್ಕೆ ಬಂದು
ಈ ಕುರ್ಚಿಗಳ ಮೇಲೆ ಕೂರುವವರ ಚಿತ್ತಲಹರಿ
ನಾಟಕದ ಮಾತುಗಳು, ಸಂಗೀತ
ಕಲಿಕೆಯ ಸುತ್ತ ಹೆಣೆದು ಹಬ್ಬಿದ
ನಟನಟಿಯರ, ನಿರ್ದೇಶಕರ, ತಂತ್ರಜ್ಞರ,

ವಿವಿಧ ವಿಷಯಗಳ ತಜ್ಞರ ಸ್ನೇಹ ಸಂಬಂಧ
ಎಲ್ಲವನು ಮರೆತ ಈ ಕ್ಷಣ
ಕು ಕು ಕು ಕು ಎಂಬ ಹಕ್ಕಿಯ ಲಯಬದ್ಧ ಹಾಡು
ದೂರದ ಮರದಿಂದ ಕಿವಿಯ ತಲಪುತ್ತಿದೆ.

ರಂಗಮಂದಿರದ ಕಿಟಕಿ ಆಚೆನ ಬೆಳಕು
ಕಾಲ ಸರಿಯುವುದ ಹೇಳುತ್ತಿದೆ.
ಕು ಕು ಕು ಕು – ಮತ್ತೆ ಹಕ್ಕಿಯ ಹಾಡು
ಕ್ಷಣಗಣನೆಗಳ ಮರೆಸುತ್ತಿದೆ.

**ಬಂದಗದ್ದೆ ರಾಧಾಕೃಷ್ಣ**
ಪುಸ್ತಕ ಹೊಂಬಾಳೆ, ಕೆಳದಿ ಅಂಚೆ, ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ



# ಮಥಿಸಿ ಮಾನವನಾದ (ಪ್ರಗತಿ ಮೀಮಾಂಸೆ)

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

**ಕ**ಳೆದ ಒಂದೆರಡು ಶತಮಾನಗಳಲ್ಲಿ ಜಗತ್ತು ತುಂಬ 'ಪ್ರಗತಿಪರ'ವಾಗಿದೆಯೆಂದು ಹೇಳಲಾಗುತ್ತಿದೆ. ಕೈಗಾರಿಕಾ ವಸ್ತು ಉತ್ಪನ್ನವು ಅಪಾರ ಪ್ರಮಾಣದಲ್ಲಿ ವೃದ್ಧಿಸಿದೆ. ವ್ಯಾಪಾರೋದ್ಯಮಗಳು ವಿಸ್ತರಿಸಿವೆ. ವಿಪುಲ ಪ್ರಮಾಣದ ಸಂಪತ್ತು ಸಂಗ್ರಹವಾಗಿದೆ. ವೈಜ್ಞಾನಿಕ ಸಂಶೋಧನೆಗಳಿಂದಾಗಿ ಮನುಷ್ಯ ಪ್ರಕೃತಿಯ ಮೇಲೆ ತನ್ನ ಹಿಡಿತವನ್ನು ಹಿಂದೆಂದಿಗಿಂತಲೂ ಹೆಚ್ಚು ಬಲಪಡಿಸಿಕೊಂಡಿದ್ದಾನೆ. ವೈಜ್ಞಾನಿಕ ತಂತ್ರಗಳಿಂದಾಗಿ ಹೊಸ ಹೊಸ ವಸ್ತುಗಳನ್ನು ಉತ್ಪತ್ತಿ ಮಾಡುವುದು ಮಾತ್ರವಲ್ಲದೆ ಹಿಂದಿನಿಂದ ಬಂದ ಉತ್ಪಾದನಾ ವಿಧಾನಗಳನ್ನು ನವೀಕರಿಸಿ ಬೆಳೆಸುವುದು ಸಾಧ್ಯವಾಗಿದೆ. ಇದೆಲ್ಲದರ ಪರಿಣಾಮವಾಗಿ ಇನ್ನಷ್ಟು ಮತ್ತಷ್ಟು ಪ್ರಗತಿಹೊಂದುವ ಭರವಸೆ ದೊರೆತಿದೆ. ದಿನದಿನಕ್ಕೆ ಹೆಚ್ಚುತ್ತಿರುವ ಅನುಕೂಲಗಳ ಕಾರಣದಿಂದಾಗಿ ಜನರಲ್ಲಿ ಹಿಂದೆಂದೂ ಕಾಣದಿದ್ದ ಉತ್ಸಾಹ ಭರವಸೆಗಳು ತಲೆದೋರಿವೆ. ಆದರೆ ಇಂತಹ ಆಶಾವಾದಕ್ಕೆ ಧಕ್ಕೆಯುಂಟುಮಾಡುವ ಸಂಗತಿಗಳೂ ಇಲ್ಲದಿಲ್ಲ. ಜಾಗತಿಕ ಮಟ್ಟದ ಎರಡು ಭೀಕರ ಮಹಾ ಯುದ್ಧಗಳು; ನಡುನಡುವೆ ಪ್ರಪಂಚದ ವಿವಿಧ ಭಾಗಗಳಲ್ಲಿ ಸಂಭವಿಸುತ್ತಿರುವ ಚಿಕ್ಕ ದೊಡ್ಡ ಅಂತಃಕಲಹಗಳು; ಕೊಲೆ ಸುಲಿಗೆಗಳು; ಮತಧರ್ಮೀಯ ಸಂಘರ್ಷಗಳು ಇವೆಲ್ಲ ಜನಸಾಮಾನ್ಯರ ಬದುಕಿಗೆ ಅಪಾಯವೊಡ್ಡಿವೆ. ಅಲ್ಲದೆ, ಅಪಾರ ಪ್ರಮಾಣದ ಭೋಗವಸ್ತುಗಳ ಉತ್ಪಾದನೆಯ ನಡುವೆಯೆ ಕಿತ್ತುತಿನ್ನುವ ಬಡತನವು ಆರ್ಥಿಕ ತಳಹದಿಯನ್ನು ಶಿಥಿಲಗೊಳಿಸಿದೆ. ಒಟ್ಟಿನ ಮೇಲೆ ಜನಸಾಮಾನ್ಯರ ಜೀವವು ತಲ್ಲಣಗೊಂಡಿದ್ದು ಆತಂಕದಲ್ಲಿ ಇರುವುದಂತೂ ನಿಜ. ಆದ್ದರಿಂದ 'ಪ್ರಗತಿ'ಯ ಬಗೆಗೆ ಸಂದೇಹವೂ ವ್ಯಾಪಕವಾಗಿದೆ.

ಪ್ರಗತಿಯ ಬಗೆಗಿನ ಸಂದೇಹಗಳನ್ನು ನಿವಾರಿಸುವ ಸಲುವಾಗಿ ಇತಿಹಾಸದ ಕಡೆಗೆ ಕಣ್ಣು ಹಾಯಿಸುತ್ತೇವೆನ್ನೋಣ. ಅಲ್ಲಿ ಕಾಣುವುದೇನು ? ಸ್ವತಃ ಇತಿಹಾಸಕಾರರು ತಮ್ಮ ಕಾಲದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳಿಂದ ಪ್ರಭಾವಿತರಾಗದೆ ಉಳಿಯಲಾರರು. ಪ್ರಾಚೀನ ಮತ್ತು ಮಧ್ಯಯುಗೀಯ ಇತಿಹಾಸಕಾರರಿಗೆ ಪ್ರಗತಿಯ ಕಲ್ಪನೆಯು ವಿನೂತನವೂ ಪರಕೀಯವೂ ಆಗಿತ್ತು. ಈಚಿನ ಹಲವು ಜನಪ್ರಿಯ ಇತಿಹಾಸಕಾರರು ಮತ್ತು ಪ್ರಕೃತಿ ವಿಜ್ಞಾನಿಗಳಲ್ಲಿ ನಿರಾಶಾವಾದ, ಇಲ್ಲವೆ ನಿಗೂಢ ರಹಸ್ಯವಾದ (mysticism)ವೊಂದು ತಲೆಹಾಕುತ್ತಿದೆ. ಇನ್ನೂ ಕೆಲವರು ಸರಳವೂ ಸಮೃದ್ಧವೂ ಆದ ಪ್ರಾಚೀನ 'ಸುವರ್ಣಯುಗ'ದ ಬಗೆಗೆ ಹಳಹಳಿಸುತ್ತಾರೆ. ವೈಜ್ಞಾನಿಕ ಸಂಶೋಧನೆಗಳು ಮತ್ತು ಲೌಕಿಕ ಭೋಗಭಾಗ್ಯಗಳ ವಿಸ್ತರಣೆಯು ಮಾನವನ ಅಧಃಪತನಕ್ಕೆ ಮೂಲಕಾರಣವೆಂಬುದು ಇವರ ವಾದ. ಮತ್ತೆ ಕೆಲವರು ಭಾವನಾತ್ಮಕವಾಗಿ ಕಲ್ಪಿಸಿಕೊಂಡ 'ಜೀವವಿಕಾಸತತ್ವ'ದೊಂದಿಗೆ ಪ್ರಗತಿಯನ್ನು ತಳುಕುಹಾಕುವುದುಂಟು. ಇವರ ಪ್ರಕಾರ ಜೀವವಿಕಾಸದಲ್ಲಿ ಮಾನವನೇ ಜೀವಜಗತ್ತಿನ ಪರಾಕಾಷ್ಠೆ; ಸೃಷ್ಟಿಯಲ್ಲಿ ಅತಿ ಶ್ರೇಷ್ಠನಾದವನು ಮನುಷ್ಯ ಎಂಬುದು ಇವರ ನಿಲುವು.

ಇತಿಹಾಸವನ್ನು ವ್ಯಕ್ತಿನಿರಪೇಕ್ಷ, ವಸ್ತುನಿಷ್ಠ ದೃಷ್ಟಿಯಿಂದ ಸಮೀಕ್ಷಿಸಿದಾಗ ಕಳೆದ ಒಂದೆರಡು ಶತಮಾನಗಳಲ್ಲಿನ ವೇಗವಾದ ಬೆಳವಣಿಗೆಯ ಕಾಲದಲ್ಲಿ ಹೇಗೋ ಹಾಗೆ ಮಂದಗತಿಯ ಪ್ರಾಚೀನ ಕಾಲದಲ್ಲಿ ಕೂಡ ಪ್ರಗತಿಯು ಇದ್ದೇ ಇತ್ತು ಎಂಬ ನಂಬಿಕೆಗೆ ಸಮರ್ಥನೆ ದೊರೆಯುತ್ತದೆ. ಒಂದು ಹೆಜ್ಜೆಯನ್ನು ಕಿತ್ತು ಮುಂದಿನ ಹೆಜ್ಜೆ ಇಕ್ಕಲು ತೆಗೆದುಕೊಂಡ ಕಾಲ ಹೆಚ್ಚೂ ಕಡಮೆ ಇರಬಹುದು ಅಷ್ಟೆ. ಚರಿತ್ರೆಯನ್ನು ವಸ್ತುನಿಷ್ಠವಾಗಿ ಸಮೀಕ್ಷಿಸಲು ನಾವು ಇತಿಹಾಸ ಮತ್ತು ಪ್ರಗತಿ ಎಂಬೆರಡು ಸಂಗತಿಗಳ ಬಗೆಗೂ ನಮ್ಮ ಅಭಿಪ್ರಾಯಗಳನ್ನು ಸುಧಾರಿಸಿಕೊಳ್ಳುವುದು ಅಗತ್ಯವಿದೆ. ವಸ್ತುನಿಷ್ಠ ವಿಧಾನದ ಒಂದು ಪ್ರಮುಖ ಅಗತ್ಯವೆಂದರೆ, ವೈಯಕ್ತಿಕ ಇಷ್ಟಾನಿಷ್ಟಗಳನ್ನು, ಖಾಸಗಿ ಅಭಿಪ್ರಾಯಗಳನ್ನು, ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸುವುದು. 'ವಿಜ್ಞಾನದ ಮನುಷ್ಯ' ತನ್ನ ಸ್ವಂತದ ಹಮ್ಮುಬಿಮ್ಮುಗಳನ್ನು ಬದಿಗಿರಿಸಲು ಅಭ್ಯಾಸ ಮಾಡಿಕೊಳ್ಳಬೇಕು. ಈ ವಿಚಾರದಲ್ಲಿ ವಿಜ್ಞಾನಿಗಳು ಅಂಕಿಸಂಖ್ಯೆಗಳಿಗೂ ಕರಾರುವಾಕ್ಕಾದ ಅಳತೆ ಪ್ರಮಾಣಗಳಿಗೂ ಕೊಡುವ ಮಹತ್ವಕ್ಕೆ ಅರ್ಥವಿಲ್ಲದಿಲ್ಲ. ಕರಾರುವಾಕ್ಕಾದ ಅಳತೆ ಪ್ರಮಾಣಗಳಿಂದ ದೊರೆಯುವ ಫಲಿತಾಂಶವು ನೈತಿಕ, ಮತಧಾರ್ಮಿಕ, ಸಾಮಾಜಿಕ ಇಷ್ಟಾನಿಷ್ಟಗಳಿಗೆ ಅತೀತವಾಗಿರುತ್ತದೆ. ವೈಯಕ್ತಿಕವಾಗಿ ನಮಗೆ ಇಷ್ಟವಿರಲಿ, ಇಲ್ಲದಿರಲಿ ಖಚಿತವಾದ ಕೆಲವು ಅಂಕಿಸಂಖ್ಯೆಗಳನ್ನು ನಾವು ಒಪ್ಪಲೇಬೇಕಾಗುತ್ತದೆಯಷ್ಟೆ.

ಮೇಲೆ ಹೇಳಿದಂಥ ಸರಳ ಮತ್ತು ವಸ್ತುನಿಷ್ಠ ವಿಧಾನದಿಂದ ಇತಿಹಾಸರಚನೆ ಮತ್ತು ಅದರ ಅಧ್ಯಯನಗಳು ಸುಲಭವಲ್ಲ. ಆದ್ದರಿಂದಲೇ ಇತಿಹಾಸವನ್ನು ಉದ್ದೇಶಿಸಿ 'ನಾವು ಪ್ರಗತಿ ಹೊಂದುತ್ತಿದ್ದೇವೆಯೇ ?' ಎಂದು ಕೇಳಲಾಗುವುದಿಲ್ಲ. ವಿಮಾನಗಳು, ಜಲಾಂತರ್ಗಾಮಿಗಳು, ವಿದ್ಯುತ್ ಸ್ಥಾವರಗಳು, ಪರಮಾಣು ಘಟಕಗಳು, ದೂರ ನಿಯಂತ್ರಣ ಸ್ಫೋಟಕಗಳು, ವಿಷಾನಿಲ ಯುದ್ಧಸಾಧನವಾಗಿ ರೋಗಾಣುಗಳ ಬಳಕೆ – ಇವೆಲ್ಲ ಪ್ರಗತಿಯೇ ? ಇಂಥ ಪ್ರಶ್ನೆಗಳಿಗೆ ದೊರೆಯುವ ಉತ್ತರವು ಒಂದೇ ಬಗೆಯಾಗಿರುವುದು ಸಾಧ್ಯವಿಲ್ಲ. ಅವು ಒಂದಕ್ಕೊಂದು ತಾಳೆಯಾಗಬೇಕೆಂಬ ನಿಯಮವೂ ಇಲ್ಲ. ಉತ್ತರ ಕೊಡುವವನ ಆಯಾ ಸಂದರ್ಭದ ಮನಃಸ್ಥಿತಿ, ಆರ್ಥಿಕ ಸ್ಥಿತಿ, ಆರೋಗ್ಯ ಸ್ಥಿತಿಗಳನ್ನು ಉತ್ತರಗಳು ಅವಲಂಬಿಸಿರುತ್ತವೆ.

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಾಯುವೇಗದಲ್ಲಿ ಸಂಚರಿಸುವ, ಕಾಲವನ್ನು ಉಳಿತಾಯ ಮಾಡುವ ಅಗತ್ಯವಿರುವವನಿಗೆ ಸ್ವಯಂಚಾಲಿತ ವೇಗಗಾಮಿ ವಾಹನಗಳು, ಹಗಲು ರಾತ್ರಿಗಳನ್ನು ಏಕರೀತಿಯಲ್ಲಿ ಬೆಳಗುವ ವಿದ್ಯುದ್ದೀಪಗಳು – ಈ ಎಲ್ಲ ಸೌಕರ್ಯಗಳು ತುಂಬ ಮೆಚ್ಚುಗೆಯಾಗುತ್ತವೆ. ಇಂಥ ಸೌಕರ್ಯಗಳನ್ನು ಬಳಸಿಕೊಳ್ಳಲು ಅಗತ್ಯವಾದ ಆರ್ಥಿಕ ಸಾಮರ್ಥ್ಯ ಅವನಲ್ಲಿರಬೇಕು ಅಷ್ಟೆ. ಆದರೆ, ವಾಯುಮಾಲಿನ್ಯದಿಂದ, ಕಲುಷಿತ ವಾತಾವರಣದಿಂದ ಬೇಸತ್ತಿರುವವರಿಗೆ, ಶ್ವಾಸಕೋಶಗಳಲ್ಲಿ ವಿಷಾನಿಲ ತುಂಬಿಕೊಂಡು ನರಳುತ್ತಿರುವವರಿಗೆ, ಹೊಗೆಯುಗುಳುವ ಪೆಟ್ರೋಲ್ ವಾಹನಗಳು, ಆಧುನಿಕ ಕಾರ್ಖಾನೆಗಳು ಇವೆಲ್ಲ ಕಿರಿಕಿರಿಯುಂಟುಮಾಡುತ್ತವೆ. ಹಾಗೆಯೇ, ತನ್ನ ದೇಶವು ಮತ್ತೊಂದು ದೇಶದ ಮೇಲೆ ಹೋರಾಟದಲ್ಲಿ ತೊಡಗಿರುವಾಗ ಅಥವಾ ತೊಡಗಬೇಕೆಂದು ಬಯಸುವಾಗ ಪರಮಾಣು ಬಾಂಬ್‌ನಿಂದ ಅಥವಾ ಯಾವುದೇ ಬಗೆಯ ಮಾರಕಾಸ್ತ್ರದಿಂದ ಶತ್ರುರಾಷ್ಟ್ರವನ್ನು ಧ್ವಂಸ ಮಾಡಬೇಕೆಂಬ ಆಲೋಚನೆ ಹಿತಕರವಾಗಿದ್ದೀತು. ಆದರೆ ಬಾಂಬ್ ದಾಳಿಯಲ್ಲಿ, ಸಿಡಿಮದ್ದಿನ ಸ್ಫೋಟದಲ್ಲಿ ಬಂಧುಬಾಂಧವರನ್ನೋ, ಗಂಡ ಮಕ್ಕಳನ್ನೋ ಕಳೆದುಕೊಂಡಿರುವವರಿಗೆ ಯುದ್ಧೋಪಯೋಗಿ ವೈಜ್ಞಾನಿಕ ಸಾಧನಗಳು ಶಾಪವೆನಿಸಬಹುದು. ಹಗಲು ರಾತ್ರಿಗಳೆನ್ನದೆ ಊರಿಂದೂರಿಗೆ ಅಲೆದಾಡಬೇಕಾದ, ನಿದ್ದೆಗೆಟ್ಟು ರಾತ್ರಿಪಾಳಿಗಳಲ್ಲಿ ಮೇಲಧಿಕಾರಿಗಳ ದಬ್ಬಾಳಿಕೆಯಲ್ಲಿ ಕೆಲಸಮಾಡಬೇಕಾದವರು ಆಧುನಿಕ ಔದ್ಯಮಿಕ ಪರಿಸರವನ್ನು ಸಂತೋಷದಿಂದ ಸ್ವಾಗತಿಸಲಾರರು. ಇಂಥವರು ಪ್ರಶಾಂತ ಗ್ರಾಮೀಣ ಪರಿಸರವನ್ನು ಬಯಸಬಹುದು.

ಬಯಸಿದಮಾತ್ರಕ್ಕೆ ನಿರ್ಮಲವಾದ ಪ್ರಶಾಂತ ಗ್ರಾಮೀಣ ಪರಿಸರ ಕೈಗೆಟುಕಿಬಿಡುತ್ತದೆ ಎಂದೇನೂ ಇಲ್ಲ. ಗ್ರಾಮಗಳಲ್ಲಿ ಅಂಥ ಪರಿಶುದ್ಧ ವಾತಾವರಣವಿದೆಯೆಂಬುದು ಕೂಡ ಒಂದು ಭ್ರಮೆ. ಹರಕುಮುರುಕು ಗುಡಿಸಲುಗಳಲ್ಲಿ ಕವಿದ ಕತ್ತಲು, ಹುಳುಹುಪ್ಪಟೆಗಳ ಕಾಟ, ತೆರೆದ ಬಾವಿ ಹೊಂಡಗಳ ನಿಂತ ನೀರಿನಲ್ಲಿ, ಗೊಬ್ಬರದ ಗುಂಡಿಗಳಲ್ಲಿ ತುಂಬಿದ್ದು ಸಾಂಕ್ರಾಮಿಕ ರೋಗಗಳನ್ನು ಹರಡುವ ಕ್ರಿಮಿಕೀಟಗಳು, ರೋಗಾಣುಜೀವಿಗಳು; ಕತ್ತಲಿನಲ್ಲಿ ದಾರಿಹೋಕರನ್ನು ದೋಚುವ ದರೋಡೆಕೋರರು – ಇದನ್ನೆಲ್ಲ ಯಾವುದೋ ಭ್ರಮೆಯಲ್ಲಿ ಕ್ಷಣಕಾಲ ಮರೆಯಬಹುದು ಅಷ್ಟೆ. ಹಾಗೆ ಮರೆತವರು ಜನವಸತಿಯಿಂದ ದೂರವಾದ, ವಾಹನ ಸೌಕರ್ಯಗಳೊಂದೂ ಇಲ್ಲದ ಕುಗ್ರಾಮವೊಂದರಲ್ಲಿ ಸ್ವಲ್ಪ ದಿನಗಳಾದರೂ ವಾಸಿಸಬೇಕಾಗಿ ಬಂದರೆ ಆಗ ಅದರ ಕಷ್ಟ ಅರಿವಾದೀತು.

ಅಪರಾಧ ಮತ್ತು ಶಿಕ್ಷೆಗಳ ವಿಚಾರದಲ್ಲಿ ಸಹ ಭಿನ್ನಾಭಿಪ್ರಾಯಗಳಿರುವುದು ಸಾಧ್ಯ. 'ಹಲ್ಲಿಗೆ ಹಲ್ಲು, ಕಣ್ಣಿಗೆ ಕಣ್ಣು' ಎಂಬ ದಂಡನೀತಿಗನುಗುಣವಾಗಿ, ಅಪರಾಧಿಗಳನ್ನು



ಪ್ರಗತಿಯ ಮೆಟ್ಟಲು – ಗಣಿಗಾರಿಕೆ

ಕ್ರೂರವಾಗಿ ದಂಡಿಸುವುದೇ ಸರಿಯೆಂದು ಭಾವಿಸುವವರಿಗೆ 'ಅಪರಾಧಿಗಳನ್ನು ಸುಧಾರಿಸಬೇಕು; ಸುಶಿಕ್ಷಿತರನ್ನಾಗಿಸಬೇಕು; ಮರಣದಂಡನೆಯು ಅಮಾನವೀಯ' – ಎಂಬಂಥ ಆಧುನಿಕ ಕಾನೂನು ಪದ್ಧತಿಗಳು ಒಪ್ಪಿಗೆಯಾಗಲಿಕ್ಕಿಲ್ಲ. ಹೀಗಾಗಿ 'ಪ್ರಗತಿ'ಯ ಬಗೆಗಿನ ಬಹುತೇಕ ಅಂಶಗಳ ವಿಚಾರದಲ್ಲಿ ಏಕಾಭಿಪ್ರಾಯ ಮೂಡುವುದು ಸಾಧ್ಯವಾಗಲಿಕ್ಕಿಲ್ಲ. ಆದ್ದರಿಂದ ಮಾನವಕುಲ ಪ್ರಗತಿ ಹೊಂದಿದೆಯೇ ? ಎಂದು ಪ್ರಶ್ನಿಸಿಕೊಳ್ಳುವುದಕ್ಕಿಂತ ಪ್ರಗತಿ ಎಂದರೇನು ? – ಎಂದು ಪ್ರಶ್ನಿಸಿಕೊಳ್ಳುವುದು ಉಚಿತವಾದೀತು.




'ಪ್ರಗತಿ' ಇತಿಹಾಸದ ವಿಷಯವೂ ಹೌದು, ವಿಜ್ಞಾನದ ವಿಷಯವೂ ಹೌದು. ಇಲ್ಲಿ ಇತಿಹಾಸವೆಂದರೆ ವಾಸ್ತವವಾಗಿ ಈವರೆಗೆ ಏನೇನು ನಡೆದಿದೆಯೋ ಅದೆಲ್ಲದರ ದಾಖಲೆ. ಸಾಮಾನ್ಯವಾಗಿ ಇತಿಹಾಸಕಾರರು ತಾವು ಕೈಗೆತ್ತಿಕೊಂಡ ಕಾಲಘಟ್ಟದ ಸಂಕೀರ್ಣ ಘಟನೆಗಳ ಸರಣಿಯಲ್ಲಿ ಬಹುಮುಖ್ಯವಾದವುಗಳನ್ನು, ತಮ್ಮ ದೃಷ್ಟಿಯಿಂದ ಅರ್ಥಪೂರ್ಣವಾದವುಗಳನ್ನು ದಾಖಲಿಸಿರುತ್ತಾರೆ. ಹೀಗಿದ್ದಾಗ ಕೂಡ ಇಂತಹ ದಾಖಲೆಗಳ ಮೂಲಕ ಹಾಯ್ದುಬರುವ ಪ್ರಗತಿಯ ಎಳೆಗಳನ್ನು ಗುರುತಿಸಬೇಕಾದರೆ, ಸಾಮಾನ್ಯವಾಗಿ ನಮ್ಮ ಶಾಲಾಕಾಲೇಜುಗಳಲ್ಲಿ ಕಲಿಸುವ ಸಾಂಪ್ರದಾಯಿಕ ಚರಿತ್ರೆಯ ಪಾಠಗಳಿಂದ ಭಿನ್ನವಾದ ದೃಷ್ಟಿಕೋನವು ಅಗತ್ಯವಾಗುತ್ತದೆ. ಮೊದಲನೆಯದಾಗಿ ವಿಷಯ ಮಂಡನೆ ಹಾಗೂ ಚರ್ಚೆಗೆ ಅನುಕೂಲವಾಗುವಂತೆ ಸಾಕಷ್ಟು ದೀರ್ಘವಾದ ಅವಧಿ ಮತ್ತು ವಿಶಾಲ ಕ್ಷೇತ್ರವನ್ನು ಗಣನೆಗೆ ತೆಗೆದುಕೊಳ್ಳುವುದು ಅಗತ್ಯ. ಅಲ್ಪ ಕಾಲಾವಧಿ ಅಥವಾ ಚಿಕ್ಕ ಪ್ರದೇಶಕ್ಕೆ ಚರ್ಚೆಯನ್ನು ಸೀಮಿತಗೊಳಿಸಿಕೊಂಡರೆ ಘಟನೆಗಳ ಸರಣಿಯಲ್ಲಿ ಅಂತರ್ಗತವಾಗಿರುವ ಮಾದರಿಯನ್ನು ಕಾಣಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ, ೧೪-೧೭ನೇ ಶತಮಾನಗಳಲ್ಲಿ ಅಸ್ತಿತ್ವದಲ್ಲಿದ್ದ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಸ್ಥಿತಿಯ ಬಗ್ಗೆ ಈ ವಿವರಗಳು ದೊರೆಯುತ್ತವೆ:

''ಧರ್ಮ ರಕ್ಷಣೆಗಾಗಿ ನಿರಂತರವಾಗಿ ಕದನಗಳಲ್ಲಿ ಭಾಗವಹಿಸಬೇಕಾಗಿದ್ದುದರಿಂದ ಸಾಮ್ರಾಜ್ಯಕ್ಕೆ ವಿಶೇಷವಾಗಿ ಧನ ಬೇಕಾಗಿತ್ತು. ಅರಸರಿಗೆ ಯುದ್ಧಕ್ಕೆ ಬೇಕಾದ ಕುದುರೆಗಳ ಆವಶ್ಯಕತೆ ಹೆಚ್ಚಾಗಿದ್ದು ಈ ಕಾರಣದಿಂದಲೇ ಅರಸರು ಪೋರ್ಚುಗೀಸರೊಡನೆ ಹಾರ್ದಿಕ ಸಂಬಂಧಗಳನ್ನಿಟ್ಟುಕೊಂಡು ಅವರಿಂದ ಕುದುರೆಗಳನ್ನು ಪಡೆಯುತ್ತಿದ್ದರು. ಈ ಅಶ್ವಪಡೆಗೆ ವಿಶೇಷವಾದ ಧನವ್ಯಯವಾಗುತ್ತಿತ್ತು. ಎಂತಲೇ ಧನಸಂಗ್ರಹಕ್ಕಾಗಿ ಉತ್ಪನ್ನ ಮೂಲಗಳನ್ನು ರೂಪಿಸಿಕೊಳ್ಳಬೇಕಾಗಿತ್ತು. ಆದುದರಿಂದಲೇ ಅರಸರೂ ಅಧಿಕಾರಿಗಳೂ ರಾಜ್ಯದ ಆರ್ಥಿಕ ಅಭಿವೃದ್ಧಿಗಾಗಿ ಶ್ರಮಿಸಿದರು. ಬೀಳುಬಿದ್ದಿದ್ದ ಸಾವಿರಾರು ಎಕರೆ ಭೂಮಿಯನ್ನು ಸಾಗುವಳಿಗೆ ತರಲಾಯಿತು. ಕಾಡುಗಳನ್ನು ಕಡಿದು ಹೆಚ್ಚಿನ ಭೂಮಿಯನ್ನು ವ್ಯವಸಾಯಕ್ಕೆ ಒಳಪಡಿಸಲಾಯಿತು. ಅದಕ್ಕೆಂದೇ ಆ ಹೊಸ ಪ್ರದೇಶಗಳಲ್ಲಿ ನೆಲೆಸಿದವರಿಗೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿ ತೆರಿಗೆಗಳಲ್ಲಿ ರಿಯಾಯಿತಿಗಳನ್ನು ತೋರಿಸಲಾಗಿತ್ತು. ಅನೇಕ ಗ್ರಾಮಗಳನ್ನು ನಗರಗಳಾಗಿ ಪರಿವರ್ತಿಸಿ ಅಲ್ಲಿ ವ್ಯವಸಾಯೋತ್ಪನ್ನಗಳನ್ನು ಮಾರಲು ಸಂತೆಗಳನ್ನು ಏರ್ಪಡಿಸಲಾಯಿತು.

''ರಾಜ್ಯದಲ್ಲಿ – ಹೆಚ್ಚಿನ ಮಟ್ಟಿಗೆ ಅನಂತಪುರ ಮತ್ತು ಕರ್ನೂಲು ಜಿಲ್ಲೆಗಳಲ್ಲಿ – ರತ್ನದ, ವಜ್ರದ ಗಣಿಗಳಿದ್ದವು. ರಾಜ್ಯದಲ್ಲಿ ನೂರಾರು ದೊಡ್ಡ ಸಣ್ಣ ರೇವುಗಳಿದ್ದವು. ರಾಜ್ಯವು ಮಲಯ, ಬರ್ಮಾ, ಚೀನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಅಬಿಸೀನಿಯ ಮತ್ತು ಪೋರ್ಚುಗಲ್ ದೊರೆಗಳೊಡನೆ ವ್ಯಾಪಾರ ಸಂಬಂಧ ಹೊಂದಿತ್ತು. ಬಟ್ಟೆ, ಅಕ್ಕಿ, ಕಬ್ಬಿಣದ ಅದುರು, ಮರ, ಸಂಬಾರ ಪದಾರ್ಥಗಳು, ಸಕ್ಕರೆ ಇವು ರಫ್ತು ಸಾಮಗ್ರಿಗಳು. ಹೀಗೆ ಭೂಮಿಯಿಂದ ಬರುವ ವಿಪುಲ ಆದಾಯ, ದೇಶಾಂತರಗಳ ವ್ಯಾಪಾರೋದ್ಯಮ ಸಾಧನೆಗಳಿಂದ ಹರಿದುಬರುವ ಧನಪ್ರವಾಹದಿಂದ ಸಾಮ್ರಾಜ್ಯ ಸಮೃದ್ಧವೂ ಧನಾಢ್ಯವೂ ಆಗಿತ್ತು. ಇಷ್ಟೆಲ್ಲ ಆದರೂ ವಿವಿಧ ರೀತಿಯ ತೆರಿಗೆಗಳಿಂದ ಜನರು ಕೆಲವೊಮ್ಮೆ ಸಹನಶಕ್ತಿಯನ್ನೇ ಕಳೆದುಕೊಂಡಂತೆ ತೋರುತ್ತದೆ. ನಾವಿದರೆಲ್ಲ ಒಟ್ಟುಗೂಡಿ ಸದಾಶಿವರಾಯನಿಗೆ 'ನಾವಿದವಾರಿ'ಯನ್ನು ತೆಗೆಯಬೇಕೆಂದು ಪ್ರಾರ್ಥನೆಮಾಡುವ ಅಂಶ ನೂರಾರು ಶಾಸನಗಳಿಂದ ತಿಳಿದಿದೆ. ಅಂತೆಯೇ ರಾಜ್ಯದಾದ್ಯಂತ ಮದುವೆಯ ಸುಂಕವನ್ನು ಕೃಷ್ಣದೇವರಾಯನು (ಕನ್ನಡ ವಿಷಯ ವಿಶ್ವಕೋಶ, ಮೈ.ವಿ. ೯೮೪) ಮನ್ನಾ ಮಾಡಿದ ವಿಷಯವೂ ತಿಳಿದಿದೆ.''

– ಹೀಗೆ ಒಂದೆರಡು ಶತಮಾನಗಳ ಅವಧಿಯ, ಒಂದು ಚಿಕ್ಕ ಸಾಮ್ರಾಜ್ಯದ ಇತಿಹಾಸದ ದಾಖಲೆಯಿಂದ ಪ್ರಗತಿಯ ಪರಿಕಲ್ಪನೆಯನ್ನು ಚರ್ಚಿಸುವುದು ಪ್ರಯೋಜನಕಾರಿಯಲ್ಲ.

ಪ್ರಾಚೀನ ಇತಿಹಾಸವನ್ನು ಸಾಮಾನ್ಯವಾಗಿ ರಕ್ಷಿಸಿಕೊಂಡು ಬಂದಿರುವುದು ರಾಜ ಮಹಾರಾಜರು, ದಂಡನಾಯಕರು, ಮಂತ್ರಿಗಳು, ಯುದ್ಧವೀರರ ಸಾಹಸಕಾರ್ಯಗಳು, ಅವರು ನಡೆಸಿದ ದಂಡಯಾತ್ರೆಗಳು, ಯುದ್ಧಗಳಲ್ಲಿನ ಕೊಲೆ ಸುಲಿಗೆಗಳನ್ನು ಚಿತ್ರಿಸುವ ರಾಜಕೀಯ ಚರಿತ್ರೆಯ ರೂಪದಲ್ಲಿ; ಅಥವಾ ಧರ್ಮಗುರುಗಳ ಉಪದೇಶಗಳು, ಧರ್ಮರಕ್ಷಣೆ-ಧರ್ಮಪ್ರಸಾರ, ಜಾತಿ ಮತಗಳ ವಿಂಗಡಣೆಯ ಕಥನರೂಪದಲ್ಲಿ. ಪ್ರಾಸಂಗಿಕವಾಗಿ ಆಯಾ ಕಾಲದ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು, ಕಲಾಪ್ರಕಾರ-ವಾಸ್ತುಶಿಲ್ಪಗಳ ವೈಭವ, ಬೌದ್ಧಿಕ ಸಾಧನೆಗಳ ಪ್ರಸ್ತಾಪ ಬರುವುದಿಲ್ಲವೆಂದಲ್ಲ – ಆದರೆ, ಅವುಗಳನ್ನು ವಿಂಗಡಿಸುವುದು ಕೂಡ ಆಯಾ ಅವಧಿಯಲ್ಲಿ ರಾಜ್ಯಭಾರ ನಡೆಸಿದ ರಾಜವಂಶಗಳ ಹೆಸರಿನಲ್ಲಿ; ಗುಪ್ತರ ಕಾಲ, ಮೌರ್ಯರ ಕಾಲ (ಮೇಲೆ ಹೇಳಿದ), ವಿಜಯನಗರದ ಅರಸರ ಕಾಲ, ಹೊಯ್ಸಳರ ಕಾಲ, ಮೊಘಲರ ಕಾಲ, ಬ್ರಿಟಿಷರ ಕಾಲ – ಇತ್ಯಾದಿಗಳನ್ನು ಗಮನಿಸಬಹುದು. ಇಂಥ ರಾಜಕೀಯ ಚರಿತ್ರೆಯೇ ಒಂದು ದೇಶದ ನಿಜವಾದ ಇತಿಹಾಸವೆಂದಾಗಲಿ, ಮನುಕುಲದ ಪ್ರಗತಿಯ ಮಾಪಕವೆಂದಾಗಲಿ ತಿಳಿಯುವುದು ಇಲ್ಲಿನ ಚರ್ಚೆಗೆ ಸಮ್ಮತವಲ್ಲ.

ಇತಿಹಾಸ ರಚನೆಯಲ್ಲಿ ಆಯಾ ಕಾಲ ಮತ್ತು ಪ್ರದೇಶದ ವಸ್ತು ಉತ್ಪಾದನೆ ಮತ್ತು ಉತ್ಪಾದನಾ ವಿಧಾನಗಳಿಗೆ ದೊರೆಯಬೇಕಾದ ಪ್ರಾಮುಖ್ಯವನ್ನು ಕಾರ್ಲ್ ಮಾರ್ಕ್ಸ್ ಒತ್ತಿಹೇಳಿದ್ದಾನೆ. ಮಾರ್ಕ್ಸ್‌ವಾದದ ಇನ್ನಿತರ ಅಂಶಗಳ ಬಗೆಗೆ ಎಷ್ಟೇ ಭಿನ್ನಾಭಿಪ್ರಾಯಗಳು ಇರಬಹುದಾದರೂ ಮಾರ್ಕ್ಸ್ ನಿರ್ದೇಶಿಸಿದ ಇತಿಹಾಸದ ಪರಿಕಲ್ಪನೆಯು ವಿದ್ವತ್ ಪ್ರಪಂಚದಲ್ಲಿ ವಿಶೇಷ ಮನ್ನಣೆ ಗಳಿಸಿದೆ. ಫ್ಯಾಸಿಸ್ಟ್ ಮನೋಭಾವದ ಕೆಲವರಿಗೆ ಕಿರಿಕಿರಿಯುಂಟುಮಾಡಬಹುದಾದರೂ ವಸ್ತು ಉತ್ಪಾದನಾ ವಿಧಾನ, ಉತ್ಪಾದನೆ ಮತ್ತು ಬಳಕೆಗಳನ್ನು ಆಧರಿಸಿದ ಇತಿಹಾಸದ ಈ 'ಸಾಂಸ್ಕೃತಿಕ ಪರಿಕಲ್ಪನೆ' ಮೌಲಿಕವಾದುದು.

ಯಾವುದನ್ನು ಸಾಮಾನ್ಯವಾಗಿ 'ಇತಿಹಾಸಪೂರ್ವಯುಗ' ಎನ್ನುತ್ತೇವೆಯೋ ಆ ಕಾಲದ ಮಾಹಿತಿಗಳು ಕೂಡ ಸಾಂಸ್ಕೃತಿಕ ಇತಿಹಾಸದ ರಚನೆಯಲ್ಲಿ ಸಹಾಯಕವಾಗುತ್ತವೆ. ಪುರಾತತ್ವ ಸಂಶೋಧಕರು ಆದಿಕಾಲದ ಜನ ಬಳಸಿದ ಹತಾರಗಳು, ಅವರು ತಯಾರಿಸಿದ ವಸ್ತುಗಳು, ಅವರು ತಿನ್ನುತ್ತಿದ್ದ ಆಹಾರ, ನೆಲವನ್ನು ಉಳುತ್ತಿದ್ದ ರೀತಿ – ಇತ್ಯಾದಿಗಳ ಅವಶೇಷಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುತ್ತಾರೆ. ಇದರಿಂದಾಗಿ ಯಾವ ದಾಖಲೆಗಳೂ ದೊರೆಯದಿದ್ದಾಗ ಸಹ ಆದಿಮರ ಆರ್ಥಿಕ ಸ್ಥಿತಿಗತಿಗಳ ಬಗೆಗೆ ಸ್ವಲ್ಪವಾದರೂ ತಿಳಿಯಲು ಸಾಧ್ಯವಾಗುತ್ತದೆ. ಅವರ ಉತ್ಪಾದನಾ ಸಾಧನಗಳು ಆಯಾ ಕಾಲಕ್ಕೆ ಅಸ್ತಿತ್ವದಲ್ಲಿದ್ದ ವಿಜ್ಞಾನ ಮತ್ತು ಅದನ್ನು ಅನ್ವಯಿಸಿದ ವಿಧಾನವನ್ನು ಪರಿಚಯ ಮಾಡಿಸುತ್ತವೆ. ಉದಾಹರಣೆಗೆ, ನದಿಗಳ ಮೇಲಿನ ಪ್ರಯಾಣಕ್ಕಾಗಿ ಬಳಸುವ ನಾವೆಯೊಂದರಿಂದ ಭೂಗರ್ಭಶಾಸ್ತ್ರ (ಇಂಧನತೈಲ, ಲೋಹದ ಅದಿರು), ಸಸ್ಯಶಾಸ್ತ್ರ (ಮರಗೆಲಸ), ರಸಾಯನಶಾಸ್ತ್ರ (ಲೋಹ ಮಿಶ್ರಣ), ಭೌತಶಾಸ್ತ್ರ (ಎಂಜಿನ್ ಇತ್ಯಾದಿ) – ಈ ಎಲ್ಲವನ್ನೂ ಸಂಯೋಜಿಸಿದ ವಿಧಾನವನ್ನು ಅಧ್ಯಯನ ಮಾಡಬಹುದು. ಶಿಲಾಯುಗದ ಮಾನವರು ಒಂದೇ ಮರದ ದಿಮ್ಮಿಯಿಂದ ತಯಾರಿಸಿಕೊಳ್ಳುತ್ತಿದ್ದ ತೋಡುದೋಣಿಯ ವಿಚಾರದಲ್ಲಿ ಕೂಡ ಈ ಮಾತು ನಿಜ. ಅಂದರೆ, ಒಂದು ನಾವೆಯ ರಚನೆ ಮತ್ತು ಅದನ್ನು ಬಳಸುತ್ತಿದ್ದ ರೀತಿಯ ಅಧ್ಯಯನದಿಂದ ಇಡೀ ಒಂದು ಸಮುದಾಯದ ಆರ್ಥಿಕ, ಸಾಮಾಜಿಕ ಪರಿಸ್ಥಿತಿಗಳನ್ನು ಊಹಿಸಿಕೊಳ್ಳುವುದು ಸಾಧ್ಯವಿದೆ. ನಾವೆ ಅಥವಾ ದೋಣಿಯ ತಯಾರಿಕೆಯಲ್ಲಿ ಭಾಗವಹಿಸುವವರು ಸ್ವತಃ ಮೀನು ಹಿಡಿಯುವುದನ್ನಾಗಲೀ, ಬೇಟೆಯನ್ನಾಗಲೀ, ಕೃಷಿಯನ್ನಾಗಲೀ ಮಾಡಿ ಬದುಕು ಸಾಗಿಸಬೇಕಾಗಿಲ್ಲ. ಆಯಾ ಕಸಬುಗಳಲ್ಲಿ ತೊಡಗಿದ ವೃತ್ತಿಪರರು ಉತ್ಪಾದಿಸಿದ 'ಹೆಚ್ಚುವರಿ ಉತ್ಪಾದನೆ'ಯಿಂದ ದೋಣಿ ತಯಾರಿಸುವವರಿಗೆ ಅಗತ್ಯವಾದ ಅನ್ನ ಬಟ್ಟೆಗಳು ದೊರೆಯುತ್ತವೆ. ಪೂರ್ವಜರು ತಯಾರಿಸುತ್ತಿದ್ದ ಮತ್ತು ಬಳಸುತ್ತಿದ್ದ ವಸ್ತುಗಳಲ್ಲಿ ಸೂಕ್ಷ್ಮ ನಯಗಾರಿಕೆಯಿರಲಿಲ್ಲವೆಂಬುದು ನಿಜ; ಅಂದಿನ ವಸ್ತುಗಳು ಪ್ರತಿಬಿಂಬಿಸುವ ಆರ್ಥಿಕ, ಸಾಮಾಜಿಕ ವ್ಯವಸ್ಥೆಯು ಇಂದಿಗಿಂತ ಭಿನ್ನವೂ, ಸರಳವೂ ಆಗಿತ್ತು ಎಂಬುದೂ ನಿಜ. ಏನಿದ್ದರೂ ಅದೊಂದು ಆರ್ಥಿಕ, ಸಾಮಾಜಿಕ ವ್ಯವಸ್ಥೆ ಎಂಬುದನ್ನು ಒಪ್ಪಬೇಕಾಗುತ್ತದೆ. ಆದಿವಾಸಿ ಬುಡಕಟ್ಟು ಜನಾಂಗಗಳಲ್ಲಿ ಇಂದಿಗೂ ಕೂಡ ಸ್ವಲ್ಪ ಹೆಚ್ಚು ಕಡಮೆ ಇದೇ ಬಗೆಯ ಸರಳ ವ್ಯವಸ್ಥೆಯು ಪ್ರಚಲಿತವಿದೆಯೆಂದು ಮಾನವಕುಲಶಾಸ್ತ್ರಜ್ಞರು ಹೇಳುತ್ತಾರೆ.

ಪ್ರಗತಿಯ ಪರಿಕಲ್ಪನೆಯನ್ನು ಇತಿಹಾಸದ ಮೂಲಕ ಅರ್ಥಮಾಡಿಕೊಳ್ಳಬೇಕಾದರೆ, ಕಾಲಘಟ್ಟಗಳಲ್ಲಿ ಹಿಂದುಹಿಂದಕ್ಕೆ ಹೋಗುತ್ತ, ಒಂದು ಪರಿಧಿಗೆ ಒಳಪಡುವ ಪ್ರದೇಶದ ಉತ್ಪಾದನಾ ವ್ಯವಸ್ಥೆಯಲ್ಲಿ ಉಂಟಾದ ಬದಲಾವಣೆಗಳನ್ನು ಕಾಲಕ್ರಮದಲ್ಲಿ ಹೋಲಿಸಿ

ನೋಡಬೇಕಾಗುತ್ತದೆ. ಪುರಾತತ್ವಜ್ಞರು ಉತ್ಪಾದನಾ ಸಲಕರಣೆಗಳಲ್ಲಿ ಆದ ಸುಧಾರಣೆಗಳನ್ನು, ಉತ್ಪಾದನಾ ವಿಧಾನದ ಬೆಳವಣಿಗೆಯನ್ನು ಅನುಕ್ರಮವಾಗಿ ಜೋಡಿಸಿ ತೋರಿಸುತ್ತಾರೆ. ಈ ದೃಷ್ಟಿಯಿಂದ ಅವರು ಇತಿಹಾಸಪೂರ್ವ ಕಾಲವನ್ನು ಶಿಲಾಯುಗ, ನವಶಿಲಾಯುಗ, ಕಂಚಿನಯುಗ, ಕಬ್ಬಿಣಯುಗ ಮೊದಲಾಗಿ ಹೆಸರಿಸುವುದು ಯಾದೃಚ್ಛಿಕವೇನಲ್ಲ. ಅವರು ಕೊಡುವ ಹೆಸರುಗಳು ಬಹುತೇಕ ಆಯಾ ಕಾಲದಲ್ಲಿ ಬಳಕೆಯಲ್ಲಿದ್ದ ಕೊಡಲಿಗಳನ್ನು – ಕತ್ತರಿಸುವ ಸಾಧನಗಳನ್ನು ತಯಾರಿಸಲು ಉಪಯೋಗಿಸಿದ ಮೂಲ ವಸ್ತುಗಳನ್ನು ಸೂಚಿಸುತ್ತವೆ. ಕೊಡಲಿಗಳು ಪ್ರಾಚೀನರು ಬಳಸಿದ ಹತಾರಗಳಲ್ಲಿ ಅತ್ಯಂತ ಮುಖ್ಯವಾದವು.

ಇತಿಹಾಸಪೂರ್ವ ಕಾಲದ ಕೆಲವಾದರೂ ಬದಲಾವಣೆಗಳನ್ನು 'ಕೈಗಾರಿಕಾ ಕ್ರಾಂತಿ' ಎಂದು ಹೆಸರಿಸುವ ಹದಿನೆಂಟನೇ ಶತಮಾನದ ನಾಟಕೀಯ ಬೆಳವಣಿಗೆಯೊಂದಿಗೆ ಹೋಲಿಸಬಹುದಾಗಿದೆ. ಈ ಬದಲಾವಣೆಗಳ ಮಹತ್ವವನ್ನು ಒಂದೇ ಮಾನದಂಡದಿಂದ ಪರಿಗಣಿಸಬೇಕು ಮತ್ತು ಫಲಿತಾಂಶಗಳನ್ನು ಅದೇ ಮೂಲಮಾಪಕದಿಂದ ನಿರ್ಣಯಿಸಬೇಕು. ಇತಿಹಾಸಪೂರ್ವ ಯುಗದ ಬದಲಾವಣೆಗಳು ಸದ್ಯದ ಸ್ಥಿತಿಯಲ್ಲಿ ನಮ್ಮ ಮೇಲೆ ಯಾವುದೇ ಪರಿಣಾಮವುಂಟುಮಾಡುವಂತಿಲ್ಲವಾದ್ದರಿಂದ ಅವುಗಳ ವಿಚಾರದಲ್ಲಿ ಯಾವ ಪೂರ್ವಗ್ರಹವೂ ಇಲ್ಲದೆ ವಸ್ತುನಿಷ್ಠ ತೀರ್ಮಾನಗಳನ್ನು ಕೈಗೊಳ್ಳುವುದು ಸಾಧ್ಯವಾಗುತ್ತದೆ.

ಪ್ರಾಗೈತಿಹಾಸಿಕಯುಗದ 'ಪ್ರಗತಿ'ಯು ಪ್ರಾಣಿಶಾಸ್ತ್ರದಲ್ಲಿ ಬರುವ 'ಜೀವ ವಿಕಾಸವಾದ'ಕ್ಕೆ ಸಮಾನವಾದುದೆನ್ನಬಹುದು. ಪ್ರಾಣಿಶಾಸ್ತ್ರದ ಅಧ್ಯಯನದಲ್ಲಿ ಪ್ರಗತಿ ಎಂಬುದನ್ನು ಬಳಸಬಹುದಾದರೆ, ಅದು 'ಬದುಕಿನ ಹೋರಾಟದಲ್ಲಿ ಗೆದ್ದು ಉಳಿಯುವುದು' ಎಂಬ ಅರ್ಥದಲ್ಲಿ ತಾನೆ? 'ಬಲಿಷ್ಠವಾದುದು ಬದುಕುತ್ತದೆ' ಎಂಬುದು ಜೀವವಿಕಾಸವಾದದ ಒಂದು ಅಂಗೀಕೃತ ಸೂತ್ರ. ಇಲ್ಲಿ 'ಬಲಿಷ್ಠ' ಎಂಬುದರ ಅರ್ಥ ಬದುಕುವುದು, ಗೆಲ್ಲುವುದು, ಉಳಿಯುವುದು – ಎಂದು ಮಾತ್ರ. ಬಲಿಷ್ಠತೆಯ ಒಂದು ತಾತ್ವಿಕ ಪರೀಕ್ಷೆಯನ್ನು ಹೀಗೆ ಮಾಡಬಹುದು :


ಕೈಗಾರಿಕಾ ಕ್ರಾಂತಿ – ವಿಮಾನ ನಿರ್ಮಾಣ

ಯಾವುದೇ ಒಂದು ಜೀವಜಾತಿಯಲ್ಲಿನ ಒಟ್ಟಾರೆ ಜೀವಿಗಳ ಸಂಖ್ಯೆಯನ್ನು ಒಂದೊಂದು ತಲೆಮಾರಿನಲ್ಲೂ ಲೆಕ್ಕಹಾಕುತ್ತ ಹೋಗುವುದು; ಹಾಗೆ ಲೆಕ್ಕಮಾಡಿದಾಗ ಒಟ್ಟಾರೆ ಜೀವಿಗಳ ಸಂಖ್ಯೆಯು ಮುಂದುಮುಂದಿನ ತಲೆಮಾರುಗಳಲ್ಲಿ ಹೆಚ್ಚುತ್ತ ಹೋದರೆ ಸದರಿ ಜೀವಜಾತಿಯು ಬದುಕಿನ ಹೋರಾಟದಲ್ಲಿ ಗೆದ್ದಿದೆ, ಗೆಲ್ಲುತ್ತಿದೆ ಅರ್ಥಾತ್ ಪ್ರಗತಿ ಹೊಂದುತ್ತಿದೆಯೆಂದು ತೀರ್ಮಾನಿಸಬಹುದು. ಒಂದುವೇಳೆ ಒಟ್ಟಾರೆ ಜೀವಿಗಳ ಸಂಖ್ಯೆಯು ತಲೆಮಾರಿನಿಂದ ಮುಂದಿನ ತಲೆಮಾರಿಗೆ ಕ್ಷೀಣಿಸುತ್ತ ಹೋದರೆ ಆ ಜೀವವರ್ಗವು ಬದುಕಿನ ಹೋರಾಟದಲ್ಲಿ ಸೋಲುತ್ತಿದೆ, ಹೀಗೆಯೇ ಮುಂದುವರಿದರೆ ಒಂದಾನೊಂದು ಕಾಲಕ್ಕೆ ನಾಶವಾಗುತ್ತದೆ ಎಂದು ತೀರ್ಮಾನಿಸಬೇಕಾಗುತ್ತದೆ.

ಜೀವಕುಲಶಾಸ್ತ್ರಜ್ಞರು ಜೀವಜಾತಿಗಳನ್ನು ವರ್ಗ, ಉಪವರ್ಗಗಳಾಗಿ ವಿಂಗಡಿಸುತ್ತಾರೆ ಅಷ್ಟೆ. ಇಂತಹ ವಿಂಗಡಣೆಯಲ್ಲಿ ಅವರು ಒಂದು ಜೀವಜಾತಿಯನ್ನು 'ಮೇಲುವರ್ಗ' ಎಂದು ಗುರುತಿಸಿದರೆ ಆ ಜೀವಜಾತಿಯು ಭೂಗ್ರಹದ ಮೇಲಿನ ಜೀವವಿಕಾಸ ಶ್ರೇಣಿಯಲ್ಲಿ ತಡವಾಗಿ ಕಾಣಿಸಿಕೊಂಡುದು – ಎಂದು ಸಂಕೇತ. ಈ ಅರ್ಥದಲ್ಲಿ ಮಾನವ 'ಮೇಲುವರ್ಗದ ಜೀವಿ' – ನಿಶ್ಚಿತವಾಗಿ.

ಜೀವವಿಕಾಸದಲ್ಲಿ ಕೆಳಹಂತದ ಹಲವು ಜೀವವರ್ಗಗಳು ಬದುಕುಳಿದಿರುವುದು ತಮ್ಮ ಅತ್ಯದ್ಭುತ ಸಂತಾನೋತ್ಪತ್ತಿ ಶಕ್ತಿಯಿಂದ. ಉದಾಹರಣೆಗೆ, ಕಾಡ್, ಲಿಂಗ್ ಮೊದಲಾದ ಕಡಲ ಮೀನುಗಳು ಏಕಕಾಲಕ್ಕೆ ಲಕ್ಷಗಟ್ಟಲೆ ಮೊಟ್ಟೆಯಿಡುತ್ತವೆ. ಆದರೆ ಅವುಗಳ ಪೈಕಿ ಅಂತಿಮವಾಗಿ ಬದುಕಿ ಉಳಿದು ಮರಿಗಳಾಗುವುದು ಕೆಲವೇ ಕೆಲವು ಮಾತ್ರ. ಇತ್ತ ಮಾನವ ಗಂಡು ಹೆಣ್ಣುಗಳ ಒಂದು ಜೋಡಿಯು ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ಮಕ್ಕಳನ್ನು ಪಡೆಯುವುದು ತೀರ ಅಪರೂಪ; ಅಲ್ಲದೆ ಹತ್ತಕ್ಕಿಂತ ಹೆಚ್ಚು ಮಕ್ಕಳನ್ನು ಪಡೆದ ದಂಪತಿಗಳು ಬಹಳ ವಿರಳ. ಇಷ್ಟಾಗಿಯೂ ಮಾನವಲೋಕದಲ್ಲಿ ಜನಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಲೇ ಇದೆ. ಅಂದ ಮೇಲೆ, ಸ್ಥೂಲವಾಗಿ ಹೇಳುವುದಾದರೆ, ಜೀವವಿಕಾಸ ಶ್ರೇಣಿಯಲ್ಲಿ ಮೇಲುಮೇಲಕ್ಕೆ ಏರಿದಂತೆ ಸಂತಾನೋತ್ಪತ್ತಿ ಶಕ್ತಿಯು ಕಡಿಮೆಯಾಗುತ್ತ ಬದುಕಿ ಉಳಿಯುವ ಸಾಧ್ಯತೆಯು ಹೆಚ್ಚುತ್ತ ಹೋಗುತ್ತದೆ ಎಂದಾಯ್ತು. ಆನೆ ಮತ್ತು ಮನುಷ್ಯರಲ್ಲಿ ಸಂತಾನೋತ್ಪತ್ತಿ ಶಕ್ತಿಯು ಕಡಿಮೆಯಿದ್ದರೂ ಈ ಎರಡು ಜೀವ ವರ್ಗಗಳು ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತ ಬಂದಿವೆ.

ಮಾನವಜಾತಿಯು ಬದುಕಿ ಉಳಿಯಲು ಮತ್ತು ತನ್ನ ಸಂಖ್ಯೆಯನ್ನು ಬೆಳೆಸಿಕೊಳ್ಳಲು ಕಾಲಕಾಲಕ್ಕೆ ಉಂಟಾದ ಬದಲಾವಣೆಗಳು ಎಷ್ಟರಮಟ್ಟಿಗೆ ಸಹಾಯಕವಾಗಿವೆ ಎಂಬ ದೃಷ್ಟಿಯಿಂದ ಪರಿಶೀಲಿಸಬಹುದು.

ಹದಿನೆಂಟನೇ ಶತಮಾನದ ಕೈಗಾರಿಕಾ ಕ್ರಾಂತಿಯಿಂದಾಗಿ ಜೀವನಾವಶ್ಯಕ ವಸ್ತುಗಳು ಮತ್ತು ಸಲಕರಣೆಗಳು ಸಮೃದ್ಧವಾದವು. ಉತ್ಪಾದನಾ ಮೂಲವಾದ ಹೊಸ ಸಾಮಾಜಿಕ ಸಂಬಂಧಗಳು ಮತ್ತು ಕೈಗಾರಿಕಾ ಆರ್ಥಿಕ ವ್ಯವಸ್ಥೆಗಳು ಜನಸಮೂಹದ ಮೇಲೆ ಹಿಂದಿನ ಯಾವುದೇ ರಾಜಕೀಯ ಅಥವಾ ಮತಧಾರ್ಮಿಕ ಕ್ರಾಂತಿಯು ಮಾಡದಿದ್ದಂತಹ ಪರಿಣಾಮ ಉಂಟುಮಾಡಿದವು. ಸ್ಫುಟವಾಗಿ ಎದ್ದುಕಾಣುವ ಒಂದು ಪರಿಣಾಮವೆಂದರೆ ದೈತ್ಯಾಕಾರದ ಜನಸಂಖ್ಯಾಸ್ಫೋಟ. ಈ ಹಿಂದೆ ಚರ್ಚಿಸಿದ ಜೀವಸಂಖ್ಯಾಭಿವೃದ್ಧಿ ದೃಷ್ಟಿಯಿಂದ ಪರಿಗಣಿಸಿದರೆ ಕೈಗಾರಿಕಾ ಕ್ರಾಂತಿಯು ಅತ್ಯಂತ ಸಫಲವಾಯಿತೆಂಬುದರಲ್ಲಿ ಅನುಮಾನವಿಲ್ಲ.

ಜನಸಂಖ್ಯೆಯ ಬೆಳವಣಿಗೆಯ ವಿಷಯವನ್ನು ತೀರ್ಮಾನಿಸಲು ಸಂಖ್ಯಾಶಾಸ್ತ್ರವು ವಸ್ತುನಿಷ್ಠ ಮಾನದಂಡವನ್ನೊದಗಿಸುತ್ತದೆ. ಹೊಸ ಉತ್ಪಾದನಾ ವ್ಯವಸ್ಥೆಯು ಸಾಧ್ಯವಾಗಿಸಿದ ವಿಜ್ಞಾನದ ಬೌದ್ಧಿಕ ಸಂಪತ್ತಿನ ಬಗೆಗಾಗಲಿ ಅಥವಾ ಅದರ ಜೊತೆಜೊತೆಯಲ್ಲೇ ಬಂದ ಬಾಲಕಾರ್ಮಿಕರ ದುಡಿಮೆ, ಕೊಳೆಗೇರಿಗಳು, ದಬ್ಬಾಳಿಕೆಗಳ ಬಗೆಗಾಗಲಿ ಇಲ್ಲಿ ಚರ್ಚಿಸುವುದರಿಂದ ಪ್ರಯೋಜನವಿಲ್ಲ. ಹಾಗೆ ಮಾಡುವುದರಿಂದ ಕೈಗಾರಿಕಾ ಕ್ರಾಂತಿಯ ವೈಭವವು ಮಾಸಳಿಸಿಬಿಡುತ್ತದೆ. ಹೋಲಿಕೆಗೆ ತಕ್ಕ ಮಾನದಂಡಗಳಿಲ್ಲವಾಗಿ ದುಷ್ಪರಿಣಾಮಗಳನ್ನು ವಸ್ತುನಿಷ್ಠವಾಗಿ ನೋಡಲು ಸಾಧ್ಯವಾಗುತ್ತಿಲ್ಲ. ಕೈಗಾರಿಕಾ ಕಾರ್ಖಾನೆಗಳಿಂದಾಗಿ ಶ್ರಮಿಕವರ್ಗದ ಮೇಲೆ ಎರಗಿದ ಸಂಕಷ್ಟಗಳು, ರೋಗರುಜಿನಗಳು, ಹೀನಸ್ಥಿತಿಗಳ ವಿಚಾರ ಎಲ್ಲರಿಗೂ ತಿಳಿದಿದೆ. ಆದರೆ ಶತಮಾನಗಳ ಹಿಂದಿನ ಅಸಂಖ್ಯಾತ ರೈತಸಮುದಾಯಗಳು, ಗಣಿಕೆಲಸಗಾರರು ಮತ್ತು ಕೂಲಿ ಕಾರ್ಮಿಕರ ಸ್ಥಿತಿಗತಿಗಳ ಬಗೆಗೆ ತಿಳಿದಿರುವುದು ಅತ್ಯಲ್ಪ. ದೊಡ್ಡ ನಗರಗಳಲ್ಲಿನ ವೃತ್ತಿಪರರ – ಹಾಗೆ ನೋಡಿದರೆ ಇವರು ಕೆಲವಾದರೂ ಸವಲತ್ತುಗಳನ್ನು ಪಡೆದ ಅಲ್ಪಸಂಖ್ಯಾತ ಅದೃಷ್ಟವಂತರು – ಸಂಘಟನೆಗಳ ಬಗೆಗೆ ಸಾಕಷ್ಟು ಕೇಳಿರುವೆವಾದರೂ ಮಧ್ಯಯುಗದ ಜೀತದಾಳುಗಳು ಅಥವಾ ಪ್ರಾಚೀನ ರೋಮ್ ಇಲ್ಲವೆ ಗ್ರೀಸ್ ದೇಶದ ಗುಲಾಮರ, ಪ್ರಾಚೀನ ಭಾರತದ ಅಸ್ಪೃಶ್ಯರ ಚಿತ್ರವನ್ನು ಕಲ್ಪಿಸಿಕೊಳ್ಳಲು ಹಿಂಜರಿಯುತ್ತೇವೆ. ಅಕಸ್ಮಾತ್ ಮಧ್ಯಯುಗೀಯ ವ್ಯವಹಾರ ದಾಖಲೆಯ ಒಂದು ಪುಟ ಅಥವಾ ಪ್ರವಚನವೊಂದರಿಂದ ಸತ್ಯಸಂಗತಿಯ ಮೇಲೆ ಬೆಳಕುಬಿದ್ದರೆ ಭಾವುಕರಾದವರು ಬೆಚ್ಚಿ ಕಣ್ಣು ಮುಚ್ಚುತ್ತಾರೆ. ಹೀಗಾಗಿ ಒಟ್ಟಿನ ಮೇಲೆ ನಾವು ಅಂಕಿಸಂಖ್ಯೆಗಳನ್ನು ಅವಲಂಬಿಸುವುದು ಅನಿವಾರ್ಯ.

ಮಾನವೇತಿಹಾಸದ ಮೊದಮೊದಲಿನ ಸ್ತರಗಳಲ್ಲಾದ ಬದಲಾವಣೆಗಳನ್ನು ಕೂಡ ಅಂಕಿಸಂಖ್ಯೆಗಳ ಸಹಾಯದಿಂದ ಅರ್ಥೈಸಿಕೊಳ್ಳಬಹುದು. ಹದಿನೆಂಟನೇ ಶತಮಾನದ ಕೈಗಾರಿಕಾ ಕ್ರಾಂತಿಯ ಹಾಗೆ ಪ್ರಾಚೀನ ಕಾಲದ ಕ್ರಾಂತಿಗಳು ಕೂಡ ಜನಸಂಖ್ಯೆಯ ಬೆಳವಣಿಗೆಗೆ ಪೂರಕವಾಗಿದ್ದವು. ಆದಿಕಾಲದ ಕ್ರಾಂತಿಗಳು ಇಂದಿನ ನಮ್ಮಿಂದ ಬಹುದೂರದಲ್ಲಿರುವುದರಿಂದ ಅವುಗಳ ಬಗೆಗೆ ನಾವು ಅತ್ಯುತ್ಸಾಹ ತಾಳುವುದಾಗಲಿ ಕ್ರುದ್ಧರಾಗುವುದಾಗಲಿ ಅಗತ್ಯವಿಲ್ಲ. ಹೀಗಾಗಿ ಭಾವುಕರು ಮತ್ತು ರಹಸ್ಯವಾದಿಗಳ ಅಭಿಪ್ರಾಯಕ್ಕೆ ಪ್ರತಿಯಾದ ಪ್ರಗತಿಯ ಕಲ್ಪನೆಯನ್ನು ಸಮರ್ಥಿಸಿಕೊಳ್ಳಲು ಅಂಕಿಸಂಖ್ಯೆಗಳು ಸಹಾಯಕವಾಗುತ್ತವೆ. ಇತಿಹಾಸಪೂರ್ವ ಮತ್ತು ಪ್ರಾಚೀನ ಇತಿಹಾಸ ಕಾಲದ ಕ್ರಾಂತಿಗಳು ಅರ್ಥಾತ್ ಪ್ರಮುಖ ಪರಿವರ್ತನೆಗಳು ಮಾನವ ಸಂಕುಲವು ಬದುಕುಳಿಯಲು ಮತ್ತು ತನ್ನ ಸಂಖ್ಯೆಯನ್ನು ವೃದ್ಧಿಸಿಕೊಳ್ಳಲು ಹೇಗೆ ಸಹಾಯಕವಾದವು ಎಂದು ಪ್ರತಿಪಾದಿಸುವುದಷ್ಟೇ ಲೇಖನದ ಮೊದಲ ಭಾಗದ ಉದ್ದೇಶವಾಗಿತ್ತು.

(ಮುಂದಿನ ಭಾಗ ಜನವರಿ ವಾರ್ಷಿಕ ಸಂಚಿಕೆಯಲ್ಲಿ)

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

# ಮಣ್ಣಿನ ಮಗ, ಪರಿಸರ ಮತ್ತು ಪ್ರಭುತ್ವ

೧೯ನೆಯ ಶತಮಾನದ ಉತ್ತರಾರ್ಧ. ಆಧುನಿಕ ಜಗತ್ತಿನ ಯಂತ್ರ ನಾಗರಿಕತೆ ತನ್ನ ಕಬಂಧ ಬಾಹುಗಳನ್ನು ಅಮೆರಿಕಾದ ಅನನ್ವೇಷಿತ ಕನ್ನೆನೆಲದ ಉದ್ದಗಲಕ್ಕೂ ಚಾಚುತ್ತಿದ್ದ ದಿನಗಳವು. ಅಂದಿನ ರಾಷ್ಟ್ರಾಧ್ಯಕ್ಷ ಫ್ರ್ಯಾಂಕ್ಲಿನ್ ಪಿಯರ್ಸ್ (೧೮೦೪-೬೯) ಅಜ್ಞಾತ ಅನಾಮಧೇಯ ರೆಡ್ ಇಂಡಿಯನ್ ನಾಯಕ ಸಿಯಾತಲ್‌ನಿಗೆ ಒಂದು 'ಕೋರಿಕೆ ಪತ್ರ' ಕಳಿಸಿದ (೧೮೫೫). ಇದಕ್ಕೆ ಈತ ಬರೆದ ಉತ್ತರದ ಮುಖ್ಯ ಭಾಗ 'ದಿ ಹಿಂದು' ದೈನಿಕದಲ್ಲಿ ಪ್ರಕಟವಾಗಿದೆ (೨೯-೫-೧೯೭೬).

ಅಷ್ಟು ಹಿಂದೆಯೇ ಈ 'ಅವಿದ್ಯಾವಂತ ಮತ್ತು ಅನಾಗರಿಕ' ಬುಡಕಟ್ಟು ಮುಂದಾಳು ಮಾನವ-ಪರಿಸರ-ನಾಗರಿಕತೆ ಸಂಬಂಧ ಕುರಿತು ಎಷ್ಟು ವೈಜ್ಞಾನಿಕವಾಗಿ ಚಿಂತಿಸಿದ್ದ ಮತ್ತು ಆ ಚಿಂತನೆ ವರ್ತಮಾನ ದಿನಗಳಲ್ಲಿ ಅದೆಷ್ಟು ಪ್ರಸ್ತುತವಾಗಿದೆ ಎಂಬುದನ್ನು ಈ ಪತ್ರದಲ್ಲಿ ಗಮನಿಸಬಹುದು.

**ಬುವಿಯಿದು ಬರಿ ಮಣ್ಣಲ್ಲೋ !**

ವಾಷಿಂಗ್ಟನ್ನಿನಲ್ಲಿರುವ ಮಹಾಪ್ರಭು ನಮ್ಮ ನೆಲವನ್ನು ಖರೀದಿಸುವ ತಮ್ಮ ಆಶಯ ವ್ಯಕ್ತಪಡಿಸಿದ್ದಾರೆ. ಸ್ನೇಹ ಮತ್ತು ಸದ್ಭಾವನೆಯ ನುಡಿಗಳನ್ನು ಸಹ ಮಹಾಪ್ರಭುಗಳು ನಮಗೆ ಕಳಿಸಿದ್ದಾರೆ. ಇದು ಅವರ ದಯಾವಂತಿಕೆಯ ದ್ಯೋತಕ. ಏಕೆಂದರೆ, ನಾವು ಮರುಸಲ್ಲಿಸಬಹುದಾದಂಥ ಸ್ನೇಹ ಅವರಿಗೆ ಅಗತ್ಯವಿಲ್ಲ ಎಂಬುದು ನಮಗೆ ತಿಳಿದಿದೆ. ಸ್ವಾಮೀ! ನಾವು ನಿಮ್ಮ ಬೇಡಿಕೆಯನ್ನು ಪರಿಶೀಲಿಸುತ್ತೇವೆ. ಹಾಗೆ ಮಾಡದಿದ್ದರೆ ಬಿಳಿಯನೊಬ್ಬ ತನ್ನ ತುಪಾಕಿಗಳ ಸಹಿತ ಬಂದು ನಮ್ಮನ್ನು ಕೊಂದು ಈ ನೆಲವನ್ನು ತಿಂದು ತೇಗಬಲ್ಲ ಎಂದು ನಮಗೆ ಗೊತ್ತುಂಟು.

ಆದರೆ ನೀವು ಬಾನನ್ನು ಹೇಗೆ ತಾನೇ ಕೊಳ್ಳಬಲ್ಲಿರಿ ? ಅಥವಾ ಮಾರಬಲ್ಲಿರಿ ? ಬುವಿಯ ಒಲವನ್ನು ? ಈ ಭಾವನೆಯೇ ನಮಗೆ ವಿಚಿತ್ರವಾಗಿದೆ. ಭೂಮಂಡಲದ ಪ್ರತಿಯೊಂದು ಅಂಶವೂ ನಮ್ಮ ಮಂದಿಗೆ ಪವಿತ್ರವಾದದ್ದು. ಒಂದೊಂದು ಮರದ ಕೊಂಬೆ ರೆಂಬೆಗಳು, ಕಡಲ ಕಿನಾರೆಯಲ್ಲಿಯ ಬಿಳಿ ಮರಳ ಹಾಸು, ದಟ್ಟ ಕಾಡುಗಳಲ್ಲಿಯ ಮಬ್ಬು ಇಬ್ಬನಿಯ ಮುಸುಕು, ಗುಂಯಿಗುಡುವ ಕೀಟದ ಸ್ವರ ಎಲ್ಲವೂ ನಮ್ಮ ಬಳಗದವರಿಗೆ ಆತ್ಮೀಯವಾದವು.

ಬಿಳಿಯನಿಗೆ ನಮ್ಮ ರೀತಿ-ರಿವಾಜುಗಳು ಅರ್ಥವೇ ಆಗುವುದಿಲ್ಲವೆಂದು ನಮಗೆ ಗೊತ್ತಿದೆ. ನೆಲದ ಯಾವುದೇ ಭಾಗ ಆತನಿಗೆ ಇನ್ನೊಂದು ಭಾಗದಂತೆ ಒಂದೇ. ಏಕೆಂದರೆ, ಅವನು ನಿಶಾಚರನಾದ ಹೊಸಬ. ತನಗೆ ಬೇಕಾದದ್ದನ್ನೆಲ್ಲ ನೆಲದಿಂದ ಕತ್ತರಿಸುವುದೊಂದೇ ಅವನಿಗೆ ತಿಳಿದಿರುವ ಕಸಬು. ಭೂಮಿ ಅವನ ಭ್ರಾತೃವಲ್ಲ, ಶತ್ರು. ಇದನ್ನು ಜಯಿಸಿದ ಬಳಿಕ ಅವನು ಮತ್ತೆ ಮುಂದೆ ಸಾಗುತ್ತಾನೆ. ಅವನ ಸುಡುವ ಹಸಿವು ಇಡೀ ಇಳೆಯನ್ನೇ ಕಬಳಿಸಿ ಬೆಂಗಾಡಾಗಿಸುತ್ತದೆ.

**ಎಲ್ಲರ ದೇವರೂ ಒಬ್ಬನೇ**

ನಿಮ್ಮ ನಗರಗಳ ದೃಶ್ಯ ರೆಡ್ ಇಂಡಿಯನ್‌ರ ಕಂಗಳಲ್ಲಿ ನೋವು ಉಂಟುಮಾಡುತ್ತದೆ. ಪ್ರಾಯಶಃ ಕೆಂಪು ಮನುಷ್ಯ ಒಬ್ಬ ಮೃಗ. ನಿಮ್ಮ ಸೂಕ್ಷ್ಮ ಅವನಿಗೆ ಅರ್ಥವಾಗುವುದಿಲ್ಲ. ನೀವು ನೀಡಿರುವ ಕರೆಯನ್ನು ನಾವು ಮನ್ನಿಸುವುದು ಅನಿವಾರ್ಯವಾಗಿದೆ. ಆದರೆ ಒಂದು ಷರತ್ತನ್ನು ನಿಮ್ಮ ಮುಂದಿಡಬಯಸುತ್ತೇನೆ : ಈ ನೆಲದ ಜಂತುಗಳನ್ನು ಬಿಳಿ ಮನುಷ್ಯ ತನ್ನ ಸೋದರ ಪ್ರಾಣಿಗಳು ಎಂಬುದಾಗಿ ಪರಿಗಣಿಸಬೇಕು. ನಾವು ಕಂಡುಕೊಂಡಿರುವ ಸತ್ಯ ಒಂದುಂಟು, ಇದನ್ನು ಬಿಳಿ ಮನುಷ್ಯ ಕೂಡ ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತಾನೆ : ನಮ್ಮೆಲ್ಲರ ದೇವರೂ ಒಬ್ಬನೇ.

ನಮ್ಮ ನೆಲವನ್ನು ಹೇಗೆ ನೀವು ಸ್ವಂತಕ್ಕೆ ದೋಚಬೇಕೆಂದು ಹವಣಿಸಿದ್ದೀರೋ ಹಾಗೆ ಆತನನ್ನು ಕೂಡ ಕೇವಲ ನಿಮ್ಮ ಖಾಸಾ ಸೊತ್ತಾಗಿ ಬಾಚಿಕೊಳ್ಳಲು ಬಗೆದಿರಬಹುದು. ಆದರೆ ಇದು ಸಂಭವಿಸದು. ಅವನು ಜನರ ದೇವರು. ಅವನ ಕರುಣೆ ಕೆಂಪು ಮಂದಿಗೂ ಬಿಳಿ ಮಂದಿಗೂ ಸಮವಾಗಿಯೇ ವಿತರಣೆಗೊಂಡಿದೆ. ಧರಣಿಮಂಡಲ ಆತನಿಗೆ ಅಮೂಲ್ಯವಾದದ್ದು. ಇದನ್ನು ಕುಲಗೆಡಿಸುವುದೆಂದರೆ ಸೃಷ್ಟಿಕರ್ತನ ಮೇಲೆ ಅವಹೇಳನ ಹೇರಿದಂತೆ. ಬಿಳಿಯರು ಕೂಡ, ಪ್ರಾಯಶಃ ಇತರ ಬುಡಕಟ್ಟಿನವರಿಗಿಂತ ಬಲು ಬೇಗ, ತೊಲಗಿಹೋಗುತ್ತಾರೆ. ನಿಮ್ಮ ಹಾಸಿಗೆಯನ್ನು ಹೊಲಸುಗೊಳಿಸುವ ಹೊಣೆಗೇಡಿತನವನ್ನು ಹೀಗೆಯೇ ಮುಂದುವರಿಸುತ್ತಿರಿ – ಒಂದು ರಾತ್ರಿ ಆ ರೊಚ್ಚೆಯಲ್ಲಿ ನಿಮ್ಮ ಉಸಿರೇ ಕಟ್ಟಿಹೋಗುತ್ತದೆ.

ಕಾಡೆಮ್ಮೆಗಳೆಲ್ಲವನ್ನೂ ಕಡಿದೊಗೆದ ಬಳಿಕ, ಕಾಡು-ಕುದುರೆಗಳೆಲ್ಲವನ್ನೂ ಪಳಗಿಸಿ ಮುಗಿದ ತರುವಾಯ, ವನಾಂತರಗಳ ಪ್ರಶಾಂತ ಏಕಾಂತಗಳೆಲ್ಲವೂ ನರಗಬ್ಬಿನಿಂದ ನಾರುತ್ತಿರುವಾಗ ಮತ್ತು ಫಲಭರಿತ ಗಿರಿದೃಶ್ಯಗಳು ಚಲ್ಲಗಾತಿಯರ ಬೋಳು ಹರಟೆಯಲ್ಲಿ ಮುಳುಗಿಹೋದಾಗ ಹೊದರೆಲ್ಲಿ ಉಳಿದಿರುವುದು ? ಹದ್ದನ್ನು ಎಲ್ಲರಸಲಿ ? ಈ ಸೂರೆಗೆ, ಈ ಹತ್ಯೆಗೆ ಅಂತ್ಯವೆಂದು ? ಸಾವಿನ ಮೊನೆ ತಿವಿಯುವಂದೇ ಬದುಕಿನ ಕೊನೆ.

ಜಿ. ಟಿ. ನಾರಾಯಣರಾವ್



### ನಿಸರ್ಗ ನಿನಾದ

ಬಿಳಿಯನ ಪಟ್ಟಣಗಳಲ್ಲಿ ಎಲ್ಲಿಯೂ ಶಾಂತ ಪ್ರದೇಶವೇ ಇಲ್ಲ. ವಸಂತ ಮಾರುತದಿಂದ ತೊನೆಯುವ ಎಲೆಗಳ ಕಲರವ ಅಲ್ಲಿಲ್ಲ; ಜೀರುಂಡೆಗಳ ರೆಕ್ಕೆ ಅದಿರಿಕೆಯ ಸೊಲ್ಲು ಅಲ್ಲಿಲ್ಲ; ಬಿಬ್ರಿ ಪಾಳೆಯದ ಲಯಬದ್ಧ ವಾದ್ಯಮೇಳವೂ ಇಲ್ಲ. ಆದರೆ ನಾವು ಅನಾಗರಿಕರು, ನಮಗೆ ತಿಳಿಯಲಾರದೋ ಏನೋ! ನಿಮ್ಮ ನಗರಗಳ ಗಲಭೆ ಹರಟೆಗಳು ನಮ್ಮ ಕಿವಿಗಳನ್ನು ಕಿವುಡಾಗಿಸುತ್ತವೆ. ಕೋಗಿಲೆಯ ಕುಹುಕುಹು ರವವನ್ನಾಗಲೀ ಇರುಳ ವೇಳೆ ಕೊಳದ ಸುತ್ತ ಹಿಂಡು ಹಿಂಡು ನೆರೆದು ಅಖಂಡ ಸಂವಾದದಲ್ಲಿ ಲೀನವಾಗಿರುವ ಮಂಡೂಕಗಳ ಟ್ರೊಂಯ್ ಟ್ರೊಂಯ್ ನಾದವನ್ನಾಗಲೀ ಆಲಿಸಲಾಗದಿದ್ದರೆ ಬದುಕಿನಲ್ಲಿ ಉಳಿದುದೇನು ?

ನಡುಹಗಲ ಮಳೆಯಿಂದ ಕೊಳೆ ತೊಳೆದ ಅಥವಾ ಸುರಹೊನ್ನೆಯ ಕಂಪು ಧರಿಸಿದ ಮೆಲ್ಲೆಲರಿನ ಬೀಸು ರೆಡ್ ಇಂಡಿಯನ್‌ಗೆ ಬಲು ತಂಪು. ಹಕ್ಕಿಗಳ ಇಂಚರ ಆತನಿಗೆ ಬಲು ಇಂಪು. ಕೆಂಪು ಮನುಷ್ಯನಿಗೆ ವಾಯು ಅತ್ಯಮೂಲ್ಯ ಸಂಪತ್ತು. ಏಕೆಂದರೆ ಇದೇ ಎಲ್ಲರಿಗೂ – ಪ್ರಾಣಿಗಳನ್ನೂ ಸಸ್ಯಗಳನ್ನೂ ಒಳಗೊಂಡಂತೆ – ಜೀವದಾಯಕ ಉಸಿರು. ತಾನು ಉಸಿರಾಡುವ ವಾಯುವನ್ನು ಬಿಳಿ ಮನುಷ್ಯ ಗಮನಿಸಿರುವಂತೆ ತೋರುವುದಿಲ್ಲ. ನವೆದು ನವೆದು ಸಾಯುತ್ತಿರುವ ರೋಗಿಯಂತೆ ಆತ ಪರಿಮಳಕ್ಕೆ ಮರವಟ್ಟಿದ್ದಾನೆ.

ಪ್ರಾಣಿಸಂಗವಿಲ್ಲದಂಥ ಮಾನವನ ಬದುಕು ಬದುಕೇ? ವನ್ಯ ಪ್ರಾಣಿಗಳೆಲ್ಲವೂ ನಿರ್ನಾಮವಾಗಿ ಹೋದುವೋ ಮಾನವ ಧೃತಿಗುಂದಿದವನಾಗಿ, ಏಕಾಕಿಯೂ ಏಕಾಂಗಿಯೂ ಆಗಿ, ಸತ್ತ್ವವಿಹೀನನಾಗಿ ನಶಿಸಿಹೋಗುವುದು ನಿಚ್ಚಳ ಸತ್ಯ. ಏಕೆಂದರೆ, ಪ್ರಾಣಿಗಳಿಗೆ ಇಂದು ಯಾವ ಪಾಡು ಒದಗುವುದೋ ಅದು ನಾಳೆ ಯಮನಾಗಿ ಮಾನವನನ್ನು ಅಪ್ಪಳಿಸುವುದು ನಿಸರ್ಗ ನಿಯಮ.

### ನಿಮ್ಮ ಕನಸುಗಳೇನು ?

ಬಿಳಿ ಮನುಷ್ಯನ ಕನಸುಗಳೇನು ? ಚಳಿಗಾಲದ ಸುದೀರ್ಘ ರಾತ್ರಿಗಳಲ್ಲಿ ಆತ ತನ್ನ ಎಳೆಯರ ಕಲ್ಪನೆಗಳಿಗೆ ಕಟ್ಟುವ ರೆಕ್ಕೆಗಳೇನು ? ಅವರ ಎದುರು ಎತ್ತಿ ಹಿಡಿಯುವ ಭವ್ಯ ಆದರ್ಶಗಳೇನು ? ಅವರು ಲೋಕವನ್ನು ಯಾವ ತೆರನಾಗಿ ಸ್ವಾಗತಿಸಬೇಕೆಂದು ಆತ ಬಯಸುತ್ತಾನೆ ? ಇವು ಯಾವುವೂ ನಮಗೆ ತಿಳಿದಿಲ್ಲ. ನಾವು ದಸ್ಯುಗಳು. ಬಿಳಿಯನ ಕನಸುಗಳಿಗೆ ನಮಗಿಲ್ಲ ಪ್ರವೇಶ. ಅವು ಹೇಗಿರಬಹುದು ಎಂಬುದು ನಮಗೆ ಗೊತ್ತಿಲ್ಲದಿರುವುದರಿಂದ ನಮ್ಮ ಚಿಂತನೆಯ ಧಾಟಿಯಲ್ಲಿಯೇ ಮುಂದುವರಿಯುತ್ತೇವೆ.

ನಮಗೆ ಮೀಸಲು ಪ್ರದೇಶವೊಂದನ್ನು ಒದಗಿಸುವ ಭರವಸೆ ನೀಡಿದ್ದೀರಿ. ಆ ಮಾತಿನ ಮೇರೆಗೆ ನಾವು ನಿಮಗೆ ಈ ನೆಲೆಯನ್ನು - ನಮ್ಮ ತಾಯಿಯನ್ನು – ಮಾರುತ್ತೇವೆ. ಪ್ರಾಯಶಃ ಆ ಹೊಸ ತಾಣದಲ್ಲಿ ನಾವು ನಮ್ಮ ಇಚ್ಛಾನುಸಾರ ಉಳಿದ ಎಣಿಕೆ ದಿನಗಳನ್ನು ತಳ್ಳಿಯೇವು. ಕೊನೆಯ ರೆಡ್ ಇಂಡಿಯನ್ ಈ ಸುಂದರ ವಸುಂಧರೆಯಿಂದ ಅಂತರ್ಧಾನನಾದ ಮೇಲೆ ಮಾತ್ರವೇ ಅಲ್ಲ, ಆತನ ಸ್ಮೃತಿಪಟಲಗಳ ಮೇಲೆ ಸರಿಯುವ ತೆಳು ಮೋಡಗಳ ನೆರಳಾದ ಬಳಿಕವೂ ಈ ಕಿನಾರೆ ಮತ್ತು ಕಾಡುಗಳು ಆತನ ಸತ್ತ್ವ ತೇಜಸ್ಸುಗಳನ್ನು ಹಿಡಿದಿಟ್ಟಿರುತ್ತವೆ. ಏಕೆಂದರೆ ಕೆಂಪು ಜನ ಭೂಮಾತೆಯನ್ನು ನವಜಾತ ಶಿಶು ತನ್ನ ತಾಯಿಯ ಗುಂಡಿಗೆ ಮಿಡಿತವನ್ನು ಮುದ್ದಿಸಿ ಅಪ್ಪುವಂತೆ ಪ್ರೀತಿಸಿ ಆಲಿಂಗಿಸಿಕೊಂಡಿದ್ದಾರೆ.

ನಮ್ಮ ಈ ವಲಯವನ್ನು ನಿಮಗೆ ಮಾರುತ್ತೇವೆ. ಆದರೆ ನಾವು ಇದನ್ನು ಪ್ರೀತಿಸಿದಂತೆ ನೀವೂ ಪ್ರೀತಿಸಬೇಕು, ಓಲೈಸಿದಂತೆ ನೀವೂ ಓಲೈಸಬೇಕು, ಆರೈಸಿದಂತೆ ನೀವೂ ಆರಯಿಸಬೇಕು. ಇದರ ಈಗಿನ ಚಿತ್ರವನ್ನು ನಿಮ್ಮ ಮನಃಪಟಲದ ಮೇಲೆ ಪಡಿಮೂಡಿಸಿ ಚೆನ್ನಾಗಿ ಕಾಪಾಡಿಕೊಳ್ಳಿ. ನಿಮ್ಮ ಸಮಸ್ತ ತ್ರಾಣ ಪ್ರಾಣಗಳಿಂದ ಹೃದಯಪೂರ್ವಕವಾಗಿ ಇದನ್ನು ನಿಮ್ಮ ಮಕ್ಕಳಿಗೋಸ್ಕರ ರಕ್ಷಿಸಿ. ಭಗವಂತ ಸಮಸ್ತರನ್ನೂ ಹೇಗೆ ಪ್ರೀತಿಯಿಂದ ಕಾಣುವನೋ ಹಾಗೆ ನೀವು ಇದನ್ನು ಪ್ರೀತಿಯಿಂದ ನೋಡಿಕೊಳ್ಳಿ. ಒಂದು ಸಂಗತಿಯಂತೂ ನಮಗೆ ಚೆನ್ನಾಗಿ ಮನದಟ್ಟಾಗಿದೆ : ನಿಮ್ಮ ಮತ್ತು ನಮ್ಮ ದೇವರು ಒಬ್ಬನೇ. ಈ ನೆಲ ಅವನ ಕೃತಿ. ಇದು ಅವನಿಗೆ ಅತಿ ಪ್ರಿಯವಾದದ್ದು, ಅಮೂಲ್ಯವಾದದ್ದು. ಮನುಕುಲದ ಸಾಮೂಹಿಕ ಅಭಿಯಾನದಲ್ಲಿ ಬಿಳಿಯ ಕೂಡ ಅಪವಾದವಾಗಲಾರ.

ಅನುವಾದಕ : **ಜಿ. ಟಿ. ನಾರಾಯಣರಾವ್**
೮ ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯

## ಕನಸುಗಳನ್ನು ಕಾಪಾಡುವವರು

ಎಷ್ಟೋ ವರುಷಗಳಿಂದ ನಮ್ಮ ಸೂರ್ಯನ
ಬೆಂಕಿಯಲ್ಲಿ ಬೇಯಿಸುತ್ತಿದ್ದಾರೆ
ನೋಡಿ ನನ್ನ ಚಂದ್ರನ ಎದೆಗೆ
ಮತ್ತೆ ಬಂದೂಕು ಹಿಡಿದಿದ್ದಾರೆ
ಮಿಣುಕುಹುಳುಗಳ ಹಾಗೆ ನಕ್ಷತ್ರಗಳ
ಹಿಡಿಹಿಡಿದು ಗಲ್ಲಿಗೇರಿಸುತ್ತಿದ್ದಾರೆ

ನರರೂಪದ ವಾನರರು ನನ್ನ ಕಲ್ಪನೆಯ
ಲಂಕೆಗೆ ಲಗ್ಗೆ ಹಾಕುತ್ತಿದ್ದಾರೆ
ಖಾದಿ, ಕಾವಿ, ಖಾಖಿಯ
ಕರತಾಳಕೆ ತಕ್ಕಂತೆ ಜನ ಕುಣಿಯುತ್ತಿದೆ

ಹೀಗಾದರೆ ಏನು ಮಾಡಲಿ
ಈಗಾಗಲೆ ಯಾರದೋ ಹೆಸರಿಗೆ ಅಡವಿಟ್ಟ
ನನ್ನ ಕನಸುಗಳನ್ನು ಕಾಪಾಡುವವರು ಯಾರು

ಅಮ್ಮೀ, ನಿನ್ನ ಹಾಗೆ ಅಲ್ಲ ನಾನು
ನಿನ್ನ ಕೆಂಪುನಾಲಿಗೆ ಮೇಲೆ
ನಾನೊಂದು ಕಪ್ಪುಚುಕ್ಕಿಯ ಕಲೆ



ಆರೀಫ್ ರಾಜ
ಸಾ. ಪೋ., ಅರಕೇರಾ - ೫೮೪ ೧೧೧, ದೇವದುರ್ಗ ತಾಲೂಕು
ರಾಯಚೂರು ಜಿಲ್ಲೆ

# ಜಾಗತೀಕರಣಕ್ಕೆ ಮಾರಕವಾಗಿ ಬರಲಿ
# ಮಹಿಳಾ ಧ್ವನಿ

**ಪ್ರ**ಸಕ್ತ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಮಹಿಳೆಯರು ಹಿಂದೆಂದಿಗಿಂತಲೂ ಗಣನೀಯ ಪ್ರಗತಿ ಸಾಧಿಸುತ್ತಿದ್ದಾರೆ. ಸಂತಸ. ಆದರೆ ಜಾಗತೀಕರಣ, ಖಾಸಗೀಕರಣದ ಹೆಸರಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಬಹುದೊಡ್ಡ ಸಂಖ್ಯೆಯಲ್ಲಿ ಭಾರತದಲ್ಲಿ ಬಂಡವಾಳ ಹೂಡಿ ವಿವಿಧ ವಲಯಗಳಲ್ಲಿ ಬೃಹತ್ ಪ್ರಮಾಣದಲ್ಲಿ ಕಾಲ್ ಸೆಂಟರ್, ಐ.ಟಿ. ಸಂಸ್ಥೆಗಳನ್ನು ಹುಟ್ಟುಹಾಕಿವೆ. ವಿದೇಶಕ್ಕೆ ಹೋಲಿಸಿದರೆ ಇಂಥ ಸಂಸ್ಥೆಗಳಲ್ಲಿ ನಮ್ಮ ದೇಶದಲ್ಲಿ ಅಗ್ಗ ದರದಲ್ಲಿ ಕೆಲಸ ಮಾಡಲಿಕ್ಕೆ ಯುವಕರು, ವಿಶೇಷವಾಗಿ ಹದಿಹರಯದ ಯುವತಿಯರು, ಹೇರಳವಾಗಿ ದುಡಿಯಲಿಕ್ಕೆ ಸಿಗುವರು. ಈ ಮೊದಲೇ ನಮ್ಮ ದೇಶದಲ್ಲಿ ಬಡತನ, ನಿರುದ್ಯೋಗ ತಾಂಡವ ವಾಡುತ್ತಿದೆ. ಪದವಿಗೆ ತಕ್ಕಂತೆ ಹುದ್ದೆಗಳಿಲ್ಲ, ಹುದ್ದೆ ಸಿಕ್ಕರೆ ತಕ್ಕ ಸಂಬಳವಿಲ್ಲ, ಇಂಥ ಉಸಿರುಗಟ್ಟಿಸುವ ಸ್ಥಿತಿ ನಮ್ಮ ದೇಶದ್ದಾಗಿದೆ. ಹೀಗಾಗಿ ಹಗಲು ಇರುಳು ಎನ್ನದೆ ಯುವಜನತೆ ಕೆಲಸಕ್ಕೆಂದು ದಾಪುಗಾಲಿಡುತ್ತಿರುವರು. ಇತ್ತೀಚಿನ ದಿನಗಳಲ್ಲಿ ಕೊಳ್ಳುಬಾಕ ಸಂಸ್ಕೃತಿಯ ದಾಸರಾಗಿ, ವಿದೇಶಿ ಕಂಪನಿಗಳ ಹಣದಾಕರ್ಷಣೆಗೆ ಲಕ್ಷಾನುಲಕ್ಷ ನಮ್ಮ ಯುವಕ ಯುವತಿಯರು ಕೆಲಸಕ್ಕೆ ಸೇರುತ್ತಿದ್ದಾರೆ. ಹಣವೊಂದು ಬಿಟ್ಟರೆ ಮತ್ತಾವ ಸಾಮಾಜಿಕ ಬದ್ಧತೆ ಇವರಿಗಿಲ್ಲ. ''ಹಣವಿದ್ದರೆ ಹೆಣವು ಬಾಯಿ ತೆರೆಯಿತಂತೆ'' ಎಂಬಂತೆ 'ಹಣವೇ ಕೇಂದ್ರ ಬಿಂದು'. ಬಲವಾದ ಆಸೆಯಿಂದಲೇ ಮಹಿಳೆಯರು 'ರಾತ್ರಿ ಪಾಳಿ ಮಸೂದೆ' ಅಂಗೀಕಾರ ಆದಂದಿನಿಂದಲೇ ಮಧ್ಯರಾತ್ರಿಯಿಂದ ಹಿಡಿದು ಮುಂಜಾನೆಯವರೆಗೂ ಕೆಲಸಕ್ಕೆ ಹೋಗುತ್ತಲಿದ್ದಾರೆ.

ಇಂದಿನ ಹದಗೆಟ್ಟಿರುವ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಹಿಳೆಯರದೇ ಆದ ಕೆಲವು ಸೂಕ್ಷ್ಮ ಸಮಸ್ಯೆಗಳಿರುತ್ತವೆ. ಪ್ರಮುಖವಾಗಿ ಅವರಿಗೆ ರಕ್ಷಣೆ ಅತ್ಯಂತ ಅವಶ್ಯಕ. ಯಾಕೆಂದರೆ, ಸಮಾಜದಲ್ಲಿ ಅಶ್ಲೀಲತೆ ತುಂಬಿಹೋಗಿದೆ. ನಮ್ಮ ಹೆಣ್ಣುಮಕ್ಕಳು ಸ್ವತಂತ್ರರಾಗಿ ಒಬ್ಬರೇ ಓಡಾಡುವಂತಿಲ್ಲ. ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಿದಂತೆ ಹೆಣ್ಣುಮಕ್ಕಳು ಒಂಟಿಯಾಗಿ ಇದ್ದರಂತೂ ಪುಂಡರು ರಣಹದ್ದಿನಂತೆ ವರ್ತಿಸುತ್ತಿರುವರು. ಅತ್ಯಾಚಾರ ಮಾಡುವರು, ಹಗರಣ ಮುಚ್ಚಿಹಾಕಲು ಹಿಂಸಿಸಿ ಕೊಲೆಮಾಡುವರು. ಇಲ್ಲವಾದರೆ, ಅತ್ಯಾಚಾರಕ್ಕೊಳಪಟ್ಟ ಮಹಿಳೆ ಜೀವನದುದ್ದಕ್ಕೂ ನರಕಯಾತನೆ ಅನುಭವಿಸಬೇಕಾಗುವುದು.

ಇದಕ್ಕೆ ಜ್ವಲಂತ ಸಾಕ್ಷಿ ಮೊನ್ನೆ ನಡೆದ ಕಾಲ್ ಸೆಂಟರಿನ ಪ್ರತಿಭಾಳ ಮೇಲಿನ ಅತ್ಯಾಚಾರ ಮತ್ತು ಭೀಕರ ಕೊಲೆ. ಇನ್ನೂ ಎಷ್ಟೋ ಘಟನೆಗಳು ಬೆಳಕಿಗೂ ಬಾರದೆ ಮುಚ್ಚಿಹೋಗಿವೆ. ಈ ಘಟನೆ ಸಂಭವಿಸಿದ ಮರುದಿನವೇ ಕೌಲಾಲಂಪೂರ್ ರೈಲ್ವೆ ಡಬ್ಬಿಯಲ್ಲಿ ಗಂಡನೆದುರಲ್ಲೇ ಡಕಾಯಿತರಿಂದ ಅತ್ಯಾಚಾರ, ಮೈಸೂರಿನಲ್ಲಿ ಪೊಲೀಸ್ ಕಾರ್ ಡ್ರೈವರ್‌ನಿಂದ ಮತ್ತು ಪೊಲೀಸಿನಿಂದ ಹಿಂಸೆ ಮತ್ತು ಅತ್ಯಾಚಾರ, ಹಾಗೂ ಅಪ್ರಾಪ್ತ ಬಾಲಕಿಯರ ಮೇಲಿನ ಅತ್ಯಾಚಾರಗಳಂತೂ ದಿನಾಲೂ ಲೆಕ್ಕವಿಲ್ಲದಷ್ಟು ನಡೆಯುತ್ತಲೇ ಇವೆ. ಇತ್ತೀಚಿನ ವರದಿಗಳ ಪ್ರಕಾರ ಪ್ರತಿ ೫೬ ನಿಮಿಷಕ್ಕೆ ಒಂದು ಅತ್ಯಾಚಾರದ ಘಟನೆ ನಡೆಯುತ್ತಿದೆ. ಅಬ್ಬಾ ! ನಾವು ನಿಜಕ್ಕೂ ನಾಗರಿಕ ಸಮಾಜದಲ್ಲಿ ಜೀವಿಸುತ್ತಿದ್ದೇವೆಯೇ ?

'ಬೇಲಿಯೇ ಎದ್ದು ಹೊಲ ಮೇಯ್ದಂತೆ' ನಮ್ಮ ದೇಶದ ಕಾನೂನು ರಕ್ಷಕರಾದ ರಾಜಕಾರಣಿಗಳು, ಸೈನಿಕರು, ಪೊಲೀಸರಿಂದಲೇ ಮಹಿಳೆಯರ ಮೇಲೆ ಅತ್ಯಾಚಾರಗಳು ಜರುಗುತ್ತಿವೆ. ಕೆಲವು ಘಟನೆಗಳಂತೂ ಪ್ರತಿಷ್ಠಿತ ಧಾರ್ಮಿಕ ಕ್ಷೇತ್ರಗಳಲ್ಲಿ, ವಿದ್ಯಾಸಂಸ್ಥೆಗಳಲ್ಲಿ ಜರುಗುತ್ತಲಿವೆ. ಎಲ್ಲವನ್ನೂ ಬರೆಯುತ್ತಾ ಹೋದರೆ ಎದೆ ಝುಲ್ಲೆನ್ನುತ್ತದೆ !

ನಮ್ಮ ದೇಶ ವಿಶ್ವದಲ್ಲಿಯೇ ಬಹುದೊಡ್ಡ ದೇಶವೆಂದು ಹೆಮ್ಮೆಯಿಂದ ಹೇಳಿಕೊಳುತ್ತೇವೆ. ನಮ್ಮ ಸಂವಿಧಾನವು ವಿಶ್ವಕ್ಕೆ ಮಾದರಿಯಾಗಿದೆ; ಮಹಿಳೆಗೆ ಭಾರತದಲ್ಲಿರುವಷ್ಟು ಸ್ವಾತಂತ್ರ್ಯ, ಸಮಾನಹಕ್ಕು, ಸಮಾನಗೌರವ ಇನ್ಯಾವುದೇ ದೇಶದಲ್ಲಿ ಇಲ್ಲ. ಇಲ್ಲಿ ಮಹಿಳೆಯರನ್ನು ಲಕ್ಷ್ಮೀ, ಸರಸ್ವತಿ, ಜಗನ್ಮಾತೆ ಎಂದೆಲ್ಲಾ




■ ಲಲಿತಾ ಬಿಜ್ಜರಗಿ

ಹೊಗಳಿ ಹೊಗಳಿ ಪೂಜಿಸುತ್ತಿರುವರು. ಆದರೆ...ಅದೇ ಮಹಿಳೆಯರ ಮೇಲೆ ದೌರ್ಜನ್ಯ, ಚಿತ್ರಹಿಂಸೆಗಳು, ಅತ್ಯಾಚಾರಗಳು ನಡೆದರೂ ಮೂಕಪ್ರೇಕ್ಷಕರಂತೆ, ಅಸಹಾಯಕತನದಿಂದ ನಿರ್ಲಿಪ್ತತೆಯಿಂದ ಗರಬಡಿದವರಂತೆ ವರ್ತಿಸುತ್ತೇವೆ. ಪ್ರತಿಭಟಿಸುವ ಧ್ವನಿ ಎಲ್ಲೂ ಕೇಳಿಬರುತ್ತಿಲ್ಲ. ಬದಲಾಗಿ ನಮ್ಮಷ್ಟಕ್ಕೆ ನಾವೇ ವೇದನೆ ಪಟ್ಟುಕೊಳ್ಳುತ್ತಿರುವೆವು. ಇದಕ್ಕೆ ಉದಾಹರಣೆ, ಕಾಲ್ ಸೆಂಟರಿನ ಘಟನೆ ಬಗ್ಗೆ ಇಡೀ ದೇಶವೇ ದಿಗ್ಭ್ರಮೆ ವ್ಯಕ್ತಪಡಿಸಿತು. ಕೆಲವೇ ಮಹಿಳಾ ಹೋರಾಟದ ಧ್ವನಿಗಳು ಕೇಳಿಸಿತು. ಖ್ಯಾತಿವೆತ್ತ ಮಹಿಳಾ ಬರಹಗಾರರು, ವಕೀಲರು, ಮಹಿಳಾ ಸಂಘಟನಾಕಾರರು ಎಲ್ಲಿದ್ದರು ?

ಹೆಣ್ಣು ಎಷ್ಟೇ ವಿದ್ಯಾವಂತಳಾಗಿರಲಿ, ಪ್ರತಿಷ್ಠಿತ ಹುದ್ದೆ ಸ್ವೀಕರಿಸಲಿ ಅಸಮಾನತೆಯಂತೂ ಎಲ್ಲ ಕಡೆಗೂ ತುಂಬಿಹೋಗಿದೆ. ನಮಗಿಂದು ಸ್ವಾತಂತ್ರ್ಯದ ಹೆಸರಲ್ಲಿ ಸ್ವೇಚ್ಛಾಚಾರ ಬೇಕಾಗಿಲ್ಲ; ಸಮಾನಾರ್ಥದಲ್ಲಿ ಗೌರವ, ಸ್ವಾತಂತ್ರ್ಯತೆ ಬೇಕಾಗಿದೆ. ವಿಷಾದದ ಸಂಗತಿಯೆಂದರೆ, ನಮ್ಮ ಹೆಣ್ಣುಮಕ್ಕಳು ವಿದೇಶಿ ಕಂಪನಿಗಳ ಮಾರಾಟದ ಸರಕುಗಳಾಗಿರುವರು. ಸಿನಿಮಾ, ಟಿ.ವಿ. ಧಾರಾವಾಹಿಗಳಲ್ಲಿ ಜಾಹೀರಾತುಗಳಲ್ಲಿ, ಮೊಬೈಲ್, ಇಂಟರ್‌ನೆಟ್‌ನಲ್ಲಿ ಎಲ್ಲೆಂದರಲ್ಲಿ ಅರೆಬೆತ್ತಲೆ ಚಿತ್ರಗಳು. ಅವರು ನೃತ್ಯರೂಪದಲ್ಲಾಗಲೀ, ಪ್ರದರ್ಶನದ ರೂಪದಲ್ಲಾಗಲೀ ಅಥವಾ ನಟನೆ ರೂಪದಲ್ಲಾಗಲೀ, ನಾಯಕಿಯ ರೂಪದಲ್ಲೂ ಅಶ್ಲೀಲತೆಯೇ ಮೂರ್ತಿವೆತ್ತಂತಿದೆ.




ಇನ್ನೊಂದೆಡೆ ಬಾರ್, ಹೋಟೆಲ್‌ಗಳಲ್ಲಿ, ಪಬ್‌ಗಳಲ್ಲಿ, ಲೈವ್‌ಬ್ಯಾಂಡ್‌ಗಳಲ್ಲಿ, ಅಫೀಮು ಮಾದಕದ್ರವ್ಯ ಕೇಂದ್ರಗಳಲ್ಲಿಯೂ ಮಹಿಳೆಯರ ಅಶ್ಲೀಲ ಕುಣಿತ, ನರ್ತನೆಯಿರುತ್ತದೆ. ಈ ಮೂಲಕ ಬಂಡವಾಳಿಗರು ಇಂದು ಲೆಕ್ಕವಿಲ್ಲದಷ್ಟು ಹಣವನ್ನು ಗಳಿಸುತ್ತಿರುವುದು. ಇದರಿಂದ ನಮ್ಮ ಯುವಕ-ಯುವತಿಯರು ಕುಸಂಸ್ಕೃತಿಗೆ ತಳ್ಳಲ್ಪಡುತ್ತಿದ್ದಾರೆ. ಸೂಕ್ಷ್ಮ ಮನಸ್ಸುಗಳಲ್ಲಿ ಪಾಶವೀಪ್ರವೃತ್ತಿ ಬೆಳೆಯುತ್ತಿದೆ. ಸಂವೇದನೆ ನಾಶವಾಗುತ್ತಿದೆ. ಇದರಿಂದ ಕ್ರೂರ ಮೃಗೀಯ ಪೈಶಾಚಿಕ ವೃತ್ತಿಗಳು ಮತ್ತು ಪ್ರವೃತ್ತಿಗಳು ಹೆಚ್ಚಾಗುತ್ತಿವೆ. ಇದರಿಂದ ಕುಟುಂಬದಲ್ಲಿ, ಸಮಾಜದಲ್ಲಿ ನೆಮ್ಮದಿ ಇರುವುದಿಲ್ಲ. ಸಂಸಾರದಲ್ಲಿ ಸಾಮರಸ್ಯ ಉಳಿಯುತ್ತಿಲ್ಲ. ಪ್ರೀತಿಯೆಂಬುದು ಕೊಳ್ಳುಬಾಕ ಸಂಸ್ಕೃತಿಗೆ ಶರಣಾಗಿದೆ. ನೈಜ ಸಂಬಂಧಗಳು ಮಾಯವಾಗುತ್ತಿವೆ. ಒಂದು ಕಡೆ ಪ್ರಕೃತಿಯು ಕಲುಷಿತಗೊಂಡಂತೆ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಆರ್ಥಿಕವಾಗಿ ನಾವೂ ಕಲುಷಿತಗೊಳ್ಳುತ್ತಿದ್ದೇವೆ. ಇಂತಹ ಆತಂಕಕಾರಿ ಬದುಕಿಗೆ ಅಭದ್ರತೆ ತಂದೊಡ್ಡುವ ಮತ್ತು ನೈತಿಕ ಮೌಲ್ಯಗಳನ್ನೇ ನಾಶಮಾಡುವ ವ್ಯವಸ್ಥೆ ನಮಗೇಕೆ ಬೇಕು ?

ಈ ಹಿಂದೆ ಬ್ರಿಟಿಷರು ನಮ್ಮ ದೇಶವನ್ನು ಕಬಳಿಸಿಕೊಂಡಿದ್ದರು. ಆದರೆ... ನಮ್ಮ ಯುವಜನತೆ, ಮಹಿಳೆಯರು, ನೈತಿಕ ಮೌಲ್ಯಗಳನ್ನು ಕಳೆದುಕೊಂಡಿರಲಿಲ್ಲ, ಸುಸಂಸ್ಕೃತರಾಗಿದ್ದರು. ಸದಭಿರುಚಿಯುಳ್ಳವರಾಗಿದ್ದರು. ಕೆಚ್ಚೆದೆಯಿಂದ, ದೇಶಾಭಿಮಾನದಿಂದ ಜಾತಿ, ಮತ, ಧರ್ಮ ಯಾವುದನ್ನೂ ಲೆಕ್ಕಿಸದೇ ಒಗ್ಗಟ್ಟಾಗಿ ಬ್ರಿಟಿಷರ ವಿರುದ್ಧ ಹೋರಾಡಿದರು, ಜೀವತೆತ್ತರು, ದೇಶ ಸ್ವತಂತ್ರಗೊಳಿಸಿದರು, ಧೀಮಂತರಾದರು.

ಅಂತಹ ಧೀರೋದಾತ್ತ ಶಕ್ತಿ ಇನ್ನೂ ನಮ್ಮ ಜನರಲ್ಲಿದೆ. ಆದ್ದರಿಂದಲೇ ಯಾವುದೇ ಅಹಿತಕರ ಘಟನೆ, ಅನ್ಯಾಯ ಸಂಭವಿಸಿದರೆ, ನೈಜ ಜನಪರ ಸಂಘಟನೆಗಳು, ಪ್ರತಿಭಟನೆಗಳು ಇದ್ದೇ ಇವೆ. ಇನ್ನೂ ಹೆಚ್ಚು ಹೆಚ್ಚು ಜನರು, ವಿಶೇಷವಾಗಿ ಯುವಕರು,

ಇಂದಿನ ಹದಗೆಟ್ಟಿರುವ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಹಿಳೆಯರದೇ ಆದ ಕೆಲವು ಸೂಕ್ಷ್ಮ ಸಮಸ್ಯೆಗಳಿರುತ್ತವೆ. ಪ್ರಮುಖವಾಗಿ ಅವರಿಗೆ ರಕ್ಷಣೆ ಅತ್ಯಂತ ಅವಶ್ಯಕ. ಯಾಕೆಂದರೆ, ಸಮಾಜದಲ್ಲಿ ಅಶ್ಲೀಲತೆ ತುಂಬಿಹೋಗಿದೆ. ನಮ್ಮ ಹೆಣ್ಣುಮಕ್ಕಳು ಸ್ವತಂತ್ರರಾಗಿ ಒಬ್ಬರೇ ಓಡಾಡುವಂತಿಲ್ಲ. ಕಾಡಿನಲ್ಲಿ ಪ್ರಾಣಿಗಳನ್ನು ಬೇಟೆಯಾಡಿದಂತೆ ಹೆಣ್ಣುಮಕ್ಕಳು ಒಂಟಿಯಾಗಿ ಇದ್ದರಂತೂ ಪುಂಡರು ರಣಹದ್ದಿನಂತೆ ವರ್ತಿಸುತ್ತಿರುವರು. ಅತ್ಯಾಚಾರ ಮಾಡುವರು, ಹಗರಣ ಮುಚ್ಚಿಹಾಕಲು ಹಿಂಸಿಸಿ ಕೊಲೆಮಾಡುವರು. ಇಲ್ಲವಾದರೆ, ಅತ್ಯಾಚಾರಕ್ಕೊಳಪಟ್ಟ ಮಹಿಳೆ ಜೀವನದುದ್ದಕ್ಕೂ ನರಕಯಾತನೆ ಅನುಭವಿಸಬೇಕಾಗುವುದು.

ಮಹಿಳೆಯರು ಇಂತಹ ಪ್ರತಿಭಟನೆಗಳಲ್ಲಿ ಭಾಗವಹಿಸಬೇಕು, ತಮ್ಮ ಧ್ವನಿಗೂಡಿಸಬೇಕು.

ನಮ್ಮ ಪ್ರಕೃತಿಯಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸಮಾನ ಸ್ಥಾನ ಒದಗಿಸಿ ಕೊಡಲಾಗಿದೆ. ಯಾರು ಯಾರಿಗೂ ಹಿಂಸಿಸುವಂತಿಲ್ಲ, ಅನ್ಯಾಯ ದೌರ್ಜನ್ಯ ಎಸಗುವಂತಿಲ್ಲ! ದೇಶದ ಪ್ರಗತಿಗೆ ಇಬ್ಬರೂ ಪೂರಕವಾಗಿ ದುಡಿಯಬೇಕು.

ಇತ್ತೀಚೆಗೆ ಹೆಣ್ಣು ಸಂತತಿ ಕುಸಿಯುತ್ತಿದೆಯೆಂಬ ವರದಿ ಕೇಳಿದಾಗ ಬೇಜಾರಾಗುತ್ತದೆ, ದಿಗ್ಭ್ರಮೆ ಆಗುತ್ತದೆ. ಕಾರಣವೆಂದರೆ, ಮಹಿಳೆಯರಿಗೆ ಆಗುತ್ತಿರುವ ಅನೇಕ ಅನ್ಯಾಯಗಳಿಗೆ ಇದೇ ಮೂಲ. ಆದ್ದರಿಂದ ತಂದೆ ತಾಯಿಯರು ಮಕ್ಕಳಿಗೆ ಅದು ಹೆಣ್ಣಿರಲಿ ಗಂಡಿರಲಿ ಒಂದು ಕಣ್ಣಿಗೆ ಸುಣ್ಣ ಇನ್ನೊಂದು ಕಣ್ಣಿಗೆ ಬೆಣ್ಣೆ ಅನ್ನುವಂತೆ ಭೇದಭಾವ ಮಾಡಬಾರದು. ಗಂಡು-ಹೆಣ್ಣು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇಬ್ಬರೂ ಇದ್ದರೆ ಸಮಾಜ, ದೇಶ, ಬೆಳೆಯಲು ಸಾಧ್ಯವಿದೆ.

ಈ ಹಿಂದೆಯೂ ತಾವು ಕೆಲಸ ಮಾಡುತ್ತಲಿರುವ ಸ್ಥಳಗಳಲ್ಲಿಯೇ ಮಹಿಳೆಯರ ಮೇಲೆ ಮಾಲೀಕರಿಂದ ದೌರ್ಜನ್ಯ ನಡೆಯುತ್ತಿತ್ತು. ಕೂಲಿಯಲ್ಲಿ ತಾರತಮ್ಯ ಇರುತ್ತಿತ್ತು. ಹೆಣ್ಣುಮಕ್ಕಳಿಗೆ ಶಿಕ್ಷಣವಿರಲಿಲ್ಲ; ಮತ ಚಲಾಯಿಸುವ ಹಕ್ಕಿರಲಿಲ್ಲ; ಅವಧಿ ಮೀರಿ ಯಂತ್ರದಂತೆ ಕೆಲಸ ಮಾಡಬೇಕಾಗಿತ್ತು. ಮನರಂಜನೆ, ವಿಶ್ರಾಂತಿ ಇರಲಿಲ್ಲ; ಇವೆಲ್ಲದರ ಸಲುವಾಗಿ ಪ್ರಮುಖ ಬೇಡಿಕೆಗಳನ್ನು ಮುಂದಿಟ್ಟು ಮಹಿಳಾ ಹೋರಾಟ ಪ್ರಾರಂಭವಾಯ್ತು. ಈ ಹೋರಾಟದಲ್ಲಿ ಅನೇಕ ಮಹಿಳೆಯರು ಪೊಲೀಸರ ಗುಂಡಿಗೆ ಬಲಿಯಾದರು. ಹೋರಾಟದ ಛಲ ಬಿಡಲಿಲ್ಲ, ಅಂಜಲಿಲ್ಲ, ಅಳುಕಲಿಲ್ಲ; 'ಮಡಿದರೂ ಸರಿ ಮಂಡಿಯೂರುವುದು ಬೇಡ' ಎನ್ನುತ್ತಾ ನಿರಂತರ ಹೋರಾಡಿ ಯಶಸ್ವಿಯಾದರು. ಇತಿಹಾಸದ ಪುಟಗಳಲ್ಲಿ ಚಿರಸ್ಮರಣೀಯರಾದರು. ಈ ಮಹಿಳಾ ಹೋರಾಟದ ನಾಯಕತ್ವವನ್ನು ಸಮಾಜವಾದಿ ಬಣದ ನಾಯಕಿ ಕ್ಲಾರಾ ಜೆಟ್ಕಿನ್ ವಹಿಸಿದ್ದರು. ಅವರು ೧೯೧೦ ಮಾರ್ಚ್ ೮ರಂದು ಇಡೀ ವಿಶ್ವಕ್ಕೆ 'ಮಹಿಳಾ ದಿನ'ವನ್ನಾಗಿ ಆಚರಿಸುವಂತೆ ಕರೆಯಿತ್ತರು. ಅಂದಿನ ಆ ಮಹಿಳಾ ಹೋರಾಟದ ಚೇತನ ಬತ್ತಲಿಲ್ಲ. ನಿರಂತರವಾಗಿ ನಡೆದುಕೊಂಡುಬಂದಿದೆ. ಆದ್ದರಿಂದಲೇ ಮಹಿಳೆಯರು ಇಂದು ಎಲ್ಲಾ ಕ್ಷೇತ್ರಗಳಲ್ಲಿ ಬೆಳಕು ಚೆಲ್ಲುತ್ತಿದ್ದಾರೆ. ಆದರೂ ಅವರಿಗೆ ಅನ್ಯಾಯವಾಗುತ್ತಲೇ ಇದೆ. ಇವತ್ತಿನ ಮಹಿಳಾ ಸಮಸ್ಯೆಗಳಿಗೆ, ಅಗೌರವಗಳಿಗೆ, ನಮ್ಮ ಜಾಗತೀಕರಣ ಮತ್ತು ಖಾಸಗೀಕರಣವೇ ಬಲವಾದ ಕಾರಣವಾಗಿವೆ. ಮಹಿಳಾ ಹೋರಾಟದ ಇತಿಹಾಸ ನಮಗಿಂದು ದಾರಿತೋರಿಸುತ್ತಲಿದೆ. ನಮ್ಮ ಸಮಸ್ಯೆಗಳಿಗೆ ಒಗ್ಗಟ್ಟಿನ ಹೋರಾಟವೊಂದೇ ಬ್ರಹ್ಮಾಸ್ತ್ರ

ಲಲಿತಾ ಬಿಜ್ಜರಗಿ
ಸಾಹಿತ್ಯ ಸದನ, ನಂ. ೭೯, ಶ್ರೀ ಸಾಹಿರಾಮನಗರ, ಡಾ|| ನವಣೆ ಲೇಔಟ್
ಹಳೆ ಜೇವರಗಿ ರಸ್ತೆ, ಗುಲಬರ್ಗಾ - ೫೮೫ ೧೦೨



ಟಿಪ್ಪು ಆ ಯುಗಕ್ಕೆ ಎಷ್ಟು ಪುರೋಗಾಮಿತ್ವವನ್ನು ಹೊಂದಿದ್ದ ಎನ್ನುವುದು ಮುಖ್ಯವಾಗುತ್ತದೆಯೇ ಹೊರತು, ಆತ ಈಗಿನ ಹಾಗೆ ಆಧುನಿಕತೆಯ ಪರಿಕಲ್ಪನೆಯನ್ನು ಹೊಂದಿರಲಿಲ್ಲ ಎನ್ನುವುದು ಅರ್ಥಹೀನವಾಗುತ್ತದೆ. ಮಾನವ ಸಮಾಜದಲ್ಲಿ ಒಂದು ಆದರ್ಶವೆನ್ನುವುದು ಥಾಮಸ್ ಮೋರ್‌ನ ಯುಟೋಪಿಯಾದಂತೆಯೇ ಸರಿ. ಪ್ರವೃತ್ತಿಗಳು ಇರುವವರೆಗೆ ಮಾನವ ಈ ಆದರ್ಶವನ್ನು ತಲುಪುವುದು ಕಷ್ಟ; ಇದು ಎಲ್ಲಾ ತಥಾಕಥಿತ ಆದರ್ಶದಾಯಕರ, ಮಹಾತ್ಮರ ಬದುಕಿನಲ್ಲೂ ಇರುವಂತಹ ಸತ್ಯ. ಹಾಗಿರುವಾಗ ಟಿಪ್ಪು, ಶಿವಾಜಿ, ಔರಂಗಜೇಬರಲ್ಲಿ ಇದನ್ನು ಯಾಕೆ ನಿರೀಕ್ಷಿಸಬೇಕು ? ಅವರೆಲ್ಲರೂ ನಮ್ಮ ಹಾಗೆಯೇ ಪ್ರವೃತ್ತಿಗಳಲ್ಲಿ ಮಾನವರೇ. ಹೀಗಾದಾಗ ಒಬ್ಬ ವ್ಯಕ್ತಿಯ ರಚನಾತ್ಮಕ ಕಾರ್ಯಗಳೆಷ್ಟು ಎನ್ನುವುದನ್ನು ಮೆಲುಕುಹಾಕುವುದೇ ಸಮನ್ವಯದ ಸ್ವಸ್ಥ ಸಮಾಜದ ಆರೋಗ್ಯವನ್ನು ಕಾಯ್ದುಕೊಳ್ಳಲು ಇರುವ ಮಾರ್ಗರೂಪೀ ಔಷಧ.

# ಆಧುನಿಕ ಮೈಸೂರಿನ ಪ್ರವರ್ತಕ ಟಿಪ್ಪು ಸುಲ್ತಾನ್

**ಪ್ರದೀಪ ಕುಮಾರ ಕೆಂಚನೂರು**

ಇತಿಹಾಸದಲ್ಲಿನ ಕೆಲವು ವ್ಯಕ್ತಿಗಳು ಅನ್ಯಾನ್ಯ ಕಾರಣಗಳಿಂದ ಭವಿಷ್ಯದಲ್ಲಿ, ವರ್ತಮಾನದಲ್ಲಿ ಸುದ್ದಿಯಾಗುತ್ತಿರುತ್ತಾರೆ. ಅದು ಜೇಮ್ಸ್ ಲೈನ್ ಮತ್ತು ಶಿವಾಜಿ ಪ್ರಸಂಗವಾಗಬಹುದು, ಅಯೋಧ್ಯೆ ಮತ್ತು ಬಾಬರ್ ಆಗಬಹುದು, ಮತ್ತು ಈಚೆಗೆ ಭಾರಿ ಸುದ್ದಿಯಲ್ಲಿರುವ ಟಿಪ್ಪು ಮತ್ತು ಕನ್ನಡ ಪ್ರೇಮವಾಗಬಹುದು. ಇವುಗಳನ್ನು ಕೆಲವೊಮ್ಮೆ ಮೌಲಿಕತೆ, ಪ್ರಾಸ್ತುತ್ಯ ಬಾಧಿಸಿದರೆ, ಕೆಲವೊಮ್ಮೆ ಇವು ಇವೆರಡೂ ಇಲ್ಲದೇನೇ ಹುಟ್ಟಿಕೊಳ್ಳುತ್ತವೆ. ಕ್ರಮೇಣ ಮೂಲಸಂಗತಿ ಅಥವಾ ಘಟನೆಯು ಇರುವುದಕ್ಕಿಂತ ಭಿನ್ನವಾದ ಚಿತ್ರವನ್ನ ಪಡೆಯುತ್ತಾ ಹೋಗುತ್ತದೆ. ಹಲವು ಸಿದ್ಧಾಂತಗಳು, ಮೂಗಿನ ನೇರ ತರ್ಕದ ವಾದಸರಣಿಯ ಬುದ್ಧಿವಂತರು, ತಮಗೆ ಬೇಕಾದ ಹಾಗೆ ಕೂಡ ಈ ಸುದ್ದಿಯನ್ನು ಪುನರ್ ರಚಿಸಿಕೊಳ್ಳುತ್ತಾ, ಇವರ ಸಿದ್ಧಾಂತದ ಪ್ರಚಾರಕ್ಕೆ ಒಂದು ಆಯುಧವನ್ನಾಗಿ ಮಾಡಿಕೊಳ್ಳುವುದೂ ಸತ್ಯವೇ. ಕೆಲವೊಮ್ಮೆ ಒಂದೇ ವಿಷಯವನ್ನು ವಿರುದ್ಧ ದೃಷ್ಟಿಕೋನಗಳ ಗುಂಪುಗಳು ಆಚೆ ಈಚೆಯಿಂದ ಎಳೆದು ಹರಿದುಹಾಕುವ ತನಕ ಹೋಗುವುದನ್ನೂ ನಾವು ನೋಡುತ್ತೇವೆ. ಹೀಗೆ ಐತಿಹಾಸಿಕ ವಸ್ತುಗಳು ವಿಷಯವಾದರೆ ಐತಿಹಾಸಿಕತೆಯೇ ಮಾಯವಾಗೋದೂ ಉಂಟು. ಟಿಪ್ಪು ವಿಷಯದಲ್ಲಿ ಕೂಡ ಹೀಗೆಯೇ. ಇತಿಹಾಸವನ್ನು ನಿರ್ಧರಿಸುವವರು ಇಲ್ಲಿ ಕೂಡ ಇತಿಹಾಸ ಗೊತ್ತಿರದ ಅರೆಬರೆ ಪಂಡಿತರು, ಎಲ್ಲಾ ಕಡೆ ನಾವು ಇದ್ದೇವೆ, ಎಂದು ಸಾರುವ ತಥಾಕಥಿತರು ಅಷ್ಟೇ. ಎಲ್ಲಿಯೂ ಟಿಪ್ಪುವಿನ ಕನ್ನಡ ಪ್ರೇಮ ಅಥವಾ ದ್ವೇಷದ ಬಗೆಗೆ ವಸ್ತುನಿಷ್ಠವಾದ, ಆಧಾರಜನ್ಯ ಇತಿಹಾಸದ ನಿಲುಮೆ ಉಂಟಾಗಿಲ್ಲ. ಪ್ರಸಕ್ತ, ಟಿಪ್ಪು ಸುತ್ತ ಎದ್ದಿರುವುದು ಹೆಚ್ಚು ಪೂರ್ವಗ್ರಹಪೀಡಿತ, ಪಟ್ಟಭದ್ರಹಿತಾಸಕ್ತಿ ಪ್ರೇರಿತ ನಿರ್ಣಯಗಳು. ತಥಾಕಥಿತ ಚಿಂತಕರೂ ಕೂಡ ಐತಿಹಾಸಿಕ ನೆಲೆಯನ್ನು ಕಾಣಿಸದೆ ವೈಯಕ್ತಿಕ ವಿಷ ಕಾರುವಿಕೆಯನ್ನಷ್ಟೇ ತಮ್ಮ ಧ್ಯೇಯವನ್ನಾಗಿಸಿಕೊಂಡಹಾಗಿದೆ.

ಟಿಪ್ಪುವಿನ ಕನ್ನಡಪ್ರೇಮ, ದ್ವೇಷ ಕುರಿತ ಚರ್ಚೆಯೇ ನಗಣ್ಯವೆನಿಸುವಮಟ್ಟಿಗೆ ಬಂದಿದೆ. ಈ ರೀತಿಯ ಚರ್ಚೆಗಳು ಬಂದಾಗ ಕನ್ನಡ ಪ್ರೇಮ, ರಾಷ್ಟ್ರ, ರಾಷ್ಟ್ರೀಯತೆ ಎಲ್ಲವನ್ನೂ ಹೊಸದಾಗಿ ನಿರ್ವಚಿಸುವ ಅಗತ್ಯವಿದೆಯೆಂದೇ ನಾನು ತಿಳಿಯುತ್ತೇನೆ. ಕನ್ನಡ ವೈಭವದ ಸೂತ್ರಕ್ಕೆ ಸಿಲುಕುವ ವಿಜಯನಗರದ ಕೃಷ್ಣದೇವರಾಯ ಒಂದು ಕೃತಿಯನ್ನೂ ಕನ್ನಡದಲ್ಲಿ ಬರೆಯದೆ, ತೆಲುಗಿನವರನ್ನೇ ಹೆಚ್ಚಿಗೆ ಅಷ್ಟದಿಗ್ಗಜರುಗಳಲ್ಲಿರಿಸಿದ. ಅಶೋಕನ ಶಾಸನಗಳು ಕರ್ನಾಟಕದಲ್ಲಿ ಕನ್ನಡ ಭಾಷೆಯಲ್ಲಿ ಬರೆಯಲ್ಪಡಲಿಲ್ಲ. ಹೀಗೆ ಹಲವು ದ್ವಂದ್ವ, ಪ್ರಶ್ನೆಗಳು ಎದುರಾಗುತ್ತಾ ವಿವಾದದ ಕೇಂದ್ರವಾಗಿರುವ ಕೆಲವು ಅಂಶಗಳು ಹೊಸ ನಿರ್ವಚನಕ್ಕಾಗಿ ಕಾಯುತ್ತವೆ.

ಕೃಷ್ಣದೇವರಾಯನಾಗಲಿ, ಅಶೋಕನಾಗಲಿ, ಕನ್ನಡ ವಿರೋಧಿಗಳೆಂದರೆ ಹೇಗೆ ? ಒಟ್ಟಿನಲ್ಲಿ ಇಬ್ಬರೂ ಯುಗಧರ್ಮದ ಗೆರೆಯಲ್ಲಿದ್ದರಷ್ಟೇ. ಟಿಪ್ಪು ಕನ್ನಡ ಪ್ರೇಮಿ, ದ್ವೇಷಿ ಅನ್ನೋದಕ್ಕಿಂತ ಟಿಪ್ಪು ಆಧುನಿಕ ಮೈಸೂರಿನ ಪ್ರವರ್ತಕ ಎಂಬ ವಿಷಯ ಬಹುಮುಖ್ಯವಾಗಿ ಕಾಣಿಸುತ್ತದೆ. ಟಿಪ್ಪು ನಂತರದ, ''ಆದರ್ಶರಾಜ್ಯ ಮೈಸೂರಿನ'' ಆಧುನಿಕತೆಯ ಅಡಿಶಿಲೆಯನ್ನು ಟಿಪ್ಪು ಹಾಕಿದ್ದ. ಅದರ ಆಧಾರದ ಮೇಲೆ ಮೈಸೂರು ಹುಲುಸಾಗಿ ಬೆಳೆಯಿತು. ಟಿಪ್ಪುವಿಗೆ ವಿಶ್ವೇಶ್ವರಯ್ಯನವರಿಗಿಂತ ಕಡಿಮೆ ಕನಸುಗಳಿರಲಿಲ್ಲ. ಆ ಕಾಲಕ್ಕೆ ಟಿಪ್ಪುವಿನ ಆಧುನಿಕತೆ ಸಂಬಂಧಿ ಕನಸುಗಳು ಅಂದಿನ ಯುಗಕ್ಕಿಂತ ಮುಂದಿದ್ದು ಶಕ್ತಿಯುತವಾಗಿದ್ದುವು.

ಸುಮಾರು ಮೂರು ವರ್ಷದ ಹಿಂದೆ ಕನ್ನಂಬಾಡಿ ಕಟ್ಟೆ ಬತ್ತಿದಾಗ ಒಂದು ಶಾಸನ ಸಿಕ್ಕಿತ್ತು. ಅದರ ಪಕ್ಕದಲ್ಲಿಯೇ ವಿಶ್ವೇಶ್ವರಯ್ಯನವರು ಕನ್ನಂಬಾಡಿಗೆ ಹಾಕಿದ್ದ ಶಂಕುಶಿಲೆಯೂ ಗೋಚರವಾಗಿತ್ತು. ಶಾಸನ ಟಿಪ್ಪುವಿನದು; ವಿಷಯ : ಅದೇ ಜಾಗದಲ್ಲಿ ಅಣೆಕಟ್ಟು ನಿರ್ಮಿಸುವ ಬಗ್ಗೆ! ಸಾಮ್ರಾಜ್ಯಶಾಹಿ ವಿರುದ್ಧ ಹೋರಾಡುವ ಸರಿಸಮಯದಲ್ಲೇ ಈ ರೀತಿ ಆಧುನಿಕತೆಯನ್ನು ಚಿಂತಿಸಿದ್ದ. ನಿಜಕ್ಕೂ ಟಿಪ್ಪು ಒಬ್ಬ ಆಧುನಿಕ ಮತ್ತು ಆಧುನಿಕ ಮೈಸೂರಿನ ಪ್ರವರ್ತಕ.

ಟಿಪ್ಪು ಮತ್ತು ಆತನ ಆಧುನಿಕ ಪ್ರವರ್ತನೆಯ ಔತ್ಸುಕತೆಯ ಆಯಾಮವನ್ನು ನಾವು ನಾಲ್ಕು ಅಂಶಗಳಿಂದ ತಿಳಿಯಬಹುದು: ಫ್ರೆಂಚರ ದಾಖಲೆಗಳಿಂದ, ಟಿಪ್ಪುನ ಉದ್ಯಮ ಸಂಸ್ಥೆಗಳು ಮತ್ತು ಅವುಗಳ ಮೇಲಿನ ನಿಯಮ ನಿಬಂಧನೆಗಳ ಬಗೆಗಿನ ಆಜ್ಞೆಗಳಿಂದ, ಟಿಪ್ಪುವಿನ ಕೃಷಿ ಮತ್ತು ತೆರಿಗೆ ನೀತಿಯಿಂದ ಮತ್ತು ಈತನ ಸಮಕಾಲೀನ ಬ್ರಿಟಿಷ್ ಪ್ರವಾಸಿ ಫ್ರಾನ್ಸಿಸ್ ಬುಕಾನನ್‌ನಿಂದ.

ಫ್ರೆಂಚ್ ದಾಖಲೆಗಳು ಟಿಪ್ಪುವನ್ನು ಆಧುನಿಕತೆಯ ಪ್ರವರ್ತಕ ಎಂಬುದನ್ನು ಸಾಬೀತುಪಡಿಸುತ್ತವೆ. ಪ್ಯಾರಿಸ್‌ನ ಆರ್ಕಿವ್ಸ್ ನ್ಯಾಷನಲ್‌ನಲ್ಲಿ ಇರುವ ಹೂ ಚಿತ್ತಾರ ಮತ್ತು ಚಿನ್ನದ ನೂಲಿನಿಂದಾವೃತಗೊಂಡ ಸಿಲ್ಕ್ ಬಟ್ಟೆಯ ಕಡತಗಳು ಪರ್ಶಿಯನ್ ಮತ್ತು ಸೀಮಿತ ಸಂಖ್ಯೆಯಲ್ಲಿ ತೆಲುಗು ಭಾಷೆಯಲ್ಲೂ ಇವೆ. ಈಗಲೂ ಕೂಡ ಸುಸ್ಥಿತಿಯಲ್ಲಿರುವ ಇವು ಕಲಾತ್ಮಕತೆಯೊಂದಿಗೆ, ಟಿಪ್ಪುವಿನ ಇತಿಹಾಸ ಪುನರ್‌ರಚನೆಯ ಮೌಲಿಕತೆಯನ್ನೂ ಹೊಂದಿವೆ. ಇವು ಟಿಪ್ಪುವಿನ ಹುಕುಮ್‌ಗಳಾಗಿದ್ದು ಪತ್ರದ ಸ್ವರೂಪವನ್ನು ಹೊಂದಿವೆ. ಉದ್ಯಮ, ವ್ಯಾಪಾರ, ರಾಯಭಾರ, ಹಡಗು ನಿರ್ಮಾಣ, ಫ್ರೆಂಚ್ ತಂತ್ರಜ್ಞತೆ ಆಗ್ರಹವೆಲ್ಲವನ್ನು ಇಲ್ಲಿ ನೋಡಬಹುದು.

೧೬ನೇ ಲೂಯಿಯ ಆಸ್ಥಾನಕ್ಕೆ ತನ್ನ ಮೂರು ರಾಯಭಾರಿಗಳನ್ನು, ಪಿಯರ್ ಸೆಸರ್ ಮತ್ತು ಹಾಲ್ ಎನ್ನುವ ಇಬ್ಬರು ಉದ್ಯಮಿಗಳನ್ನು ಟಿಪ್ಪು ಉದ್ಯಮ ಪ್ರವರ್ಧನೆಗಾಗಿ ಕಳಿಸಿದ್ದ. ಇನ್ನೊಂದು ಕಡತವು ಟಿಪ್ಪುವಿನ ಶಿಕ್ಷಣದ ದೃಷ್ಟಿಯನ್ನು, ವಿಶೇಷವಾಗಿ ಯೂರೋಪಿನ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯನ್ನು ಅದರ ಬಗೆಗಿದ್ದ ಟಿಪ್ಪು ಒಲವನ್ನೂ ನಮಗೆ ತಿಳಿಸುತ್ತದೆ. ಇದು ತಿಳಿಸುವ ಹಾಗೆ ತನ್ನ ಒಬ್ಬ ಮಗನನ್ನು ಮಾಧ್ಯಮಿಕ ಶಿಕ್ಷಣಕ್ಕೋಸ್ಕರ ಟಿಪ್ಪು, ಫ್ರಾನ್ಸ್‌ಗೆ ಕಳಿಸುವ ಸನ್ನಾಹ ಮಾಡಿದ್ದ

೧೮ನೇ ಶತಕದ ಉತ್ತರಾರ್ಧ ಫ್ರಾನ್ಸ್ ಆರ್ಥಿಕ ದಿವಾಳಿತನವನ್ನು ಹೊಂದಿದ್ದ ಸಮಯದಲ್ಲಿ, ಆಗಿನ ದೊರೆ ೧೬ನೇ ಲೂಯಿಗೆ, ೧೯ ಲಕ್ಷ ರೂಪಾಯಿ ನೀಡಿದ್ದ. ಇದಕ್ಕಾಗಿಯೇ ಟಿಪ್ಪು ತನ್ನ ರಾಯಭಾರ ನಿಯೋಗವನ್ನು ಫ್ರಾನ್ಸಿಗೆ ಕಳುಹಿಸಿದ್ದು ಮತ್ತು ಪ್ರತಿಯಾಗಿ ಫ್ರಾನ್ಸಿನ ತಂತ್ರಜ್ಞತೆ ಮತ್ತು ಆಧುನಿಕ ವಸ್ತುಗಳನ್ನು ಇಚ್ಛಿಸಿದ್ದು.

ಫ್ರಾನ್ಸ್ ಸರ್ಕಾರ ಟಿಪ್ಪುವಿನ ಶಕ್ತಿಯನ್ನು ನಿಚ್ಚಳವಾಗಿ ಗುರುತಿಸಿತ್ತು. ಆದ್ದರಿಂದಲೇ ಟಿಪ್ಪುವಿನ ಇನ್ನೊಂದು ರಾಯಭಾರ ನಿಯೋಗದ ಹಡಗು ೪೦೦ ಜನರನ್ನು ಹೊತ್ತು ಫ್ರಾನ್ಸ್ ದಡವನ್ನು ಮುಟ್ಟಿದರೆ ಆಗುವ ಪರಿಣಾಮವನ್ನು ನೆನೆದು ೪೦೦ ಜನರ ಸಂಖ್ಯೆಯನ್ನು ಕಡಿಮೆ ಮಾಡುವಂತೆಯೂ ಕೇಳಿತು. ಆಗಿನ ಫ್ರಾನ್ಸಿನಲ್ಲಿ ಅಧಿಕಾರಿಯಾಗಿದ್ದ ಪಿಯರ್ ಮೊನ್ನೆರೋನ್, ''ಅವನ ಹಡಗು ಯೂರೋಪಿನ ಬಂದರನ್ನು ತಲುಪಿದ ಮೊದಲ ಇಂಡಿಯಾದ ಹಡಗಾಗಿರುತ್ತದೆ; ಆದ್ದರಿಂದ ಅದು ಯೂರೋಪಿನ ಮೇಲೆ ಅಗಾಧ ಪ್ರಭಾವ ಬೀರುತ್ತದೆ'' ಎಂದು ನುಡಿದಿದ್ದ. ಇದಲ್ಲದೆ ಫ್ರಾನ್ಸ್ ಮತ್ತು ಬ್ರಿಟನ್ ನಡುವಿನ ಪ್ಯಾರಿಸ್ ಒಪ್ಪಂದ ಕೂಡ ಬಿದ್ದುಹೋಗುವ ಭಯವನ್ನು ಹೊಂದಿತ್ತು. ಹೀಗೆ ಮೊದಲ ಬಾರಿಗೆ ಟಿಪ್ಪು ಆಧುನಿಕತೆಯ ಪ್ರವರ್ತಕನಾದ, ಕೊನೆಗೂ ೭೦ ಜನರುಳ್ಳ 'ಮೊರೋರ್' ಹಡಗನ್ನು ಕಳುಹಿಸುವ ಮೂಲಕ. ಟಿಪ್ಪುಗಿಂತ ಮೊದಲು ಯಾವ ಭಾರತೀಯ ಭೂಭಾಗದ ದೊರೆಯೂ ಈ ರೀತಿಯ ಯತ್ನವನ್ನು ಮಾಡಿರಲಿಲ್ಲ. ಟಿಪ್ಪು ಫ್ರಾನ್ಸ್‌ನಿಂದ ಕುಶಲಕರ್ಮಿಗಳನ್ನು, ಇಂಜಿನಿಯರ್‌ರನ್ನು, ವಿಶೇಷ ಗಿಡಗಳನ್ನು, ಉಪಕರಣಗಳನ್ನು, ಬ್ಯಾರೋಮೀಟರ್, ಥರ್ಮಾಮೀಟರ್, ಕನ್ನಡಕಗಳು, ಗಡಿಯಾರಗಳು, ಪ್ರಿಂಟಿಂಗ್ ಯಂತ್ರ, ಮತ್ತು ಸೈಪ್ರಸ್ ಮರಗಳನ್ನೂ ತರಿಸಿದ್ದ. ಗಡಿಯಾರಗಳನ್ನು ತರಿಸಿದ ನಂತರ ಅದಕ್ಕೆ ಚಿನ್ನದ ಪಟ್ಟಿಯನ್ನೂ ತಯಾರಿಸಿ ಧರಿಸಿದ್ದ.

ಫ್ರೆಂಚ್ ದಾಖಲೆಗಳು ಟಿಪ್ಪು ಒಬ್ಬ ಒಳ್ಳೆಯ ಹಡಗು ನಿರ್ಮಾಣೋದ್ಯಮವನ್ನು ಹೊಂದಿದ್ದನೆನ್ನುವುದನ್ನೂ ಶ್ರುತ ಪಡಿಸುತ್ತವೆ. ಟಿಪ್ಪು ಹಡಗು ನಿರ್ಮಾಣದಲ್ಲಿ ಫ್ರೆಂಚ್ ತಂತ್ರಜ್ಞತೆ ಸೇರಿಸಿ ಮೈಸೂರು ಮಾದರಿಯನ್ನು ಸೃಷ್ಟಿಸಿದ. ಈ ರೀತಿಯ ಹಡಗು ಉದ್ಯಮವು ಕ್ಯಾಲಿಕಟ್‌ನ ಮಲ್ಲೈಕ್ಕಾರರ 'ಪರೋಯ್' ಮತ್ತು ಕಣ್ಣಾನೂರ್‌ನ 'ಮಮ್ಮಲೀಸ್'ಗಿಂತ ಅನನ್ಯವಾಗಿತ್ತು. ಟಿಪ್ಪು ಫ್ರಾನ್ಸ್‌ನಿಂದ ಬೆನಾರ್ಡ್ ಎನ್ನುವ ಸರ್ಜನ್‌ನನ್ನು ಕರೆಸಿದ್ದ. ಆದರೆ ಆತನಿಗಿಂತ ಚೆನ್ನಾಗಿರುವ ಸರ್ಜನ್‌ಗಳು ಆ ಹೊತ್ತಿಗಾಗಲೇ ಇದ್ದಾರೆಂದು ತಿಳಿದ ನಂತರ ಈತನನ್ನು ವಜಾಮಾಡಿದ್ದ!

ಫ್ರೆಂಚ್ ದಾಖಲೆಗಳಿಂದ ಟಿಪ್ಪುವಿನ ನಾಣ್ಯವ್ಯವಸ್ಥೆಯಲ್ಲಿದ್ದ ಆಧುನಿಕತೆಯನ್ನು ಅರಿಯ ಬಹುದಾಗಿದೆ. ಟಿಪ್ಪು ತನಗೆ ಮಗನು ಹುಟ್ಟಿದಾಗ ಆಗಿನ ಫ್ರೆಂಚ್ ಕಾಲನಿ ಪಾಂಡಿಚೇರಿಯ ಗವರ್ನರ್, ಕಾಸಿಗ್ನಿಗೆ ಪತ್ರಸಹಿತ ೧೭೮೯ರ ಸೆಪ್ಟೆಂಬರ್ ೨೧ರಂದು ಎರಡು ಚಿನ್ನದ ರೂಪಾಯಿ, ೫ ಪಗೋಡಾ, ೨ ಚಿನ್ನದ ಪನಾಮಾ, ೫ ಅರ್ಧ ರೂಪಾಯಿ, ೫ ಕಾಲು ರೂಪಾಯಿ ಮತ್ತು ಐದು ೧/೮ ರೂಪಾಯಿಗಳನ್ನು ಉಡುಗೊರೆಯಾಗಿ ನೀಡಿದ್ದ. ಈತನ ೧ ರೂಪಾಯಿ ಆಗಿನ ಫ್ರಾನ್ಸ್‌ನ ೨೦೫ ಲೀವ್ರ್‌ಗೆ ಸಾಟಿಯಾಗಿತ್ತು. ಹೀಗೆ ನಾಣ್ಯಗಳ ವೈವಿಧ್ಯತೆ ಮತ್ತು ಆಕರ್ಷಕ ವಿನ್ಯಾಸದಿಂದ ಇಡೀ ಫ್ರೆಂಚ್ ಸಮುದಾಯ ಚಕಿತಗೊಂಡಿತ್ತು.

ಶಸ್ತ್ರ ತಯಾರಿಕೆಯಲ್ಲಿನ ಟಿಪ್ಪು ನಿಪುಣತೆಯನ್ನು ಸಹ ಫ್ರೆಂಚ್ ದಾಖಲೆಗಳು ನಮಗೆ ತಿಳಿಸುತ್ತವೆ. ಟಿಪ್ಪು ಬೆಂಗಳೂರು ನಗರ ಮತ್ತು ಪಟ್ಟಣ ಅಥವಾ ಈಗಿನ ಶ್ರೀರಂಗಪಟ್ಟಣದಲ್ಲಿ ಉದ್ದ ನಳಿಗೆಯ ಬಂದೂಕುಗಳನ್ನು ತಯಾರಿಸುತ್ತಿದ್ದ. ಸ್ವತಃ ಟಿಪ್ಪು ೧೬ನೇ ಲೂಯಿಗೆ ೨ ಮೈಸೂರು ಪಿಸ್ತೂಲುಗಳನ್ನು ಕಳಿಸಿದ್ದ. ಇದರಿಂದ ೧೬ನೇ ಲೂಯಿ ಬಹುವಾಗಿ ಆಕರ್ಷಿತನಾಗಿದ್ದ. ಇದಲ್ಲದೆ ಟಿಪ್ಪು ಫ್ರೆಂಚರ ಗವರ್ನರ್ ಕಾನ್ವೆಯು ಪಾಂಡಿಚೇರಿಯಿಂದ ಕಳಿಸಿದ್ದ ೫೦೦ ಕೋವಿಗಳನ್ನು, ಮೈಸೂರಿನ ಗುಣಮಟ್ಟವನ್ನು ಹೊಂದಿಲ್ಲವೆನ್ನುವ ಕಾರಣದಿಂದ ವಾಪಸ್ಸು ಕಳಿಸಿದ್ದ ಕೂಡ.

ಹೀಗೆ ಫ್ರೆಂಚರ ಪತ್ರಾಗಾರದಲ್ಲಿರುವ ಈ ದಾಖಲೆಗಳು ಟಿಪ್ಪುವಿನ ಆಧುನಿಕತೆ ಮತ್ತು ಆತನಿಗಿದ್ದ ಆಧುನಿಕತೆಯ ಬಗೆಗಿನ ಕುತೂಹಲ ಮತ್ತು ಆ ವಿಚಾರದ ಅನ್ವಯವನ್ನೂ ಕಾಣಿಸುತ್ತವೆ.




ಟಿಪ್ಪು ವ್ಯಾಪಾರ ವಹಿವಾಟು ನಿಯಂತ್ರಣ ಸಂಬಂಧಿತ ಹಲವು ಆಜ್ಞೆಗಳನ್ನು ನೀಡಿದ್ದ. ಇವುಗಳೇ ಹುಕುಮ್‌ಗಳೆಂದು ಕರೆಯಿಸಿಕೊಂಡು 'ಹುಕುಮ್ ನಾಮಾ-ಇ-ಟಿಪ್ಪು ಸುಲ್ತಾನ್' ಎನ್ನೋ ಹೆಸರಿನಲ್ಲಿ ಕರೆಸಿಕೊಳ್ಳುವ ದಾಖಲೆಗಳಾಗಿವೆ. ಈ ಎಲ್ಲಾ ಹುಕುಮ್‌ಗಳನ್ನು ಈಸ್ಟ್ ಇಂಡಿಯ ಕಂಪನಿಯ ಕರ್ನಲ್ ಆಗ್ ಸಂಗ್ರಹಿಸಿದ್ದ; ಈಗ ಇವು ಇಂಡಿಯ ಆಫೀಸ್ ಲೈಬ್ರರಿಯಲ್ಲಿವೆ. ಮೈಸೂರು ಮತ್ತು ಹೊರದೇಶದ ವ್ಯಾಪಾರದ ಸ್ವರೂಪವನ್ನು ಇದು ತಿಳಿಸುತ್ತದೆ. ಅಲ್ಲದೆ, ಕೋಠಿಗಳು, ಅಲ್ಲಿದ್ದ ಸರಕುಗಳು, ವ್ಯಾಪಾರದ ನಿಯಮಾವಳಿ, ಮಾಧ್ಯಮ, ಆಡಳಿತವರ್ಗ ಮುಂತಾದುವನ್ನೂ ತಿಳಿಸುತ್ತೆ. ಈ ರೀತಿಯ ಹುಕುಮ್‌ಗಳನ್ನು ದೇವರ ಹೆಸರಿನಲ್ಲಿ ಹೊರಡಿಸಿ ಮುದ್ರೆ ಹಾಕುತ್ತಿದ್ದ.

ಟಿಪ್ಪುವಿನ ವ್ಯಾಪಾರವಹಿವಾಟು ಒಂದು ಕಂಪನಿಯ ಸ್ವರೂಪವನ್ನು ಹೊಂದಿದ್ದರೂ ಮೂಲಧನವನ್ನು ರಾಜ್ಯದ ಬೊಕ್ಕಸವೇ ಭರಿಸುತ್ತಿತ್ತು. ಟಿಪ್ಪು ಹೆಚ್ಚಿನ ವ್ಯಾಪಾರಕ್ಕಾಗಿ ಹಡಗು ನಿರ್ಮಾಣವನ್ನು ಮತ್ತು ವಿದೇಶೀ ವರ್ತಕರ, ಬಂಡವಾಳಶಾಹಿಗಳ ಆಮಂತ್ರಣದ ಕುರಿತು ಚಿಂತಿಸಿದ್ದ. ಹುಕುಮ್‌ಗಳನ್ನು ಟಿಪ್ಪು ಮುಖ್ಯ ವ್ಯಾಪಾರೀ ಇಲಾಖೆ, 'ಮಲಿಕು-ತ್-ತುಚಾರ್'ಗೆ ಮಾಡಿದ್ದಾಗಿದೆ. ಇವುಗಳು ಸಂರಕ್ಷಣಾ ಸೈನ್ಯದ ಜತೆಗಿನ ಹಡಗು ಪಡೆ, ನಾಣ್ಯ, ಗಟ್ಟಿ ಚಿನ್ನ, ಬಟ್ಟೆ, ಕಾಳುಮೆಣಸು, ಗಂಧ, ದಾಲ್ಚಿನ್ನಿ, ತೆಂಗು, ಕೊಬ್ಬರಿ, ಅಕ್ಕಿ ಮುಂತಾದ ವಸ್ತುಗಳ ತೀವ್ರ ತೆರನಾದ ವ್ಯಾಪಾರ, ನಂಬಿಕಸ್ಥ (ಮತಸದ್ದಿ-ಇ-ಖಿಫಾಯತ್‌ಪಾರ್) ಲೆಕ್ಕಪರಿಶೋಧಕ ಮತ್ತು ಮಧ್ಯವರ್ತಿಗಳ (ಗುಮಾಸ್ತ) ಆಯ್ಕೆ, ನಷ್ಟವಾಗದಿರುವಂತೆ ವಹಿವಾಟು, ಬಂದರು ಮತ್ತು ಸಾಗರ ವ್ಯಾಪಾರದಲ್ಲಿ ತಪ್ಪಿಲ್ಲದ ಲೆಕ್ಕವಿಡುವಿಕೆ, ಕಳ್ಳತನ ತಪ್ಪಿಸುವಿಕೆ ಮತ್ತು ಕೋಠಿಯನ್ನು ಅವಜ್ಞೆ ಮಾಡದಿರುವಿಕೆಯೇ ಮುಂತಾದ ಹಲವು ಉದ್ದೇಶಗಳನ್ನು ಹೊಂದಿತ್ತು.

ಟಿಪ್ಪು ಹಲವು ಹುಕುಮ್‌ಗಳನ್ನು ನೀಡುತ್ತಾನೆ; ಅವುಗಳಲ್ಲಿ ಕೆಲವು ಅತಿ ಪ್ರಮುಖವಾಗಿವೆ. ಮುಖ್ಯವಾಗಿ, ''ವ್ಯಾಪಾರಕ್ಕಿಂತ ಮುಂಚೆ ವ್ಯಾಪಾರಿಗಳೆಲ್ಲರೂ ಒಂದು ಕಡೆ ಕೂತು ಚರ್ಚಿಸಬೇಕು. ಪ್ರತಿಯೊಬ್ಬರ ಸಲಹೆಯನ್ನು ಸಹಿ ಸಹಿತ ದಫ್ತರ್‌ನಲ್ಲಿ ಬರೆದು ಮುದ್ರೆಯೊತ್ತಬೇಕು. ಬಹುಮತ ಇಲ್ಲಿ ಮುಖ್ಯವಾಗಿರುತ್ತಿತ್ತು. ಮುಂದೆ ಇದರ ಸಂಬಂಧೀ ವಿಚಾರಣೆ ಬಂದರೆ ಪ್ರಶ್ನೆಗಳನ್ನು ಲಿಖಿತರೂಪದಲ್ಲಿ ಇದರ ಸಹಿತ ಮಂಡಿಸಬೇಕಿತ್ತು.'' ವಿಷಯ ಗಂಭೀರವಿದ್ದರೆ ಟಿಪ್ಪುವೇ ಮೂರನೇ ಅಹಮದಿ ತಿಂಗಳಿನಲ್ಲಿ ತೀರ್ಪನ್ನು ನೀಡುತ್ತಿದ್ದ.

ಟಿಪ್ಪು ಖಿಜ್ರಿ ಮತ್ತು ಇಲ್ಯಾಸೀ ಮಾದರಿಯ ೧೦೦ ಹಡಗುಗಳನ್ನು ನಿರ್ಮಿಸಲು ಆಜ್ಞೆ ಮಾಡಿದ್ದ. ಇವು ಶಸ್ತ್ರಸಹಿತವಿರಬೇಕೆಂದೂ, ಈ ಹಡಗುಗಳಲ್ಲಿ ನುರಿತ ವರ್ತಕರು ಹಾಗೂ ಕಬ್ಬಿಣ, ಮರ, ಬಳ್ಳಿ ಮುಂತಾದ ಅಗತ್ಯದ ವಸ್ತುಗಳನ್ನು ಉಪಸ್ಥಾಪಿಸಬೇಕೆಂದಿದ್ದ. ಇಲ್ಲಿನ ಕಾರ್ಮಿಕರಿಗೆ ಸಂಬಳವನ್ನು ನಿಯಮಿತವಾಗಿ ನೀಡಬೇಕೆಂದಿದ್ದ.

ಮೈಸೂರಿನಲ್ಲಿ ಟಿಪ್ಪು ೩೦ ಮತ್ತು ಮೈಸೂರಿನ ಹೊರಗೆ ೧೭ ಕೋಠಿಗಳನ್ನು ಹೊಂದಿದ್ದ. ಝಿಡ್ಡಾ, ಮಸ್ಕತ್ ಮತ್ತು ಒಮನ್‌ಗಳಲ್ಲಿ ಕೂಡ ಈತನಿಗೆ ಕೋಠಿಯಿತ್ತು. ಪತ್ತನ್ ಅಥವಾ ಶ್ರೀರಂಗಪಟ್ಟಣ, ಸಲಾಮಾಬಾದ್ ಅಥವಾ ಸತ್ಯಮಂಗಲಮ್, ವೇಫಿ ಮುಂಗಲ್ ಅಥವಾ ಅರಿವ ಕೂಚೀ, ಬೆಂಗಳೂರು, ಕೋಲಾರ, ಮುರ್ವಗಲ್, ಮದನಪಳ್ಳಿ, ಝಫರಾಬಾದ್ ಅಥವಾ ಗುರುಮಕೊಂಡ, ಪುಂಗನೂರ್, ರಾಯಚೌಟಿ, ಫೈಝ್‌ಹಿಸಾರ್ ಅಥವಾ ಗೂಟಿ, ಧರ್ಮಾವರಮ್, ಫರೂಕ್ ಯಾತ್ ಹಿಸಾರ್ ಅಥವಾ ಖಿತಲ್‌ದುರ್ಗ, ಬೇನಝೀರ್, ಹುರಿಯಲ್, ನಗರ ಅಥವಾ ಬಿದನೂರು, ಶಿಕಾರಿಪುರ, ಸೋಂದಾ, ಕುರ್ಯಾಲ್ ಕುಡ್ಲ ಅಥವಾ ಮಂಗಳೂರು, ಈಶಾಲ್‌ಪುರ, ಬಾರ್ಕೂರು, ಕಾರವಾರ, ಜಮಾಲಾಬಾದ್, ಭಟ್ಕಳ, ಫತ್ತೇಬಾದ್, ಕರೂರ್, .ಕುರಾಪ್, ಬನವಾಸೀ ಮತ್ತು ಗರ್ದುನ್ ಷುಕೋಹ್ ಅಥವಾ ನಂದಿದುರ್ಗ ಎಲ್ಲವೂ ಮೈಸೂರಿನೊಳಗಿನ ಪ್ರಸಿದ್ಧ ಕೋಠಿಗಳಾಗಿದ್ದುವು.

ವ್ಯಾಪಾರ ನಡೆಸಲು ಸುಮಾರು ೪ ಲಕ್ಷ ರಹತಿ ಅಥವಾ ವಿಲಿಯಂ ಕರ್ಕ್‌ಪ್ಯಾಟ್ರಿಕ್ ಅಂದಾಜಿಸುವ ಹಾಗೆ

೧,೨೮,೦೦೦ ಸ್ಟೆರ್ಲಿಂಗ್ ಪೌಂಡು ಹಣವನ್ನು ಅಥವಾ ಚಿನ್ನ, ಬೆಳ್ಳಿ, ಟಂಕಿತ-ಅಟಂಕಿತ ಹಣ ಮತ್ತು ಆನೆಗಳನ್ನು ಮೂಲಧನದ ಹಾಗೆ ಸಂರಕ್ಷಣೆಯ ಉದ್ದೇಶದಿಂದ ಇರಿಸಬೇಕಿತ್ತು. ವ್ಯಾಪಾರ ವಸ್ತುಗಳನ್ನು 'ಕಛೇರಿ' ಎನ್ನುವ ಇಲಾಖೆಯಲ್ಲಿ 'ಆಸೀಫ್' ಎನ್ನುವ ಅಧಿಕಾರಿಯ ಅಡಿಯಲ್ಲಿ ಇಡಲಾಗುತ್ತಿತ್ತು. ಈತನಿಂದ ವರ್ತಕರು ವಸ್ತುಗಳನ್ನು ಪಡೆದು ಹಣವನ್ನು ನೀಡಿ ರಸೀತಿಯನ್ನು ಪಡೆಯಬೇಕಿತ್ತು. ಪಡೆದದ್ದು, ಕೊಟ್ಟದ್ದು, ತೆರಿಗೆ ಎಲ್ಲವನ್ನೂ ದಫ್ತರ್‌ನಲ್ಲಿ ಸಹಿಸಹಿತ ಮುದ್ರೆಯೊತ್ತಿ ಸಂರಕ್ಷಿಸಿ ಇಡಬೇಕೆಂದು ಟಿಪ್ಪು ಹುಕುಮ್ ಹೊರಡಿಸಿದ್ದ. ಇದರ ನಕಲು ಪ್ರತಿಗಳನ್ನು ಶ್ರೀರಂಗಪಟ್ಟಣದಲ್ಲಿ 'ಅರೀರಘ್ ದೇಖೀ' ಎಂಬ ವಿಭಾಗದ ಅಧಿಕಾರಿಗಳು ಮತ್ತು ಹಿಂದೂ ಬ್ರಾಹ್ಮಣ ಕರಣಿಕರು ಕಾಪಿಡುತ್ತಿದ್ದರು ಮತ್ತು ಮೇಲ್ವಿಚಾರಣೆ ಮಾಡುತ್ತಿದ್ದರು.

ಸರಿಯಾದ ನಾಣ್ಯೇಯ ಮತ್ತು ಅನಾಣ್ಯೇಯ ವ್ಯಾಪಾರ ವಹಿವಾಟು ನೋಡಿಕೊಳ್ಳಲು ೩೦ ಕಡೆ ಮಧ್ಯವರ್ತಿಗಳನ್ನು ನೇಮಿಸುವಂತೆ ಟಿಪ್ಪು ಹುಕುಂ ಹೊರಡಿಸಿದ್ದ. ಪ್ರತಿ ತಾಲ್ಲೂಕಿನಲ್ಲಿ ೧೦೦೦ದಿಂದ ೨೦೦೦ ರಹತಿಯಷ್ಟು ವ್ಯಾಪಾರವನ್ನು ಆತ ಬಯಸಿದ್ದ. ಚಿನ್ನ, ಬೆಳ್ಳಿ ಮತ್ತು ಹಣ ಟಂಕಿಸುವ ಸಂಬಂಧಿತ ವಹಿವಾಟಿನಲ್ಲಿ ಖಾಸಗೀ ಸಾಮಾನ್ಯ ವ್ಯಕ್ತಿಯನ್ನು ಟಿಪ್ಪು ಬಿಡುತ್ತಿರಲಿಲ್ಲ. ೧೦೦೦ ರೂ.ಗಿಂತ ಕಡಿಮೆ ಶೇರುದಾರರು ಬಂದರೆ ಅವರಿಗೆ ಅವಕಾಶವಿರಲಿಲ್ಲ. ಒಬ್ಬ ವ್ಯಕ್ತಿ ಇಲ್ಲಿ ವ್ಯಾಪಾರ ಮಾಡಬೇಕಾದರೆ ಮೊದಲು ೧೨೦೦ ರೂ. ಚೀಟಿ ಖರೀದಿಸಿ ಪ್ರವೇಶಿಸಬೇಕಿತ್ತು.

ಮಸ್ಕತ್, ಝಿಡ್ಡಾ ಮತ್ತು ಒಮನ್‌ನಲ್ಲಿನ ತನ್ನ ಸ್ವಂತ ಕೋಠಿಗಳಿಗೆ ನುರಿತ ಕಾರ್ಮಿಕರನ್ನು, ವರ್ತಕರನ್ನು ನಿಯಮಿಸಬೇಕೆಂದು ಆಜ್ಞೆ ಹೊರಡಿಸಿದ್ದ ಟಿಪ್ಪು ಇಲ್ಲಿಗೆ ಒಳ್ಳೆ ಗುಣಮಟ್ಟದ ಕಾಳುಮೆಣಸು, ಗಂಧ, ತೆಂಗಿನಕಾಯಿ, ವೀಳ್ಯದೆಲೆ, ಅಕ್ಕಿಯನ್ನು ಪೂರೈಸಬೇಕೆಂದೂ ಹುಕುಮ್ ಮಾಡಿದ್ದ ಮತ್ತು ೬೦೦ರ ಒರಟು ಪ್ರಥಮ ದರ್ಜೆಯ ಕರ್ಪೂರವನ್ನೇ ಕಳಿಸಬೇಕೆಂಬ ಆಜ್ಞೆ ಕೂಡ ಇತ್ತು. ಕಳಿಸಿದ್ದಕ್ಕೆ ಸರಿಯಾಗಿ ರಸೀತಿಯನ್ನೂ ಅಧಿಕಾರಿಗಳು ಇರಿಸಬೇಕಾಗಿತ್ತು.

ಟಿಪ್ಪುವಿನ ರಾಷ್ಟ್ರದ ಪರಿಕಲ್ಪನೆ ಆಧುನಿಕ ಪ್ರೌಢವಾದುದಾಗಿರಲಿಲ್ಲ. ಇದಕ್ಕೆ ಆತನ ಕೊನೆಯ ಹುಕುಮ್‌ಗಳೇ ನಿದರ್ಶನವಾಗುತ್ತವೆ. ಈ ನಿರ್ಧಾರಗಳು ಅಥವಾ ಆಜ್ಞೆಗಳು ಮೈಸೂರು ಮತ್ತು ವಿದೇಶದ ಕೋಠಿಗಳೆರಡಕ್ಕೆಂದು ನಿಖರವಾಗಿ ಹೇಳಿರುವುದನ್ನು ಗಮನಿಸಿದರೆ ಮೈಸೂರು ಅಥವಾ ಭಾರತವು ರಾಷ್ಟ್ರವಾಗಿ ನಿರ್ಮಾಣವಾಗುತ್ತಿರುವ ಆದಿಮ ಹಂತವನ್ನೂ ಮತ್ತು ರಾಷ್ಟ್ರೀಯತೆ – ರಾಷ್ಟ್ರ ನಿರ್ಮಾಣ ಒಂದು ಉತ್ಪನ್ನವಲ್ಲ, ಬದಲು ಪ್ರಕ್ರಿಯೆ ಎನ್ನುವುದನ್ನೂ ಗಮನಿಸಬಹುದಾಗಿದೆ. ಟಿಪ್ಪು ಹೊರದೇಶದ ಕೋಠಿಗಳಿಂದ ವ್ಯಾಪಾರ ಸರಿಯಾಗಬೇಕು, ವ್ಯಾಪಾರಕ್ಕೆ ತೊಂದರೆಯಾದರೆ ಅಲ್ಲಿಯ ರಾಜರಿಗೆ ದೂರಿಡಬೇಕೆಂದೂ ಹೇಳುತ್ತಾನೆ. ಕರ್ನೂಲ್, ಚೆನ್ನೈಪಟ್ನ ಅಥವಾ ಮದ್ರಾಸ್, ಪಹಲಛೇರಿ ಅಥವಾ ಪಾಂಡಿಚೇರಿ, ಪೂನಾ, ಕುರ್ಪಾಹ್, ಚಂದ್ರನಾಗೋರ್, ವೇರಾರುಘ್ ಅಥವಾ ಮೀರರುಘ್, ಮಾಲೇಗಾವ್, ದಾಗಾರ್‌ಕೋಛ್, ಉತ್ಕೀ, ನಾಂದ್ವಾಲ್, ಹುಮ್ನಾಬಾದ್, ರಾಯಚೂರು, ಮಸ್ಕತ್, ಕಛ್, ಸಿಂಧ್, ಕರಾಚಿ ಮತ್ತು ಮಾಹೆಯು ವಿದೇಶದ ಕೋಠಿಗಳಾಗಿದ್ದುವು.

ಹೀಗೆ ಮೇಲಿನ ಎಲ್ಲಾ ಸಂಗತಿಗಳೂ ಟಿಪ್ಪುವಿನ ಆಧುನಿಕ ಪ್ರವರ್ತನೆಯ ಇನ್ನೊಂದು ಮುಖವನ್ನು ದರ್ಶಿಸುತ್ತವೆ. ಟಿಪ್ಪುವಿನ ಕೃಷಿ ಮತ್ತು ನೀರಾವರಿ ಸುಧಾರಣೆಯು ಅವನ ಆಧುನಿಕೀಕರಣದ ಉತ್ಸಾಹದ ಕೈಗನ್ನಡಿ. ಮೈಸೂರಿನ ಕೆಲವು ಭಾಗಗಳು, ವಿಶೇಷವಾಗಿ ಶಿರಾದಂತಹ ಭಾಗಗಳು ಮೊಘಲ್ ಮನ್ ಸಬ್‌ದಾರಿಕೆಯಲ್ಲಿ, ನಂತರದ ನೈಝಾಮೀಯ ಮತ್ತು ಹೈದರ್ ಆಳ್ವಿಕೆಯಲ್ಲಿ ಕೂಡ ಭೂಮಾಲೀಕರ ಕರಾಳ ಕೃತ್ಯಗಳಿಗೆ ಇತಿಹಾಸವಾಗಿತ್ತು. ಭೂಮಾಲೀಕರು, ರಾಜ್ಯದ ಪರವಿದ್ದ ತೆರಿಗೆ ಸಂಗ್ರಾಹಕರೂ ಕೂಡ ಜನರನ್ನು ಮನಸೋಇಚ್ಛೆ ಹಿಂಸಿಸುತ್ತಿದ್ದರು. ಎಷ್ಟೋ ಬ್ರಿಟಿಷ್ ದಾಖಲೆಗಳು ಇದನ್ನು ನಮ್ಮ ಮುಂದೆ ತೆರೆದಿಡುತ್ತವೆ. ಫ್ರಾನ್ಸಿಸ್ ಬುಕಾನನ್ ಸಹ ಇದನ್ನು ಉಲ್ಲೇಖಿಸುತ್ತಾನೆ. ಟಿಪ್ಪು ಸುಲ್ತಾನ್ ಮೊದಲ ಬಾರಿಗೆ ಇದನ್ನು ಸರಿಪಡಿಸಿದ. ಟಿಪ್ಪು ಅಪ್ಪನಿದ್ದಾಗ ಧರ್ಮಪುರಿಯ ಜಾಗೀರ್‌ದಾರಿಕೆ ನಡೆಸಿ ಸಾಕಷ್ಟು ಅನುಭವಿಸಿದ್ದ ಕಾರಣ ಪಟ್ಟಕ್ಕೆ ಬಂದ ತರುವಾಯ ತೆರಿಗೆ ಮತ್ತು ಕೃಷಿ ಸುಧಾರಣೆಗಳನ್ನು ತಂದ.

ಟಿಪ್ಪು ಒಣ, ತೇವ, ಹಿಸ್ಸಾ ಮತ್ತು ಇಚ್ರಾ ಭೂಮಿಗಳಲ್ಲಿ ಹೊಸ ತೆರಿಗೆ ವಿತರಣೆಯನ್ನು ತಂದ. ವಿಶೇಷವಾಗಿ, ಮೀರಾಸ್ – ಸಾಂಪ್ರದಾಯಿಕ ಅಥವಾ ಅನುವಂಶೀಯ ಪೂರ್ವಜರ ಭೂಮಿಯ ಮೇಲಿನ ತೆರಿಗೆಯನ್ನು ಸರಿಯಾದ ಬೆಳೆ ಇದ್ದರೆ ಮಾತ್ರ ಸಂಗ್ರಹಿಸುತ್ತಿದ್ದ. ಇದಲ್ಲದೇ ಭೂಗೇಣಿ – ಸರ್ಕಾರದ ಭೂಮಿಯನ್ನು ಉಳುತ್ತಿದ್ದ ಗೇಣಿದಾರರಿಂದ ಜಮೀನ್ದಾರ ಸಂಗ್ರಹಿಸಿ ರಾಜ್ಯಕ್ಕೆ ಒಪ್ಪಿಸುತ್ತಿದ್ದ ತೆರಿಗೆಯನ್ನು ಮಾನ್ಯ ಮಾಡಿದ. ಬಿದನೂರ್, ಮೈಸೂರು, ಮತ್ತು ಪಯೂರ್‌ನಲ್ಲಿ ಈ ಮಾದರಿಯಿತ್ತು. ಕೆನರಾ ಪ್ರದೇಶದಲ್ಲಿ ಸಾಂದರ್ಭಿಕತೆಗೆ ತಕ್ಕಂತೆ ಹಣ ಅಥವಾ ನಗದು ಮಾದರಿಯಲ್ಲಿ ಜನರು ನೇರವಾಗಿ ಸರ್ಕಾರಕ್ಕೆ ಸಲ್ಲಿಸಬಹುದಾದ ರೈತವಾರೀ ಮಾದರಿಯ ತೆರಿಗೆ ಪದ್ಧತಿಯನ್ನು ತಂದ. ಟಿಪ್ಪು ವಿಶೇಷವಾದ ತೆರಿಗೆಗಳನ್ನು ನಗದು ರೂಪದಲ್ಲಿ ಸ್ವೀಕರಿಸಿದ, ಚಿನ್ನ ಬೆಳ್ಳಿ ತಾಮ್ರ ನಾಣ್ಯಗಳಲ್ಲೂ ಸ್ವೀಕರಿಸಿದ. ರಾಜ್ಯದ ರೈತರಿಗೆ ತೊಂದರೆ ಮಾಡದಂತೆ ಆಜ್ಞೆ ವಿಧಿಸಿದ್ದ. ರೈತರ ನಡುವಿನ ಹೆಚ್ಚಿನ ಮಧ್ಯವರ್ತಿಗಳನ್ನು ಕಿತ್ತುಹಾಕಿದ್ದ. ಮಧ್ಯಮ ಸ್ವರೂಪದ ತೆರಿಗೆಯನ್ನು ವಿಧಿಸಿದ ಕಾರಣ ರೈತರು ನಿರಾಳತೆಯನ್ನು ಕಂಡಿದ್ದರು.

ಭೂಮಿಗೆ ಎಷ್ಟು ಬೀಜವನ್ನು ಬಿತ್ತಿದ್ದಾರೆ ಎಂಬುದರ ಮೇಲೆ ಫಲವತ್ತತೆ ಹಾಗೂ ತೆರಿಗೆಯನ್ನು ಅಳೆಯಲಾಗುತ್ತಿತ್ತು. ಖಂಡುಗ, ಕುಡು ಮತ್ತು ಸೇರು ಸಾಮಾನ್ಯ ಮಾಪಕಗಳಾಗಿದ್ದುವು. ಟಿಪ್ಪು ಬ್ರಾಹ್ಮಣರಿಗೆ ಬರೀ ೧/೪ ಭಾಗವನ್ನು ಮಾತ್ರ ತೆರಿಗೆಯೆಂದು ವಿಧಿಸಿದ್ದ. ತೆರಿಗೆ ವ್ಯವಸ್ಥೆಯಲ್ಲಿ ಟಿಪ್ಪು ತಂದ ಸುಧಾರಣೆಗಳು ಅದ್ಭುತವಾಗಿದ್ದುವು. ಕೆಲವು ಇತಿಹಾಸಕಾರರು ಇಂಗ್ಲೆಂಡಿನ ಅಂದಿನ ತೆರಿಗೆ ವ್ಯವಸ್ಥೆಗೆ ಹೋಲಿಸಿ ಟಿಪ್ಪುವಿನ ವ್ಯವಸ್ಥೆಯೇ ಅತ್ಯುತ್ತಮವೆಂದು ಅಭಿಪ್ರಾಯಪಟ್ಟಿದ್ದಾರೆ. ಆಗ ಇಂಗ್ಲೆಂಡ್‌ನಲ್ಲಿ ಉತ್ಪನ್ನದ ೨/೩ ಭಾಗ ರಾಜ್ಯಕ್ಕೆ ಮತ್ತು ೧/೩ ಭಾಗ ರೈತನಿಗಾದರೆ ಮೈಸೂರಿನಲ್ಲಿ ರಾಜ್ಯ ಬರೀ ೧/೩ ಭಾಗ ಹೊಂದಿ ೨/೩ ಭಾಗ ರೈತನಿಗೆ ಬಿಟ್ಟುಕೊಡುತ್ತಿತ್ತು. ಟಿಪ್ಪು ರಾಗಿ, ಭತ್ತ, ಬಾಜ್ರಾ, ಬೇಳೆ, ಹುರುಳಿ, ಉದ್ದು, ಹೆಸರು, ಕಡಲೆ ಮತ್ತು ಕಬ್ಬು ಮುಂತಾದ ಆಹಾರ ಬೆಳೆಗಳ ಜತೆ ವಾಣಿಜ್ಯ ಅರಣ್ಯ ಬೆಳೆಗಳಾದ ಅಡಿಕೆ, ಮೆಣಸು, ದಾಲ್ಚಿನ್ನಿ, ತಂಬಾಕು, ಗಂಧವನ್ನು ಬೆಳೆಸಲೂ ಸಹ ಪ್ರೋತ್ಸಾಹ ನೀಡಿದ್ದ. ಅನೇಕ ಕೆರೆ ಬಾವಿ ಕಾಲುವೆಗಳನ್ನು ಫ್ರೆಂಚ್ ಇಂಜಿನಿಯರ್‌ಗಳ ಸಹಾಯದಿಂದ ಪುನರ್‌ನಿರ್ಮಿಸಿ ಕೃಷಿಗೆ ಪೂರಕವಾಗಿಸಿದ್ದ. ಹೀಗೆ ಟಿಪ್ಪು ಕೃಷಿ ತೆರಿಗೆ ಮತ್ತು ಕೃಷಿ ವಿಧಾನದಲ್ಲಿ ಸಂಪೂರ್ಣವಾಗಿ ಆಧುನಿಕತೆಯ ಛಾಪನ್ನು ಮೂಡಿಸಿದ.

'ಎ ಜರ್ನೀ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಆ್ಯಂಡ್ ಮಲಬಾರ್' ಎನ್ನುವ ಶಿರೋನಾಮೆಯಲ್ಲಿ ೧೮೦೭ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕ ಮಂಡಲಿಯ ಪ್ರಾಧಿಕಾರದಲ್ಲಿ ಪ್ರಕಟಿಸಿ ತನ್ನ ಕೆನರಾ, ಮೈಸೂರ್, ಮದ್ರಾಸ್, ಮಲಬಾರ್ ಪ್ರವಾಸದ ಅನುಭವಗಳನ್ನು ಹೇಳುತ್ತಾ ಟಿಪ್ಪುವಿನ ಆಧುನಿಕೀಕರಣ ಪ್ರವೃತ್ತಿಯ ಪರಿಣಾಮಗಳನ್ನು, ೧೮೦೦-೦೧ರಲ್ಲಿ ಮಾರ್ಕ್ವೆಸ್ ವೆಲ್ಲೆಸ್ಲಿಗೆ ಸಲಹೆಗಾರನಾಗಿ ಬಂದ ಫ್ರಾನ್ಸಿಸ್ ಬುಕಾನನ್ ತುಂಬಾ ಚೆನ್ನಾಗಿ ತಿಳಿಸುತ್ತಾನೆ. ಟಿಪ್ಪುವಿನ ಆಧುನಿಕ ಶೈಲಿಯ ಶ್ರೀರಂಗಪಟ್ಟಣದ ಅರಮನೆ, ನಾಗರಿಕ ಆಡಳಿತದ ದಕ್ಷತೆ, ದೊಡ್ಡ ಖಟ್ಟೆ, ಪೇಪರ್, ಗಡಿಯಾರ, ಕಟ್ಲೇರಿ ಮತ್ತಿತರ ಯೂರೋಪಿಯನ್ ಮಾದರಿ ವಸ್ತುಗಳು ಟಿಪ್ಪು ಹೊಂದಿದ್ದ ಆಧುನಿಕತೆಯ ಲಕ್ಷಣವೆನ್ನುತ್ತಾನೆ. ಫ್ರೆಂಚ್ ಕುಶಲಿಯಿಂದ ನಿರ್ಮಿತ ಪಿಸ್ತೂಲು, ಹರಿಯುವ ನೀರಿನ ಮೂಲಕ ಚಲಿಸುವ ಯಂತ್ರ, ನೀರಾವರಿಗೆ ಟಿಪ್ಪು ನಿರ್ಮಿಸಿದ ಕಾಲುವೆಗಳು ಮತ್ತು ಸುಧಾರಿತ ಹಗುರ ತೆರಿಗೆ ವ್ಯವಸ್ಥೆ ಎಲ್ಲವೂ ಕೂಡ ಟಿಪ್ಪು ಹೊಂದಿದ್ದ ಆಧುನಿಕತೆಯ ಲಕ್ಷಣವೆಂದು ಬುಕಾನನ್ ಉಲ್ಲೇಖಿಸುತ್ತಾನೆ.

ಹೀಗೆ ಮೇಲಿನ ನಾಲ್ಕು ಆಯಾಮಗಳಿಂದ ಟಿಪ್ಪು ಒಬ್ಬ ಆಧುನಿಕ; ಮತ್ತು ಆಧುನಿಕ ಮೈಸೂರನ್ನು ನಿರ್ಮಿಸುವಲ್ಲಿ ತನ್ನದೇ ಆದ ಮಹತ್ವದ ಪಾತ್ರ ವಹಿಸಿದ್ದಾನೆ ಎಂಬುದನ್ನು ತಿಳಿಯಬಹುದು. ಇಲ್ಲಿ ಟಿಪ್ಪು ಆ ಯುಗಕ್ಕೆ ಎಷ್ಟು ಪುರೋಗಾಮಿತ್ವವನ್ನು ಹೊಂದಿದ್ದ ಎನ್ನುವುದು ಮುಖ್ಯವಾಗುತ್ತದೆಯೇ ಹೊರತು, ಆತ ಈಗಿನ ಹಾಗೆ ಆಧುನಿಕತೆಯ ಪರಿಕಲ್ಪನೆಯನ್ನು ಹೊಂದಿರಲಿಲ್ಲ ಎನ್ನುವುದು ಅರ್ಥಹೀನವಾಗುತ್ತದೆ. ಮಾನವ ಸಮಾಜದಲ್ಲಿ ಒಂದು ಆದರ್ಶವೆನ್ನುವುದು ಥಾಮಸ್ ಮೋರ್‌ನ ಯುಟೋಪಿಯಾದಂತೆಯೇ ಸರಿ. ಪ್ರವೃತ್ತಿಗಳು ಇರುವವರೆಗೆ ಮಾನವ ಈ ಆದರ್ಶವನ್ನು ತಲುಪುವುದು ಕಷ್ಟ; ಇದು ಎಲ್ಲಾ ತಥಾಕಥಿತ ಆದರ್ಶದಾಯಕರ, ಮಹಾತ್ಮರ ಬದುಕಿನಲ್ಲೂ ಇರುವಂತಹ ಸತ್ಯ. ಹಾಗಿರುವಾಗ ಟಿಪ್ಪು, ಶಿವಾಜಿ, ಔರಂಗಜೇಬರಲ್ಲಿ ಇದನ್ನು ಯಾಕೆ ನಿರೀಕ್ಷಿಸಬೇಕು ? ಅವರೆಲ್ಲರೂ ನಮ್ಮ ಹಾಗೆಯೇ ಪ್ರವೃತ್ತಿಗಳಲ್ಲಿ ಮಾನವರೇ. ಹೀಗಾದಾಗ ಒಬ್ಬ ವ್ಯಕ್ತಿಯ ರಚನಾತ್ಮಕ ಕಾರ್ಯಗಳೆಷ್ಟು ಎನ್ನುವುದನ್ನು ಮೆಲುಕುಹಾಕುವುದೇ ಸಮನ್ವಯದ ಸ್ವಸ್ಥ ಸಮಾಜದ ಆರೋಗ್ಯವನ್ನು ಕಾಯ್ದುಕೊಳ್ಳಲು ಇರುವ ಮಾರ್ಗರೂಪೀ ಔಷಧ. ಬದಲಾಗಿ ಇರುವ ಅಥವಾ ಇಲ್ಲದಿರುವ ತಥಾಕಥಿತ ಅಪರಿಪೂರ್ಣ ಅಥವಾ ದೋಷವೆನ್ನುವ ಕಪ್ಪುಚುಕ್ಕೆಯನ್ನು ಕೆದುಕುವುದರಿಂದ ಬಹುಮುಖೀ ಸಂಸ್ಕೃತಿಯ ನಮ್ಮ ಸಮಾಜ ಕೆಟ್ಟುಹೋಗುತ್ತದೆ.

ಪ್ರದೀಪ ಕುಮಾರ ಕೆಂಚನೂರು
ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು



**ಐದು ಬೀದಿ ನಾಟಕಗಳು**

*ಡಾ|| ಬಸವರಾಜ ಸಬರದ*

**ಪುಟ : ೧೨೮ ಬೆಲೆ : ರೂ. ೮೦**

**ಪಲ್ಲವಿ ಪ್ರಕಾಶನ, ಗುಲಬರ್ಗಾ - ೫೮೫ ೧೦೬**

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರೊಫೆಸರ್ ಆಗಿರುವ ಬಸವರಾಜ ಸಬರದ ಕಾವ್ಯ, ನಾಟಕ, ವಿಚಾರ ಸಾಹಿತ್ಯ, ಸಾಹಿತ್ಯ ವಿಮರ್ಶೆ, ಸಂಶೋಧನೆ ಕ್ಷೇತ್ರಗಳಲ್ಲಿ ಸಾಕಷ್ಟು ಕೃಷಿ ಮಾಡಿ ಯಶಸ್ವಿಯಾಗಿದ್ದಾರೆ. ಪ್ರತಿರೂಪ, ರೆಕ್ಕೆ ಮೂಡಿದಾಗ, ಬೆಳ್ಳಿ, ನರಬಲಿ, ಬೆಳ್ಳಕ್ಕಿ ಸಾಲು ನಾಟಕ ಕೃತಿಗಳನ್ನು ರಚಿಸಿದ ನಂತರ ಸಬರದರು ೧೯೯೫ರಿಂದ ಈಚೆಗೆ ಬೀದಿ ನಾಟಕಗಳ ರಚನೆಗೆ ಒತ್ತುಕೊಟ್ಟಿದ್ದಾರೆ. ಈ ಸಂಕಲನದಲ್ಲಿ ಐದು ಬೀದಿ ನಾಟಕಗಳಿದ್ದು, ಪ್ರತಿಯೊಂದೂ ಸಮಾಜಮುಖಿ ಚಿಂತನೆಗಳನ್ನು ಜನಮಾನಸದಲ್ಲಿ ಹುಟ್ಟಿಸುವುದರಲ್ಲಿ ಆಶ್ಚರ್ಯವಿಲ್ಲ. ಜೀವಜಲ, ಕಾಯಕ ಜೀವಿಗಳು, ಮಹಿಳಾ ವಿಮೋಚನೆ, ಸಿದ್ಧಾರ್ಥ, ಬೆಳಕಿನೆಡೆಗೆ ಹೀಗೆ ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯತೆ ಇದೆ. ವಚನ ಪರಂಪರೆ, ಇತಿಹಾಸದ ವಸ್ತುಗಳನ್ನು ಇಲ್ಲಿ ಹೊಸ ನೆಲೆಯಲ್ಲಿ ಆಧುನಿಕವಾಗಿ ನೋಡಿರುವುದರಿಂದ ಈ ನಾಟಕಗಳು ಯಶಸ್ವಿ ಬೀದಿ ನಾಟಕಗಳಾಗಿವೆ.

**ಹೂವು-ನೋವು** (ಜೀವನ ಕಥನ)

*ಪ್ರಮೋದ ಕರ್ನಾಡ ಅನು : ಸುಚೇತಾ ಆಪ್ಟೇಕರ*

**ಪುಟ : xii+೧೮೨=೧೯೪ ಬೆಲೆ : ರೂ. ೧೨೦**

**ಮನೋಹರ ಗ್ರಂಥ ಮಾಲಾ, ಲಕ್ಷ್ಮೀ ಭವನ, ಸುಭಾಸ ರೋಡ, ಧಾರವಾಡ- ೫೮೦ ೦೦೧**

ಲೇಖಕರಾಗಿ, ಮಹಾರಾಷ್ಟ್ರ ರಾಜ್ಯ ಸಹಕಾರಿ ಬ್ಯಾಂಕಿನ ಡೆಪ್ಯೂಟಿ ಜನರಲ್ ಮ್ಯಾನೇಜರ್ ಆಗಿ ಕೆಲಸ ನಿರ್ವಹಿಸುತ್ತಿರುವ ಪ್ರಮೋದ ಕರ್ನಾಡರು ತಮ್ಮ ತಾಯಿ ಹೀರಾ ಕರ್ನಾಡರ ಬಗ್ಗೆ ಮರಾಠಿಯಲ್ಲಿ ಬರೆದ 'ವ್ಯಥಾಫೂಲ' ಕೃತಿಯೇ 'ಹೂವು-ನೋವು' ಕೃತಿಯಾಗಿ ಕನ್ನಡಕ್ಕೆ ಅನುವಾದಗೊಂಡಿದೆ. ಪ್ರಸಿದ್ಧ ಕಥಾಲೇಖಕಿ, ಶಾಸ್ತ್ರೀಯ ನೃತ್ಯ ಕಲಾವಿದೆಯಾಗಿದ್ದ ಹೀರಾ ಕರ್ನಾಡರ ಜೀವನ ಕಥನ ಇಲ್ಲಿ ಹಂತಹಂತವಾಗಿ ಅನಾವರಣಗೊಳ್ಳುತ್ತದೆ. ಸಾವಿನ ಅಂಚಿನಲ್ಲಿ ಮಲಗಿದ್ದ ಹೀರಾ ಕರ್ನಾಡರು ತಾವು ಮುತ್ತೈದೆಯಾಗೇ ಸಾಯುವುದರ ಮೂಲಕ ತೆರೆದುಕೊಳ್ಳುವ ಕಥಾನಕ ನಂತರದಲ್ಲಿ ಅವರು ಎದುರಿಸಿದ ನೋವು-ನಲಿವುಗಳು ಬಹಳ ಕಾಲ ಮನಸ್ಸಿನಲ್ಲಿ ಉಳಿಯುವಂಥವು. ದೇಹ ಸುಟ್ಟು ಬೂದಿಯಾದರೂ ಆ ಹಸಿರು ಗಾಜಿನ ಬಳೆಗಳು ಮಾತ್ರ ಆ ಬೆಂಕಿಯಲ್ಲಿ ಬೂದಿಯಾಗದೆ ಹಾಗೇ ಉಳಿದುಬಿಡುವುದು ಅದನ್ನು ಅವರೆಲ್ಲ 'ಮೆಟಾಫಿಸಿಕಲ್ ಪವರ್' ಎನ್ನುವುದು ಪ್ರತಿಯೊಂದೂ ಹೃದಯಸ್ಪರ್ಶಿಯಾಗಿದೆ.



**ವಿವೇಕಾನಂದರ ಕ್ರಾಂತಿಕಾರಿ ವಿಚಾರಗಳು**

*ಸಂ. : ಜ. ಹೊ. ನಾರಾಯಣಸ್ವಾಮಿ*

**ಪುಟ : xvi+೧೪೨ ಬೆಲೆ : ರೂ. ೬೦**

**ಮಾನವ ಪ್ರಕಾಶನ,** ನಂ. ೨೦೬೪/ಎ, ಉತ್ತರ ಬಡಾವಣೆ, ಹಾಸನ - ೨೭೩ ೨೦೧

ಆಧ್ಯಾತ್ಮ ಸಂಬಂಧೀ ವಿಚಾರಗಳು ಮಾತ್ರವಲ್ಲದೆ ಇಲ್ಲಿನ ವಿಶ್ವವಿದ್ಯಾಲಯ, ವಿದ್ಯೆ, ಶಿಕ್ಷಣ, ಮೂಢನಂಬಿಕೆ, ಜ್ಯೋತಿಷ್ಯ, ಮದುವೆ, ಭಾಷೆ, ಕಲೆ, ಜನಮನ, ದೇಶ, ಸಮಾಜ ಮುಂತಾದ ವಿಚಾರಗಳ ಬಗ್ಗೆ ವಿವೇಕಾನಂದರ ನಿಲುವುಗಳೇನಿದ್ದವು ಎಂಬುದನ್ನು ಈ ಸಂಕಲನದಲ್ಲಿ ತಿಳಿಯಬಹುದು. ಜ.ಹೊ.ನಾ. ತುಂಬ ಅಚ್ಚುಕಟ್ಟಾಗಿ ವಿವೇಕಾನಂದರ ವಿಚಾರಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. 'ಕಾವಿಯೊಳಗೆ ಕುದಿದ ಕೆಂಡ'ವಾಗಿ ವಿವೇಕಾನಂದರನ್ನು ಕಂಡಿರುವ ಅವರು ಅಂಥವೇ ಸ್ಫೋಟಕ ವಿಚಾರಗಳನ್ನು ಸಂಕಲಿಸಿಕೊಟ್ಟು ನಮ್ಮ ವಿಸ್ಮೃತಿಯ ರೂಢಿಗತ ಬದುಕಿನ ಬಗ್ಗೆ ಹೊಸದಾಗಿ ಚಿಂತಿಸಲು ಕಾರಣಕರ್ತರಾಗುತ್ತಾರೆ. ಇಲ್ಲಿನ ವಿಚಾರಗಳು ಜೀವನದಲ್ಲಿ ಯಾವುದು ಮೌಲಿಕವಾದದ್ದು ಮತ್ತು ಯಾವುದು ಅಲ್ಲ ಎಂಬುದನ್ನು ತಾಳೆ ಹಾಕಿ ನೋಡುವ ಪರಿಪಾಠ ಬೆಳೆಸುವಷ್ಟು ಶಕ್ತವಾಗಿವೆ. ಜನಾಂಗ, ರಾಷ್ಟ್ರಗಳ ಸಂಕುಚಿತತೆಗಳನ್ನು ಮೀರಿ ವಿಶ್ವಾತ್ಮಕವಾಗಿಬಿಡುವ ಮನಸ್ಸು ಮಾತಾಡಿರುವುದು ಇಲ್ಲಿ ತಿಳಿದುಬರುತ್ತದೆ.



**ಪ್ರಳಯದ ಕಸ** (ವಿಮರ್ಶಾ ಲೇಖನಗಳು)

*ಡಾ|| ಗುಂಡಣ್ಣ ಕಲಬುರ್ಗಿ*

**ಪುಟ : x+೧೨೪ ಬೆಲೆ : ರೂ. ೧೨೦**

**ಸೌಜನ್ಯ ಪ್ರಕಾಶನ, 'ಸೃಷ್ಟಿ', ಈರಣ್ಣನಗರ, ಮೂಡಲಗಿ - ೫೯೧ ೩೧೨, ಬೆಳಗಾವಿ ಜಿಲ್ಲೆ**



ಡಾ|| ಗುಂಡಣ್ಣ ಕಲಬುರ್ಗಿ 'ಸ್ವಪ್ನಲೋಕ' ಪತ್ರಿಕೆಗೆ ನಿಯಮಿತವಾಗಿ ಬರೆದ ಲೇಖನಗಳು ಇಲ್ಲಿ ಸಂಕಲಿತವಾಗಿವೆ. ವಚನಗಳನ್ನು ಆಧುನಿಕ ನೆಲೆಯಲ್ಲಿ ವಿಶ್ಲೇಷಿಸಬೇಕೆನ್ನುವ ಲೇಖಕರ ತುಡಿತ ಇಲ್ಲಿನ ಲೇಖನಗಳಲ್ಲಿ ಕಾಣಬರುತ್ತದೆ. ವಚನಗಳನ್ನು 'ಆತ್ಮ ಸಂವಹನ'ದ ಸಮಾಗಮ ಎಂದು ರೂಪಕವಾಗಿಸಿ ಕರೆದಿರುವ ಲೇಖಕರು ಅವುಗಳನ್ನು ತಾವು ಮೊದಲ ಬಾರಿಗೆ ಓದಿದಂತೆ ಓದಿ ಅನುಸಂಧಾನಗೊಳಿಸಿರುವುದು ಇಲ್ಲಿ ಕಂಡುಬರುತ್ತದೆ. 'ಸಿದ್ಧ ವಿಮರ್ಶಾ ಮಾದರಿಗಳನ್ನು ಬಿಟ್ಟು ಹೊಸ ಪರಿಭಾಷೆಯಲ್ಲಿ ಮಾತನಾಡಲು ಇಚ್ಛಿಸಿದ' ಅವರಿಗೆ ಪ್ರೊ|| ಕಿ.ರಂ.ರ ಮಾತು ('ಸಿದ್ಧಮಾರ್ಗಗಳನ್ನು ಭಗ್ನಗೊಳಿಸದೆ ನವ್ಯಮಾರ್ಗಗಳು ತೋರುವುದಿಲ್ಲ') ಭೀಮಬಲ ಕೊಟ್ಟಂತೆ. ನಮ್ಮ ನಡುವಿನ ತಲ್ಲಣಗಳು, ವಾಣಿಜ್ಯೀಕರಣದ ಭರಾಟೆ, ಆಧುನಿಕತೆಯ ಅಬ್ಬರ – ಈ ಎಲ್ಲಕ್ಕೂ ವಚನಗಳಲ್ಲಿ, ಕವನಗಳಲ್ಲಿ ಅರ್ಥ ಶೋಧಿಸುತ್ತ ವಚನಗಳು ಸಾರ್ವಕಾಲಿಕ ಎಂಬುದು ಈ ಲೇಖನಗಳಲ್ಲಿ ಮನದಟ್ಟಾಗುತ್ತದೆ.



**ಮಂಜು** (ಕಾದಂಬರಿ) ಎಂ. ಟಿ. ವಾಸುದೇವನ್ ನಾಯರ್

*ಅನು : ಪಾರ್ವತಿ ಜಿ. ಐತಾಳ್*

**ಪುಟ : x+೭೦ ಬೆಲೆ : ರೂ. ೪೦**

**ಮನೋಹರ ಗ್ರಂಥ ಮಾಲಾ, ಲಕ್ಷ್ಮೀ ಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧**

ಮಲಯಾಳಂನ ಪ್ರಖ್ಯಾತ ಲೇಖಕ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಎಂ. ಟಿ. ವಾಸುದೇವನ್ ನಾಯರ್ ಅವರ ಬಹುಚರ್ಚಿತ ಕಿರುಕಾದಂಬರಿ ಇದು. 'ಮಂಜು' ಈ ಕಾದಂಬರಿಯಲ್ಲಿ ಒಂದು ಪಾತ್ರವೂ ಹೌದು, ಪ್ರತಿಮೆಯೂ ಹೌದು. ಬದುಕಿನ ಪರಿಪಾಠಗಳಿಗೆ ಅನ್ವಯಿಸುವುದಾದರೆ 'ಮಂಜು' ಇಲ್ಲಿ ಒಂದು ಘಟ್ಟದಲ್ಲಿ ದಟ್ಟವಾಗಿ ಕವಿದು ಮತ್ತೆ ಮೆಲ್ಲನೆ ಸರಿದು ಇಲ್ಲವಾಗಿಬಿಡುವ ಮಾಯೆಯಂಥದು. ಹೀಗೆ ಕವಿದು ಕೊಳ್ಳುವ ನಂತರ ಸರಿಯುವ ಹೊಸ ಅಯಾನು ನಿರ್ಮಾಣವಾಗುವ ಹಂತಗಳಲ್ಲಿ ಹಲವರ ಬದುಕಿನ ನೋವು-ನಲಿವುಗಳು ಮಿಳಿತಗೊಂಡಿವೆ. ವಿಮಲಾ, ಬುದ್ಧು, ಸರ್ದಾರ್‌ಜಿ... ಪ್ರತಿಯೊಬ್ಬರೂ ತಂತಮ್ಮ ನೆಲೆಗಳಲ್ಲೇ ಒಂದೊಂದು ರೀತಿ ಕಾಯುತ್ತಿದ್ದಾರೆ. ಈ ಕಾಯುವ ತೀವ್ರತೆ 'ನೈನಿತಾಲ್'ನ ಸುಂದರ ಚಿತ್ರಣದ ಮಿಳಿತಗೊಂಡು ಒಂದೊಂದೂ ರೂಪಕವಾಗಿ ಬಿಡುತ್ತದೆ. ಒಂದು ಒಳ್ಳೆಯ ಕವನ ಓದಿದ ಅನುಭವ ಈ ಕಾದಂಬರಿ ನೀಡುತ್ತದೆಯಾದ್ದರಿಂದ ಇಲ್ಲಿನ ನಿರೂಪಣೆಯಲ್ಲಿ ಕಾವ್ಯದ ಧ್ವನಿಶಕ್ತಿ ಬೆರೆತಿದೆ.

**ಕುಮಾರವ್ಯಾಸ ಸಮೀಕ್ಷೆ**

*ಸಿ. ಪಿ. ಕೆ.*

**ಪುಟ : ೧೧೨ ಬೆಲೆ : ರೂ. ೬೦**

**ಚೇತನ ಬುಕ್ ಹೌಸ್,** ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು - ೨೪



ಸಿ.ಪಿ.ಕೆ.ಯವರು ಕುಮಾರವ್ಯಾಸ ಭಾರತವನ್ನು ಕುರಿತು 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ'ಯ ಐದನೆಯ ಸಂಪುಟದಲ್ಲಿ ಪ್ರಕಟಗೊಳಿಸಿದ ಸುದೀರ್ಘ ಲೇಖನ ಈಗ ಪುಸ್ತಕದ ರೂಪ ತಾಳಿದೆ. ಇದು ಕುಮಾರವ್ಯಾಸನ ಕುರಿತಂತೆ ಸಮಗ್ರವಾದ ಕಾವ್ಯ ಸಮೀಕ್ಷೆ. ಆಕರ, ರೀತಿ, ಸನ್ನಿವೇಶ ನಿರ್ಮಾಣ, ವರ್ಣನೆ, ಪಾತ್ರ, ರಚನೆ, ಶೈಲಿ – ಹೀಗೆ ತುಂಬ ಅಚ್ಚುಕಟ್ಟಾಗಿ ವಿಭಾಗಿಸಿಕೊಂಡು ಸಮೀಕ್ಷೆ ಮಾಡಿದ್ದಾರೆ. ಕುಮಾರವ್ಯಾಸ ಬಹುಜನಜನಿತ ಕವಿಯಾದ್ದರಿಂದ ಆತನ ಬಗ್ಗೆ ನಡೆದಿರುವ ಸಾಕಷ್ಟು ಅಧ್ಯಯನಗಳು ನಡೆದಿವೆ. ಪ್ರಸ್ತುತ ಈ ಸಮೀಕ್ಷೆಯಲ್ಲಿ ಆ ಎಲ್ಲ ಅಧ್ಯಯನಗಳನ್ನು ಸಿ.ಪಿ.ಕೆ. ಕ್ರೋಡೀಕರಿಸಿಕೊಂಡಿದ್ದರೂ ತಮ್ಮದೇ ಆದ ಹೊಸ ವಿಚಾರ - ವಿಮರ್ಶೆಗಳನ್ನು ಸೇರಿಸಿದ್ದಾರೆ.

–ಎನ್. ಸಿ ಮಹೇಶ್, ಸೇಂಟ್ ಆನ್ಸ್ ವಿಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ಎರಡು ಸಂಸ್ಕೃತಿಗಳನ್ನು ಮುಖಾಮುಖಿಯಾಗಿಸುವ ಕಥೆಗಳು

## ಡಿಟೂರ್ ಟು ಹ್ಯಾಪಿನೆಸ್ ಅಂಡ್ ಅದರ್ ಸ್ಟೋರೀಸ್

ಅಮೆರಿಕಾದ ಸೇಂಟ್ ಲೂಯಿಯಲ್ಲಿ ನೆಲೆಸಿರುವ ಡಾ॥ ಅಶ್ವತ್ಥ್ ಎನ್. ರಾವ್ ಅವರು ಭಾರತದಲ್ಲಿ ವೈದ್ಯಕೀಯ ಕಲಿತು ಶಸ್ತ್ರಚಿಕಿತ್ಸೆಯಲ್ಲಿ ಉನ್ನತ ವ್ಯಾಸಂಗಕ್ಕೆ ಅಮೆರಿಕಾಕ್ಕೆ ಹೋದವರು ವಿದ್ಯಾಭ್ಯಾಸ ಮುಗಿಸಿ ಅಲ್ಲೇ ಉದ್ಯೋಗಸ್ಥರಾಗಿ ನಾಲ್ಕು ದಶಕಗಳನ್ನು ಕಳೆದಿದ್ದಾರೆ. ಭಾರತದಿಂದ ಅಮೆರಿಕಾಕ್ಕೆ ಉದ್ಯೋಗ ಅರಸಿ, ವಿದ್ಯೆ ಅರಸಿ ಅಥವಾ ಪ್ರವಾಸಿಗಳಾಗಿ ಹೋಗುವವರಿಗೆಲ್ಲ ಅಶ್ವತ್ಥ್ ಅವರ ಆತಿಥ್ಯ ಮತ್ತು ಆದರ. ಇದಕ್ಕೆ ಮುಖ್ಯ ಕಾರಣ ಅಶ್ವತ್ಥ್‌ರಿಗಿರುವ ಭಾರತದ ಮೇಲಿನ ಸೆಳೆತ. ಆದಾಗ್ಯೂ ಯಾವ ಬದುಕು ಆದರ್ಶ ಎಂಬುದರ ಬಗ್ಗೆ ಅವರ ಮನಸ್ಸು ಇನ್ನೂ ತಾಕಲಾಟದಲ್ಲೇ ಇದೆ : ಅಮೆರಿಕಾದ ರೀತಿ ಸರಿಯೊ ? ಭಾರತದ ವಿಧಾನ ಸಸಿನವೋ ?

ಈ ತರಹದ ಒಳ ತುಮುಲಗಳನ್ನು ಪ್ರಕಟಿಸುವ ಹನ್ನೊಂದು ಕಥೆಗಳನ್ನೊಳಗೊಂಡ ಇವರ 'ಡಿಟೂರ್ ಟು ಹ್ಯಾಪಿನೆಸ್' ಎಂಬ ಕಥಾ ಸಂಕಲನ ಇತ್ತೀಚೆಗೆ ಪ್ರಕಟವಾಯಿತು. ಈ ಕಥೆಗಳ ಮೂಲಕ ಅಶ್ವತ್ಥ್ ಏನು ಹೇಳುತ್ತಿದ್ದಾರೆ ಎಂಬುದರ ಒಂದು ಪರಿಚಯವನ್ನು ಇಲ್ಲಿ ನೀಡಲಾಗಿದೆ.




ಮೊದಲನೆಯದಾಗಿ, ಪ್ರಖ್ಯಾತ ಅಮೆರಿಕಾದ ಕಥೆಗಾರರಾದ ಎಡ್ಗರ್ ಅಲನ್ ಪೊ ಹಾಗೂ ನೆಥೇನಿಯಲ್ ಹಾಥಾರ್ನ್‌ರ ಕಥೆಗಳನ್ನು ಕುರಿತು ವಿಮರ್ಶಕ ಪಾಲ್ ಎಲ್ಮರ್ ಮೋರ್ ಹೇಳಿರುವ ಮಾತೊಂದು ನೆನಪಿಗೆ ಬರುತ್ತದೆ : ''ಹಾಥಾರ್ನ್ ಮತ್ತು ಪೊ ಅವರ ಕಥೆಗಳಲ್ಲಿ ಒಂದು ಬಗೆಯ ಒತ್ತಡ ಮತ್ತು ವಾಸ್ತವತೆ ಇದೆ ; ಇದಕ್ಕೆ ಕಾರಣವೆಂದರೆ ಈ ಕಥೆಗಾರರು ತಮ್ಮ ಜನಗಳ ನೈತಿಕ ಅನುಭವದ ಆಳದಿಂದ ಬರೆಯುವುದು.''

ರಾವ್ ಅವರ ಕಥೆಗಳನ್ನು ಗಮನಿಸುವಾಗ ಈ 'ನೈತಿಕ ಅನುಭವ'ದ ನೆಲೆಯಿಂದ ಅವು ಮೂಡಿರುವುದು ತಿಳಿಯುತ್ತದೆ. ಸುಮಾರು ಇನ್ನೂರು ವರ್ಷಗಳಿಂದ ಸಣ್ಣಕಥೆ ಬೇರೆ ಬೇರೆ ಲೇಖಕರಿಂದ ಬರೆಸಿಕೊಳ್ಳುತ್ತಾ ನಾನಾ ಅವತಾರಗಳನ್ನೆತ್ತಿ ನಿತ್ಯವೂ ಆವಿಷ್ಕಾರಗೊಂಡು ಸತತವಾಗಿ ನಮ್ಮ ಕಣ್ಣಮುಂದೆ ವಿಕಸಿಸುತ್ತಲೇ ಇದೆ. ಹಾಗಾಗಿ ಈ ಪ್ರಕಾರವನ್ನು ಇಂದು ಕೈಗೆತ್ತಿಕೊಳ್ಳುವವರಿಗೆ ಎಂಟೆದೆ ಬೇಕು. ಆದರೆ ಯಾವ ದಿಗಿಲಿಗೂ ಒಳಗಾಗದೆ ಅತ್ಯಂತ ಸಹಜವಾದ ರೀತಿಯಲ್ಲಿ ರಾವ್ ಅವರು ತಮ್ಮ ಅನುಭವಗಳನ್ನು ಅಭಿವ್ಯಕ್ತಿಸಿದ್ದಾರೆ.

ವಸಾಹತೋತ್ತರ ಸಂದರ್ಭದಲ್ಲಿ ಜಗತ್ತನ್ನು ಅರ್ಥ ಮಾಡಿಕೊಳ್ಳಲು ಬರಹಗಾರನಾದವನು ತಾರತಮ್ಯ, ಅನ್ಯಾಯ, ಅನ್ಯೀಕರಣ ಇತ್ಯಾದಿಗಳ ಮುಖಾಮುಖಿಯಾಗುತ್ತಿರುತ್ತಾನೆ. 'ನೆನಪು' ಕೂಡ ಅವನ ವಿಶ್ವಾಸದಲ್ಲಿ ಪ್ರಧಾನವಾಗಿಯೇ ಕಾಣಿಸಿಕೊಳ್ಳುತ್ತದೆ. ದುಃಖದ ಮೇಲುದವನ್ನು ಕಿತ್ತೊಗೆದು, ಪರಿಸ್ಥಿತಿಯನ್ನು ದಾಟಿ ಮುಂದೆ ಹೋಗಲು 'ನೆನಪು' ಬೇಕಾಗುತ್ತದೆ. ನೆನಪು ಮಾಡಿಕೊಳ್ಳುವುದೆಂದರೆ ಕೇವಲ ಅಂತರ್‌ವೀಕ್ಷಣೆ ಹಾಗೂ ಹಿನ್ನೋಟದ ತಣ್ಣನೆಯ ಕ್ರಿಯೆಯಲ್ಲ. ಅದು ಅತ್ಯಂತ ನೋವಿನ, ಸಂಕಟದ ಕ್ರಿಯೆ. ಬೇರೆ ಬೇರೆಯಾದ ಅಂಗಾಂಗಗಳನ್ನು ಒಟ್ಟುಗೂಡಿಸುವ, ತೆಕ್ಕೆಗೆ ತೆಗೆದುಕೊಳ್ಳುವ ವಿಧಾನ. ಈ ಮಾರ್ಗದಿಂದಲೇ ವರ್ತಮಾನದ ದಿಗಿಲು ಮತ್ತು ಆತಂಕವನ್ನು ಅರಿತುಕೊಳ್ಳಲು ಸಾಧ್ಯವಾಗುವುದು.

■ **ಪ್ರೊ॥ ಸಿ. ನಾಗಣ್ಣ**

ಅಶ್ವತ್ಥ್ ರಾವ್ ಅವರ ಕಥೆಗಳಲ್ಲಿ ನೆನಪಿನ ಇನ್ನೊಂದು ಮುಖವಾಗಿ 'ಅಂತಃಕರಣ' ಕಾಣಿಸಿಕೊಳ್ಳುತ್ತದೆ. ಮುನ್ನುಡಿಯಲ್ಲಿ ಎಚ್. ಎಸ್. ಶಿವಪ್ರಕಾಶ್ ಸರಿಯಾಗೇ ಗುರ್ತಿಸಿರುವಂತೆ ಅಶ್ವತ್ಥ್‌ರ ಕಥೆಗಳು ಪಾಶ್ಚಾತ್ಯ ಕಥೆಗಳ ಹಾಗೆ ಇವತ್ತಿನ ಮಾದರಿಯನ್ನನುಸರಿಸಿ ಈ ಕ್ಷಣದ ಥಳಕನ್ನು ಪ್ರತಿಫಲಿಸುವ ಆತ್ಮವಿಹೀನ ಕೃತಿಗಳಲ್ಲ.

ಇಲ್ಲಿ ಬರುವ ಮುಖ್ಯ ಪಾತ್ರಗಳೆಲ್ಲ ಎರಡು ಸಂಸ್ಕೃತಿಯ ವಾರಸುದಾರರಾಗಿದ್ದಾರೆ. ಒಂದು ಅವರು ಬಿಟ್ಟುಬಂದ ಸಂಸ್ಕೃತಿ, ಇನ್ನೊಂದು ಅವರು ಕಟ್ಟಿಕೊಂಡ ಸಂಸ್ಕೃತಿ. ಎರಡು ಸಂಸ್ಕೃತಿಗಳ ಮುಖಾಮುಖಿಯೇ ಬಹಳಷ್ಟು ಇತ್ತೀಚಿನ ಸಾಹಿತ್ಯದ ಬಂಡವಾಳವಾಗಿ ಇರುವುದನ್ನು ಕಾಣುತ್ತೇವೆ. ಆದರೆ ಎರಡು ಸಂಸ್ಕೃತಿಗಳನ್ನು ಯಾಂತ್ರಿಕವಾಗಿ ಮುಖಾಮುಖಿಯಾಗಿಸಿದರೆ ಮಹತ್ವದ ಪರಿಣಾಮವುಂಟಾಗದು ; ಮುಖ್ಯ ಸಂಗತಿಯೆಂದರೆ, ವ್ಯಕ್ತಿಗಳ ಸನ್ನಿವೇಶಕ್ಕೆ ಕ್ಷ - ಕಿರಣ ಬೀರುವಂಥ ತೀಕ್ಷ್ಣತೆ (ಕಲಾವಿದನ ದೃಷ್ಟಿಯಲ್ಲಿ) ಗೋಚರವಾಗಬೇಕು. ಈ ಕತೆಗಳಲ್ಲಿ ಅದು ಕಂಡುಬರುವುದರಿಂದಲೇ ಅವುಗಳಲ್ಲೊಂದು ಹೊಸತನವಿದೆ ; ಜೀವಂತಿಕೆಯಿದೆ. ''ರಾವ್ ಅವರ ಪಾತ್ರಗಳು ಅನುಭವದ ಮೂಲಕ ಮಾಗುತ್ತವೆ''ಯೆಂದು ಶಿವಪ್ರಕಾಶ್ ಸರಿಯಾಗಿಯೇ ಗುರ್ತಿಸಿದ್ದಾರೆ.

'ಮಾನವೀಯತೆ' ರಾವ್ ಅವರ ಚಿಂತನೆಯ ಮೂಲ ದ್ರವ್ಯವಾಗಿದೆ. ಎರಡು ಸಂಸ್ಕೃತಿಗಳ ಮುಖಾಮುಖಿಯನ್ನು ನಾವಿಲ್ಲಿ ಕಾಣುತ್ತೇವೆಯಾದರೂ ಕಡೆಗೂ ಗೆಲ್ಲಬೇಕಾಗಿರುವುದು ಮಾನವೀಯ ಸಂಸ್ಕೃತಿಯೇ ಎಂಬುದು ಸ್ಪಷ್ಟವಾಗುತ್ತದೆ. 'ಡಿಟೂರ್ ಟು ಹ್ಯಾಪಿನೆಸ್' ಎಂಬ ಮೊದಲನೆಯ ಕಥೆಯೇ ಇದಕ್ಕೆ ಉತ್ತಮ ಉದಾಹರಣೆ. 'ಮೋಡ ಕರಗಿದ ಮೇಲೆ' ಎಂಬ ತಮ್ಮ ಕನ್ನಡ ಕಥಾಸಂಕಲನದಲ್ಲಿ ಈ ಕಥೆಯನ್ನು 'ಹರ್ಷ ವಾಯಿತು' ಎಂದು ಅನುವಾದಿಸಿದ್ದಾರೆ.

ಅರವತ್ತು ವರ್ಷದ ಶಾಂತಾಬಾಯಿ ಈ ಕಥೆಯ ಕೇಂದ್ರ ಪಾತ್ರ. ಅಮೆರಿಕಾದಲ್ಲಿರುವ ತನ್ನ ಮಗನ ಮನೆಗೆ ಅವಳು ಮೊದಲ ಬಾರಿಗೆ ವಿಮಾನ ಹತ್ತಿ ಪ್ರಯಾಣಿಸಿ ಹೋಗುತ್ತಾಳೆ; ಭಾರತದಲ್ಲಿ ತನ್ನ ಮನೆಮಠವೆಲ್ಲವನ್ನೂ ಮಾರಿ ತಾನು ಹೊಸದೊಂದು ಅಧ್ಯಾಯವನ್ನು ತೆರೆಯುತ್ತಿರುವುದಾಗಿ ಅವಳಿಗೆ ಸಂಭ್ರಮ. ಆದರೆ ಅಲ್ಲಿಗೆ ಹೋದ ಬಳಿಕ ಮಗ ಮತ್ತು ಸೊಸೆ 'ಸಂಬಳವಿಲ್ಲದ ಒಬ್ಬ ಸಹಾಯಕಿ ಸಿಕ್ಕಿದಳು' ಎಂಬಂತೆ ನೋಡಿಕೊಳ್ಳುತ್ತಾರೆ. ಶಾಂತಾಬಾಯಿಗೆ ಭ್ರಮನಿರಸನವಾಗುತ್ತದೆ. ಮನೆ ಕೆಲಸ ಮಾಡಿ ಸುಸ್ತಾದಾಗ ಗಾಳಿ ಸೇವನೆಗೆಂದು ಆಕೆ ಸಮೀಪದ 'ಬ್ಲೇರ್ ಪಾರ್ಕ್'ಗೆ ಹೋಗುವುದು ರೂಢಿಯಾಗುತ್ತದೆ. ಆ ಪಾರ್ಕಿನಲ್ಲಿ ಇಳಿವಯಸ್ಸಿನ ವ್ಯಕ್ತಿಯೊಬ್ಬ ನಿತ್ಯವೂ ಗೊತ್ತಾದ ವೇಳೆಯಲ್ಲಿ ಹವಾ ಸೇವನೆಗೆ ಬರುವುದು ತಿಳಿಯುತ್ತದೆ. ಶಾಂತಾಬಾಯಿ ಆತನನ್ನು ಗಮನಿಸುತ್ತಾಳೆ; ಆತ ಈಕೆಯನ್ನು ಗಮನಿಸುತ್ತಾನೆ. ಒಮ್ಮೆ ಪಾರ್ಕಿನಲ್ಲಿ ನಡೆಯುವಾಗ ಆತ ಬಿದ್ದು ಕಾಲಿಗೆ ಪೆಟ್ಟು ಮಾಡಿಕೊಂಡಾಗ ಪಾರ್ಕಿನ ಭದ್ರತಾ ಸಿಬ್ಬಂದಿಯ ಗಮನಕ್ಕೆ ತಂದಾಗ ಅವನನ್ನು ಸಿಬ್ಬಂದಿ ಆಸ್ಪತ್ರೆಗೆ ಸೇರಿಸುತ್ತಾರೆ. ಅವನು ದಾಖಲಾದ ಆಸ್ಪತ್ರೆಯನ್ನು ಪತ್ತೆ ಮಾಡಿಕೊಂಡು ಶಾಂತಾ ಹೋದಾಗ ಮಾರ್ಟಿನ್ ಪಿಯರ್ಸ್‌ಗೆ ಆಶ್ಚರ್ಯವಾಗುತ್ತದೆ. ಮಾರ್ಟಿನ್ನನ ಮನಸ್ಸಿನಲ್ಲಿ ಆಕೆಯ ಬಗ್ಗೆ ಕೃತಜ್ಞತೆ ಮೂಡುತ್ತದೆ. ಮುಂದೆ ಶಾಂತಾಬಾಯಿ ಕಾಯಿಲೆ ಬಿದ್ದು ಆಸ್ಪತ್ರೆಗೆ ದಾಖಲಾದಾಗ ಮಾರ್ಟಿನ್ ಅವಳು ಸೇರಿರುವ ಆಸ್ಪತ್ರೆಯನ್ನು ಪತ್ತೆಮಾಡಿದಾಗ ಅವಳಿಗೆ ಆಶ್ಚರ್ಯವಾಗುತ್ತದೆ.

ಮಗ ಮತ್ತು ಸೊಸೆಯ ಧೋರಣೆಯಿಂದ ಬೇಸತ್ತ ಶಾಂತಾಬಾಯಿ ಊರಿಗೆ ಹೊರಡುವುದಾಗಿ ನಿಶ್ಚಯಿಸುತ್ತಾಳೆ. ಊರಲ್ಲಿ ಮನೆಮಠ ವಾರಸುದಾರರು ಯಾರಾದರೂ ಇರುವರೆ ಎಂದು ಕೇಳುತ್ತಾನೆ ಮಾರ್ಟಿ; ಯಾರೂ ಇಲ್ಲವೆಂದು ಉತ್ತರಿಸುತ್ತಾಳೆ ಶಾಂತಾಬಾಯಿ. ಹಾಗಿದ್ದ ಮೇಲೆ ತನ್ನ ಜೊತೆ ಉಳಿಯಬಹುದೆಂಬುದು ಅವನ ಸಲಹೆ. ಆದರೆ ಶಾಂತಾ ಆ ಕ್ಷಣದಲ್ಲಿ ನಿರ್ಧಾರ ತೆಗೆದುಕೊಳ್ಳುವುದಿಲ್ಲ. ಮುಂದೆ

ಮನೆಯಲ್ಲಿ ಪರಿಸ್ಥಿತಿ ಬಿಗಡಾಯಿಸಿ ಅವಳು ಹೊರಡಲೇಬೇಕು ಎಂದಾಗ ಮಗ ಮತ್ತು ಸೊಸೆ ಅವಳನ್ನು ವಿಮಾನ ಹತ್ತಿಸಲು ವಿಮಾನ ನಿಲ್ದಾಣಕ್ಕೆ ಬರುತ್ತಾರೆ. ಮಾರ್ಟಿನ್ ಕೂಡ ಬಂದಿರುತ್ತಾನೆ. ಇನ್ನೇನು ವಿಮಾನ ಹತ್ತಬೇಕು ಅನ್ನುವಷ್ಟರಲ್ಲಿ ಅವಳು ಮನಸ್ಸು ಬದಲಾಯಿಸಿ ಮಾರ್ಟಿಯನ್ನು ಕೂಡಿಕೊಳ್ಳುತ್ತಾಳೆ. ಮಗ ಸೊಸೆಯರಿಗೆ ದಿಗ್ಭ್ರಾಂತಿಯಾಗುತ್ತದೆ.

ಮಾರ್ಟಿ ಮತ್ತು ಶಾಂತಾ ಪರಸ್ಪರರನ್ನು ಅರ್ಥಮಾಡಿಕೊಂಡು ಹತ್ತಿರವಾಗುವುದನ್ನು ಬಹಳ ಸೂಕ್ಷ್ಮವಾಗಿ ಲೇಖಕರು ತಂದಿದ್ದಾರೆ. ಈ ಸಂಬಂಧ ಜುಲುಮಿಯಿಂದ ಆದದ್ದು ಎನ್ನಿಸುವುದೇ ಇಲ್ಲ. ಅಷ್ಟರ ಮಟ್ಟಿಗೆ ಸಹಜವಾಗಿ ಘಟನೆಗಳು ನಡೆದು ಮೈಬಣ್ಣ, ಸಾಂಸ್ಕೃತಿಕ ಭಿನ್ನತೆ, ಧರ್ಮದ ಪ್ರತ್ಯೇಕತೆ ಎಲ್ಲವನ್ನೂ ಮೀರಿ ಶಾಂತಾ-ಮಾರ್ಟಿನ್ನರು ಒಂದಾಗುತ್ತಾರೆ. ಇಲ್ಲಿ ಜಾಗೃತವಾಗಿರುವುದು ಅಂತಃಕರಣವೇ ಹೊರತು ಬೇರೇನಲ್ಲ.

'ದ ಡ್ರೀಮ್ ಕೇಮ್ ಟ್ರೂ' ಕಥೆಯಲ್ಲಿ ಕಥಾನಾಯಕ ಶಂಕರ್‌ಸ್ವಾಮಿ ಅಮೆರಿಕಾದಲ್ಲಿ ಪತ್ನಿ ಅರುಣ ಕಾಲವಾದ ಬಳಿಕ ಭಾರತದಲ್ಲಿ ಮಗಳು ವಿದ್ಯೆ ಕಲಿಯಲು ಸಹಾಯಮಾಡುವ ಗೆಳೆಯ ಶ್ರೀಧರನಿಗೆ ಉಪಕಾರಮಾಡಲು ತನ್ನ ಮಗಳ ವಯಸ್ಸಿನ ದಿವ್ಯಳಿಗೆ ಆಪ್ತನಾಗುತ್ತಾನೆ. ಈ ಸಾಮೀಪ್ಯವನ್ನೇ ಶ್ರೀಧರ ಮತ್ತು ಪಾರ್ವತಿ ತಪ್ಪಾಗಿ ತಿಳಿದುಕೊಂಡು ಶಂಕರ್‌ಸ್ವಾಮಿಯೇ ದಿವ್ಯಳನ್ನು ಇಷ್ಟಪಟ್ಟಿರಬಹುದೆಂದು ತೀರ್ಮಾನಿಸುತ್ತಾರೆ ಮತ್ತು ಈ ಸಂಬಂಧದ ಬಗ್ಗೆ ಸಮಾಜ ಆಡಿಕೊಳ್ಳುತ್ತಿರುವುದರಿಂದ ಅದನ್ನು ತಪ್ಪಿಸಲು ಶಂಕರ್‌ಸ್ವಾಮಿ ಆದಷ್ಟು ಬೇಗ ಒಂದು ತೀರ್ಮಾನ ತೆಗೆದುಕೊಳ್ಳಬೇಕೆಂದು ನಿರೀಕ್ಷಿಸುತ್ತಾರೆ. ವಾಸ್ತವವಾಗಿ ಶಂಕರ್‌ಸ್ವಾಮಿ ದಿವ್ಯಳನ್ನು ಡಾ॥ ಪ್ರಕಾಶ್‌ನಿಗೆ ಪರಿಚಯಿಸಿದಾಗಿನಿಂದ ಅವರು ಪರಸ್ಪರ ಪ್ರೀತಿಸಿರುವುದನ್ನು ಕಂಡು ಆ ಸಂಬಂಧವನ್ನು ಊರ್ಜಿತಗೊಳಿಸಲು ಪ್ರಯತ್ನಿಸುತ್ತಾನೆ. ದಿವ್ಯಳ ಜೀವನ ಹಾಗೂ ತನ್ನ ಮಗಳಿಗೆ ದಾಯಿಯಾಗಿ ಒದಗಿಬಂದ ನೀಲಮ್ಮಳ ಬದುಕು – ಎರಡನ್ನೂ ನೇರ್ಪುಗೊಳಿಸಿ ಶಂಕರ್‌ಸ್ವಾಮಿ ಮತ್ತೆ ಅಮೆರಿಕಾಕ್ಕೆ ಹೊರಡುವ ಸೂಚನೆಯೊಂದಿಗೆ ಕಥೆ ಮುಕ್ತಾಯವಾಗುತ್ತದೆ.

ಸಂಬಂಧಗಳು ಬೆಸೆದು ಬದುಕು ನೇರ್ಪಾಗುವ ಕ್ರಮವನ್ನು ಬಹುತೇಕ ಕಥೆಗಳಲ್ಲಿ ನಾವು ಕಾಣುತ್ತೇವೆ. 'ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್'ನಲ್ಲಿ ತನ್ನ ಮಲತಾಯಿ ವೈಭವಿಯನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ದಂಥ ಬಿಂದು ವೈಭವಿ ತನ್ನ ಪೂರ್ವದ ಕಥೆಯನ್ನು ವಿಸ್ತಾರವಾಗಿ ನಿರೂಪಕನಿಗೆ ಹೇಳುವಾಗ ಮರೆಯಲ್ಲಿ ನಿಂತು ಕೇಳಿಸಿಕೊಂಡು ಮನಸ್ಸು ಪರಿವರ್ತನೆಯಾಗಿ ಆಕೆಯನ್ನು ತಾಯಿಯೆಂದೇ ಸ್ವೀಕರಿಸುತ್ತಾಳೆ. ಮೊದಮೊದಲು ಅಂತಸ್ತು ವಿಷಮವೆಂದು ನಿರಾಕರಿಸಲ್ಪಟ್ಟ ವ್ಯಕ್ತಿಯೊಬ್ಬ ತನ್ನ ಸ್ವಸಾಮರ್ಥ್ಯದಿಂದ ದುಡಿದು ಬದುಕಿನಲ್ಲಿ ಯಶಸ್ಸು ಸಾಧಿಸುವಾಗ ಅವನು ಆಸೆಪಟ್ಟಿದ್ದ ಹೆಣ್ಣುಮಗಳು ವಿಧವೆಯಾದ ನಂತರ ಮತ್ತೆ ಆ ವ್ಯಕ್ತಿಯ ಬಾಳಸಂಗಾತಿಯಾಗುವಂಥ ವಾಸ್ತವವನ್ನು ಹೇಳುವ ಕಥೆ 'ದ ಹಿಡನ್ ಮೆಸೇಜ್'. 'ಟು ಪೀಸ್ ಫ್ರಮ್ ದ ಸೇಮ್ ಪಾಡ್' ಕಥೆಯಲ್ಲಿ ಸಹೋದರಿಯರಾದ ಸುಮಿತಾ ಮತ್ತು ಶೀಲಾ ಭಿನ್ನ ಪ್ರಕೃತಿಯವರಾಗಿರುತ್ತಾರೆ. ತಂದೆ ತಾಯಿಯರು ಹಾಕಿದ ಗೆರೆಯನ್ನು ಧೈರ್ಯವಾಗಿ ದಾಟುವ ಎರಡನೇ ಮಗಳು ಶೀಲಾ ಜೀವನದಲ್ಲಿ ರಾಬರ್ಟ್ ಎಂಬ ಅನ್ಯ ಧರ್ಮೀಯನನ್ನು ಮದುವೆಯಾಗಿ ಕಡೆಗೆ ತನ್ನ ತಾಯಿಯವರೆಗೂ ಸಹಾಯ ಮಾಡುತ್ತಾ ಗೆಲ್ಲುತ್ತಾಳೆ. ಅಪ್ಪ ಅಮ್ಮನಿಗೆ ವಿಧೇಯಳಾಗಿರಬೇಕಾದ ಒತ್ತಡದಲ್ಲಿ ನಲುಗುವ ಸುಮಿತಾ ಮದುವೆಯನ್ನೇ ಕಾಣದೆ ಸೊರಗುತ್ತಾಳೆ. ತಂದೆ ತಾಯಿಗಳು, ''ನಿನ್ನ ಜೀವನ ನೀನು ನೋಡಿಕೋ'' ಎಂದು ಹಸಿರು ನಿಶಾನೆ ತೋರಿಸುವಷ್ಟರಲ್ಲಿ ಅವಳಿಗೆ ತಾನು ಹಣ್ಣಾಗಿರುವೆ ಎನಿಸುತ್ತದೆ. ಜನರನ್ನು ಹೀಗೇ ಎಂದು ಅರ್ಥಮಾಡಿಕೊಳ್ಳಲು ಬರುವುದಿಲ್ಲ ಎಂಬ ಸರಳ ಸತ್ಯ ಇಲ್ಲಿ ವ್ಯಕ್ತವಾಗಿದೆ.

'ಲೈಕ್ ಎ ರೋಸ್' ಎಂಬ ಕಥೆಯಲ್ಲೂ ಅಷ್ಟೆ. ಕಷ್ಟದಲ್ಲಿ ಓದಿ ಬಹಳ ಆದರ್ಶ ಮಾತನಾಡುತ್ತಿದ್ದ ರಮೇಶ್ ನಾಯಕ್ ಅವನ ಸಹಪಾಠಿ ತೇಜಸ್ವಿಯ ತರಹ ಐಹಿಕವಾದಿಯಾಗಲಾರ ಎಂದುಕೊಳ್ಳುತ್ತಿರುವಾಗ ಮುಂದೆ ಅವರ ವಿದ್ಯಾಭ್ಯಾಸ ಮುಗಿದು ಉದ್ಯೋಗಪರ್ವಕ್ಕೆ ಕಾಲಿಡುವಷ್ಟರ ವೇಳೆಗೆ ಬದಲಾಗಿರುತ್ತಾನೆ. ರಮೇಶ್ ಲೌಕಿಕವಾಗಿ, ತೇಜಸ್ವಿ ಆದರ್ಶವಾದಿಯಾಗಿ ಪರಿವರ್ತಿತವಾಗುತ್ತಾರೆ.

ಹಣದ ಹುಚ್ಚು ಆರಾಧನೆಯಿಂದಾಗಬಹುದಾದ ಅತಿರೇಕ ಹಾಗೂ ಅನಾಹುತವನ್ನು 'ಜಾಕ್‌ಪಾಟ್' ಕಥೆ ನಿವೇದಿಸಿದರೆ, 'ಓ, ಡಾಕ್ಟರ್ !' ಅಪಘಾತದಲ್ಲಿ ಕಾಲು ಕಳೆದುಕೊಂಡಿದ್ದ ಹರೆಯದ ಹುಡುಗಿಯೊಬ್ಬಳು ಮೂರು ವರ್ಷಗಳ ನಂತರ ಯಾವುದೋ ರೆಸ್ಟೊರೆಂಟ್‌ನಲ್ಲಿ ವೇಯ್ಟ್ರೆಸ್ ಆಗಿ ಮಾಮೂಲಿ ಜನಗಳಂತೆ ತನ್ನ ಕಾಲು ಮೇಲೆ ತಾನು ನಿಂತುಕೊಳ್ಳಬಲ್ಲೆನೆಂದು ತೋರಿಸಿದ್ದರಿಂದ ಅವಳ ಶಸ್ತ್ರ ಚಿಕಿತ್ಸೆ ಮಾಡಿದ ನಿರೂಪಕ ವೈದ್ಯನಿಗೆ ತೃಪ್ತಿಯೆನಿಸುತ್ತದೆ.

ಹುಟ್ಟಿದ ಊರಿನ ಸೆಳೆತವನ್ನು ಅನನ್ಯವಾಗಿ ಚಿತ್ರಿಸುವ ಕಥೆ 'ಡೌನ್ ದ ಮೆಮೊರಿ ಲೇನ್'. ತಾನು ಹಲವು ವರ್ಷಗಳ ಹಿಂದೆ ಬಿಟ್ಟುಹೋದ ಊರಿನ ಮರುದರ್ಶನಕ್ಕೆಂದು ಬರುವ ಕಥಾನಾಯಕನಿಗೆ ಎದುರಾಗುವುದು ಬದಲಾದ ಚಿತ್ರ. ಕೊಳಕು, ಕಸ, ಅಸ್ತವ್ಯಸ್ತತೆ ತಾಂಡವವಾಡುವ ಸಂದರ್ಭ. ಮೊದಲಿನ ಜಾಗಗಳು ಸಂಪೂರ್ಣವಾಗಿ ಬದಲಾಗಿವೆ; ಮನೆಮಠಗಳು ಬದಲಾಗಿವೆ. ಯಾವುದೂ ಮೊದಲಿದ್ದಂತೆ ಗೋಚರವಾಗದು. ಇಂಥ ಪರಿಸ್ಥಿತಿಯಲ್ಲಿ ನಿರೂಪಕ ಹೇಳಲಾರದ ದುಃಖಕ್ಕೆ ಒಳಗಾಗುತ್ತಾನೆ.

ಅಶ್ವತ್ಥ್ ರಾವ್ ಅವರು ಅತ್ಯಂತ ಪ್ರಾಮಾಣಿಕತೆಯಿಂದ ಕಲಾತ್ಮಕವಾಗಿ ಈ ಕಥೆಗಳನ್ನು ನಿರೂಪಿಸಿದ್ದಾರೆ. ಪ್ರಾಮಾಣಿಕತೆಯೇ ಉತ್ತಮ ಕಲೆಗೆ ಮೂಲ ನೆಲೆ; ಅದಿಲ್ಲದಿದ್ದರೆ ನಾವು ಹೇಳುವ ಚಮತ್ಕಾರದ ಮಾತುಗಳು ನಿರ್ಜೀವವಾಗುತ್ತವೆ. ''ಅಮೆರಿಕಾದಲ್ಲಿ ನೆಲೆಸಿ ನಲವತ್ತು ವರ್ಷಗಳಾದರೂ ಈವತ್ತಿಗೂ ಕೂಡ ಯಾವ ಮಾದರಿ ಸರಿ ಎಂದು ತೀರ್ಮಾನಿಸುವುದಕ್ಕಾಗುವುದಿಲ್ಲ'' ಎಂದು ರಾವ್ ಹನಿಗಣ್ಣಾಗಿ ಹೇಳುತ್ತಾರೆ. ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ನಡುಮನೆಯಲ್ಲಿ ತಲೆಯೆತ್ತುತ್ತಿರುವ ಅಮೆರಿಕಾ ನಮ್ಮನ್ನು ನಿತ್ಯ ಅಣಕಿಸುತ್ತಿರುವ ಹೊತ್ತಿನಲ್ಲಿ ಅಶ್ವತ್ಥ್‌ರಿಗೆ ದಿನೇ ದಿನೇ ಆಯ್ಕೆ ಕಷ್ಟವಾದರೆ ಆಶ್ಚರ್ಯವಲ್ಲ. ಇತ್ತೀಚೆಗೆ ಅಮೆರಿಕಾಕ್ಕೆ ಹೋಗುವ ಯುವಕರಿಗೆ ಅಶ್ವತ್ಥ್ ಅವರ 'ಅನುಕೂಲ'ಕರವಾದ ನೋಟ ದಕ್ಕಲಾರದು. ಕಳೆದುಹೋದ ಸನ್ನಿವೇಶವೊಂದರ ಸಾಕ್ಷಿಯಾಗಿ ಅವರು ಇರುವುದರಿಂದ ಅವರು ಮಾತ್ರ ಬರೆಯಬಹುದಾದ ಕಥೆಗಳಾಗಿ ಇವು ಕಾಣಿಸುತ್ತವೆ. ರಾವ್ ಅವರ ಲೇಖಣಿಯಿಂದ ಇನ್ನಷ್ಟು ಸೂಕ್ಷ್ಮವಾದ ಕಥೆಗಳು, ನೆನಪುಗಳು ಮೂಡಿಬರಲಿ ಎಂದು ಹಾರೈಸುತ್ತೇನೆ. ರಾವ್ ಅವರ ಹಸ್ತಪ್ರತಿಯನ್ನು ಮೈಸೂರಿನಲ್ಲಿ ಗ್ರಂಥವಾಗಿ ಪರಿವರ್ತಿಸಿದ ಕಥೆಗಾರ ಹಾಗೂ ಚಿಂತಕ ಶ್ರೀ ಹರಿಹರೇಶ್ವರ ಕೂಡ ನಮ್ಮ ಅಭಿನಂದನೆಗೆ ಪಾತ್ರರು. ಮೈಸೂರಿನ ಸಂವಹನ ಪ್ರಕಾಶನದಿಂದ ಕೃತಿ ಅಂದವಾಗಿ ಮುದ್ರಣಗೊಂಡಿದೆ.

ಪ್ರೊ॥ ಸಿ. ನಾಗಣ್ಣ
೩೧೯೫, ೨೧/ಸಿ, ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

## ಒಂದೆರಡು ನಿಟ್ಟುಸಿರುಗಳು

### ವಿಪರ್ಯಾಸ - ೧

ಸದ್ಯ,
ನಮಗೆಲ್ಲರಿಗೂ
ಅತೀ ಕಷ್ಟದ
ಕೆಲಸವೆಂದರೆ
ಮನುಷ್ಯ ಮನುಷ್ಯ-
ನನ್ನ ಪ್ರೀತಿಸುವುದು

### ವಿಪರ್ಯಾಸ - ೨

ಇಂಡಿಯಾದಲ್ಲಿ
ಬೀದಿಯ ಕಲ್ಲೂ ದೇವರಾಯಿತು
ಅಲೆಮಾರಿ ನಾಯಿಯೂ ಬಂಧುವಾಯಿತು
ಆದರೆ, ಮನುಷ್ಯ ಮಾತ್ರ ಹೊರಗುಳಿದ

### ವಸ್ತುಸ್ಥಿತಿ

ಇಲ್ಲಿ ಎಲ್ಲರೂ
ಬಾಯಿ ಬಡುಕರೇ
ಮಾಡಿದ್ದು
ತುಸು
ಮಾತಾಡಿದ್ದು
ತಾಸು

ಶಾಂತೂ ಯಾಳಗಿ
ಸೂಗಟಾಣ, ಸಿಂದಗಿ ತಾಲ್ಲೂಕು
ಬಿಜಾಪುರ ಜಿಲ್ಲೆ - ೫೮೬ ೧೨೮

# ಕುವೆಂಪು ಸೃಜನಶೀಲ ವೈಚಾರಿಕತೆ

ತಿಳಿವು

**ಸು**ಮಾರು ಎರಡು ಮೂರು ವರ್ಷಗಳ ಹಿಂದೆ ಕುವೆಂಪು ವಿಶ್ವ ವಿದ್ಯಾನಿಲಯದಲ್ಲಿ 'ಕುವೆಂಪು ವೈಚಾರಿಕತೆ : ಒಂದು ಮರು ಚಿಂತನೆ' ಎಂದು ಒಂದು ವಿಚಾರ ಸಂಕಿರಣ ನಡೆಯಿತು. ನಾನು ಸಮಾರೋಪ ಭಾಷಣ ಮಾಡಿದ್ದೆ. ಆ ಸಂದರ್ಭದ ನನ್ನ ಟಿಪ್ಪಣಿಗಳನ್ನು ಮತ್ತು ಬೇರೆ ಬೇರೆ ಕಾಲಘಟ್ಟಗಳ ಓದಿನ ಸಂದರ್ಭಗಳೊಂದಿಗೆ ಪರಿಶೀಲಿಸಿ ಹೀಗೆ ದಾಖಲಿಸುತ್ತಿದ್ದೇನೆ.

ನನ್ನ ಸಾಹಿತ್ಯ ಅಭ್ಯಾಸ ಆರಂಭವಾದಾಗಿನಿಂದ ಕುವೆಂಪು ಸಾಹಿತ್ಯವನ್ನು ಓದುತ್ತಾಬಂದಿದ್ದೇನೆ. ಶಾಲೆಯ ಪಠ್ಯದಲ್ಲಿ 'ಬೊಮ್ಮನಹಳ್ಳಿ ಕಿಂದರಿಜೋಗಿ' ಓದಿದ ಕಾಲದ ಖುಷಿಯ ಬೆನ್ನಿನಲ್ಲೇ 'ಪಕ್ಷಿಕಾಶಿ' ಸಂಕಲನದ ಕವಿತೆಗಳು, 'ಮಲೆನಾಡಿನ ಚಿತ್ರಗಳು' ಮತ್ತು ಕೆಲವು ಕಥೆಗಳನ್ನು ಓದಿ ಪುಳಕಿತನಾಗುತ್ತಿದ್ದ ಕಾಲ ಅದಾಗಿತ್ತು. ನಾನು ಹೈಸ್ಕೂಲ್, ಕಾಲೇಜ್ ವಿದ್ಯಾರ್ಥಿಯಾಗಿದ್ದ ಕಾಲ. ಇಂಟರ್‌ಮೀಡಿಯಟ್ ಮತ್ತು ಬಿ.ಕಾಂ. ವಿದ್ಯಾರ್ಥಿಯಾಗಿದ್ದಾಗ ಅಧಿಕೃತ ಕನ್ನಡ ವಿದ್ಯಾರ್ಥಿಯಲ್ಲದ ನಾನು ಕನ್ನಡ ತರಗತಿಗಳಲ್ಲಿ ಕುಳಿತು ಭಾವ ಪರವಶತೆಯಿಂದ ಉಪನ್ಯಾಸ ಮಾಡುತ್ತಿದ್ದವರ ಪಾಠಗಳನ್ನು ಕೇಳಿದ್ದೆ. ಆ ಕಾಲದಲ್ಲಿ ನಾನು ಹೆಚ್ಚು



ಆಸಕ್ತಿಯಿಂದ ಓದುತ್ತಿದ್ದ ಸಾಹಿತಿಗಳೆಂದರೆ ಕಾರಂತ, ಅನಕೃ, ತರಾಸು, ಕಟ್ಟೀಮನಿ, ನಿರಂಜನ ಅಂಥವರು. ಅವರೆಲ್ಲರೂ ವಿಚಾರ ಪ್ರಚೋದಕರೂ ಆಗಿದ್ದರು. ಆದರೆ ಕುವೆಂಪು ಅವರ ಪ್ರಕೃತಿ ಗೀತೆಗಳಿಂದ ಪುಳಕಿತನಾಗುತ್ತಾ ಅವರ ಬಗ್ಗೆ ಆರಾಧನಾಭಾವವನ್ನು ಬೆಳೆಸಿಕೊಂಡಿದ್ದೆ. ಅವರು ಭಾವಕೋಶವನ್ನು ತುಂಬುತ್ತಿದ್ದರು. ಆಗ ಅದು ಸರಿಯಾದುದೇ ಆಗಿರಬಹುದು.

ನಂತರದ ಕುವೆಂಪು ಓದು ನವ್ಯ ಸಂದರ್ಭದ್ದು. ಅದು ಎಪ್ಪತ್ತರ ನಂತರದ್ದು. ಒಂದೆಂಟು ವರ್ಷ ಅಕೌಂಟೆಂಟ್ ವೃತ್ತಿ ಮಾಡಿ, ಬಿಟ್ಟು, ಎಂ.ಎ. ಮಾಡಿ ಉಪನ್ಯಾಸಕನಾಗಿದ್ದ ಕಾಲ. ನಾನೂ ಕವಿತೆ ಬರೆಯಲು ಶುರುಮಾಡಿದ ಕಾಲವದು. ನವ್ಯ ಸಂದರ್ಭದ ಕುವೆಂಪು ಓದು ಎಂದರೆ, ಅವರ ಕಾದಂಬರಿಗಳನ್ನು ಅಭ್ಯಾಸ ಮಾಡುತ್ತಿದ್ದ ಕಾಲ. ಕುವೆಂಪು ಸಾಹಿತ್ಯ ಅಂದರೆ ಅವರ ಎರಡು ಕಾದಂಬರಿಗಳೇ ಎಂದು ವಿಮರ್ಶಕರೆಲ್ಲಾ ವಾದಿಸುತ್ತಿದ್ದರು. ಆದರೆ ಮೈಸೂರು ಸುತ್ತಲಿನ ಅವರ ಆರಾಧಕರೆಲ್ಲಾ ಕುವೆಂಪು ಸಾಹಿತ್ಯವನ್ನು ಅದರಲ್ಲೂ ಕಾವ್ಯವನ್ನು 'ಭವ್ಯ', 'ದಿವ್ಯ', 'ಭೂಮ್ಯಾಕಾಶ' ಇತ್ಯಾದಿ ದೊಡ್ಡ ದೊಡ್ಡ ಪದಗಳಿಂದ ಹೊಗಳುತ್ತಾ ರಂಜನೀಯ ರಸವಿಮರ್ಶೆ ಬರೆಯುತ್ತಿದ್ದರು. ನವ್ಯ ವಿಮರ್ಶಕರು ಕುವೆಂಪು ಅವರನ್ನು ತಪ್ಪುತಪ್ಪಾಗಿ ಅರ್ಥೈಸುತ್ತಿದ್ದಾರೆ ಎಂದು ಕೂಗಾಡುತ್ತಿದ್ದರು. ನವ್ಯ ವಿಮರ್ಶಕರು : ಅವರ ಕಾದಂಬರಿಗಳಲ್ಲಿನ ಜೀವನ ಗ್ರಹಿಕೆ, ಒಂದು ಸ್ಥಿತ್ಯಂತರ ಕಾಲದ ಮಲೆನಾಡಿನ ನಂಬಿಕೆ ನಡವಳಿಕೆಗಳನ್ನೆಲ್ಲಾ ಕಲಾತ್ಮಕವಾಗಿ ಕಟ್ಟಿಕೊಟ್ಟಿರುವುದಕ್ಕೆ ಬೆರಗಾಗಿ 'ಗದ್ಯ ಮಹಾಕಾವ್ಯ' ಎಂದೆಲ್ಲಾ ಹೊಗಳುತ್ತಿದ್ದರು. ಅವರ ಕಾವ್ಯದಲ್ಲಿನ ಸಂಸ್ಕೃತಮಯ ಭಾಷೆ, ಅತಿಯಾದ ಕಲ್ಪಕತೆ ಭಾವುಕತೆಗಳಿಗೆ ಅಷ್ಟೇನು ತೀವ್ರವಾಗಿ ಸ್ಪಂದಿಸದವರಾಗಿದ್ದರು. ಈ ಎರಡು ಬಣಗಳ ನಡುವಿನ ಜಗಳ ಚಾರಿತ್ರಿಕವಾಗಿ ಮಹತ್ವದ್ದಾಗಿತ್ತೆಂದೇ ಹೇಳಬೇಕು.

ಈ ನಡುವೆ, ಎಂದರೆ ೭೦ನೇ ದಶಕದ ಮಧ್ಯ ಭಾಗದ ಹೊತ್ತಿಗೆ ನವ್ಯದಿಂದ ಸಿಡಿದು ಬಂಡಾಯ ಚಳುವಳಿ ಆರಂಭಿಸಿದ ಲೇಖಕರು ಕುವೆಂಪುರವರ ವೈಚಾರಿಕ, ವೈಜ್ಞಾನಿಕ ಬರಹಗಳಿಗೆ ಒತ್ತುಕೊಟ್ಟು ಸಮಾನತೆಯ ಪರಿಕಲ್ಪನೆಗಳನ್ನು ಪ್ರಚಾರ ಮಾಡಲಿಕ್ಕೆ ಹೊರಟ ಸಂದರ್ಭದ 'ಬಂಡಾಯ ಸಾಹಿತ್ಯ-ವಿಮರ್ಶೆ' ಕುವೆಂಪು ಅವರ ವೈಚಾರಿಕ ವಿಚಾರಗಳನ್ನು ಆರಾಧಿಸಲು ತೊಡಗಿದ ಸಂದರ್ಭದಲ್ಲಿ ಅವರ 'ಶೂದ್ರ ತಪಸ್ವಿ', 'ಬೆರಳ್ಗೆ ಕೊರಳ್', 'ಜಲಗಾರ', ನಾಟಕಗಳು, ದೇವರು, ದೇವಸ್ಥಾನ ಮತ್ತು ಜಾತಿ ವಿನಾಶ ಕುರಿತು ಯುವಕರಿಗಾಗಿ ಬರೆದ ಲೇಖನ ಕವಿತೆಗಳು ವೈದಿಕ ಸಂಸ್ಕೃತಿಯನ್ನು ವಿರೋಧಿಸುವ ಪ್ರಚಾರ ಸಾಧನಗಳಾದವು. ಆದರೆ ದೇವರು-ಧರ್ಮದಲ್ಲಿ ನಂಬಿಕೆಯಿಟ್ಟಿದ್ದ ಕುವೆಂಪು ಅವರ ಸಾಹಿತ್ಯಿಕ ಆಧ್ಯಾತ್ಮಿಕ ಬರಹಗಳ ನಡುವಿನ ವಿರೋಧಾಭಾಸಗಳು ಚರ್ಚೆಗೆ ಗುರಿಯಾಗುತ್ತಿದ್ದ ಅಂದಿನ ದಿನಗಳಲ್ಲಿ ಕುವೆಂಪು ಅವರನ್ನು ವೈದಿಕ ವಿರೋಧಿಯಂತೆ ಬಿಂಬಿಸಲು ಬಂಡಾಯ ಸಾಹಿತಿಗಳು ಟೊಂಕಕಟ್ಟಿ ಹೋರಾಡಿದ್ದರ ಫಲ ಕುವೆಂಪು ಅವರ ದ್ವಂದ್ವ ಬಹಳಷ್ಟು ವಿಮರ್ಶಕರನ್ನು ಕಾಡಲಿಕ್ಕೆ ಶುರುವಾಯಿತು. ಆದರೆ ಕುವೆಂಪು ಅವರ ಗುರುಗಳು ಬ್ರಾಹ್ಮಣರಾಗಿದ್ದು, ಬ್ರಾಹ್ಮಣಿಕೆಯ ಬಗ್ಗೆ ಅವರಿಗೆ ಪ್ರತಿರೋಧವಿತ್ತೇ ಹೊರತು ಬ್ರಾಹ್ಮಣರ ಮೇಲಲ್ಲ ಎಂಬುದು ಹೆಚ್ಚು ಸ್ಪಷ್ಟವಾಗುತ್ತಾ ಬಂದರೂ ಒಂದಿಷ್ಟು ವಿಮರ್ಶಕರು ಅವರು ವೈದಿಕ ವಿರೋಧಿಯೆಂದೂ ಪ್ರಚಾರಮಾಡುತ್ತಿದ್ದುದು ಹಾಸ್ಯಾಸ್ಪದ ಸಂಗತಿಯೆಂಬುದಂತೂ ಸತ್ಯ. ವೇದ ಉಪನಿಷತ್‌ಗಳಲ್ಲಿ ಅಪಾರ ಗೌರವ ಇಟ್ಟುಕೊಂಡಿದ್ದ ಕುವೆಂಪುರವರು ಬರಹಗಾರ ಒಕ್ಕೂಟದ ಆರಂಭ ಭಾಷಣದಲ್ಲಿ ಒಂದು ಎಚ್ಚರಿಕೆಯ ಮಾತನ್ನಾಡಿದ್ದಾರೆ : 'ಪ್ರತಿಭೆ ಕಾವ್ಯ ರಂಗದಿಂದ ಲೋಕರಂಗಕ್ಕೆ ಇಳಿಯಿತೆಂದರೆ ತೊಂದರೆ ಪ್ರಾರಂಭವಾಗುತ್ತದೆ; ಆಧ್ಯಾತ್ಮಿಕ ಅನುಭವ ಆಧ್ಯಾತ್ಮಿಕ ರಂಗಕ್ಕೇ ಸೀಮಿತವಾಗಿರಬೇಕು. ದೈನಂದಿನ ಸಾಮಾನ್ಯ ಭೂಮಿಕೆಗೂ ಇಳಿದು ಕ್ರಿಯೆಯಾಗಿ ವರ್ತಿಸ ತೊಡಗಿದರೆ ಕೆಲಸ ಕೆಡುತ್ತದೆ' (ನೆನಪಿನ ದೋಣಿ, ಪುಟ ೮೯೦) ಎಂದು. ಆದ್ದರಿಂದಲೇ ಕುವೆಂಪು ಅವರ ಕಲಾತ್ಮಕ ಕಾದಂಬರಿಗಳ ಬಗ್ಗೆ ವಿಮರ್ಶಕರು ಗಮನ ಹರಿಸಿದ್ದು ತಪ್ಪೆನಿಸುವುದಿಲ್ಲಾ. ಆದರೆ ಭಟ್ಟಂಗಿಗಳಿಗೆ ತಮ್ಮ ಕೂಗು ಅರ್ಥಹೀನವಾದುದು ಎಂದು ಕೆಲವರಿಗಾದರೂ ಅನಿಸಿದ್ದರೆ ಇನ್ನಷ್ಟು ಸಮರ್ಥವಾದ ವಿಮರ್ಶೆ ಹೊರಬರುತ್ತಿತ್ತೇನೋ ?

*೭೦ನೇ ದಶಕದ ಮಧ್ಯ ಭಾಗದ ಹೊತ್ತಿಗೆ ನವ್ಯದಿಂದ ಸಿಡಿದು ಬಂಡಾಯ ಚಳುವಳಿ ಆರಂಭಿಸಿದ ಲೇಖಕರು ಕುವೆಂಪುರವರ ವೈಚಾರಿಕ, ವೈಜ್ಞಾನಿಕ ಬರಹಗಳಿಗೆ ಒತ್ತುಕೊಟ್ಟು ಸಮಾನತೆಯ ಪರಿಕಲ್ಪನೆಗಳನ್ನು ಪ್ರಚಾರ ಮಾಡಲಿಕ್ಕೆ ಹೊರಟ ಸಂದರ್ಭದ 'ಬಂಡಾಯ ಸಾಹಿತ್ಯ-ವಿಮರ್ಶೆ' ಕುವೆಂಪು ಅವರ ವೈಚಾರಿಕ ವಿಚಾರಗಳನ್ನು ಆರಾಧಿಸಲು ತೊಡಗಿದ ಸಂದರ್ಭದಲ್ಲಿ ಅವರ 'ಶೂದ್ರ ತಪಸ್ವಿ', 'ಬೆರಳ್ಗೆ ಕೊರಳ್', 'ಜಲಗಾರ', ನಾಟಕಗಳು, ದೇವರು, ದೇವಸ್ಥಾನ ಮತ್ತು ಜಾತಿವಿನಾಶ ಕುರಿತು ಯುವಕರಿಗಾಗಿ ಬರೆದ ಲೇಖನ ಕವಿತೆಗಳು ವೈದಿಕ ಸಂಸ್ಕೃತಿಯನ್ನು ವಿರೋಧಿಸುವ ಪ್ರಚಾರಸಾಧನಗಳಾದವು. ಆದರೆ ದೇವರು - ಧರ್ಮದಲ್ಲಿ ನಂಬಿಕೆಯಿಟ್ಟಿದ್ದ ಕುವೆಂಪು ಅವರ ಸಾಹಿತ್ಯಿಕ ಆಧ್ಯಾತ್ಮಿಕ ಬರಹಗಳ ನಡುವಿನ ವಿರೋಧಾಭಾಸಗಳು ಚರ್ಚೆಗೆ ಗುರಿಯಾಗುತ್ತಿದ್ದ ಅಂದಿನ ದಿನಗಳಲ್ಲಿ ಕುವೆಂಪು ಅವರನ್ನು ವೈದಿಕ ವಿರೋಧಿಯಂತೆ ಬಿಂಬಿಸಲು ಬಂಡಾಯ ಸಾಹಿತಿಗಳು ಟೊಂಕಕಟ್ಟಿ ಹೋರಾಡಿದ್ದರ ಫಲ ಕುವೆಂಪು ಅವರ ದ್ವಂದ್ವ ಬಹಳಷ್ಟು ವಿಮರ್ಶಕರನ್ನು ಕಾಡಲಿಕ್ಕೆ ಶುರುವಾಯಿತು.*

**ಸತ್ಯನಾರಾಯಣರಾವ್ ಅಣತಿ**

ಈ ಸಂದರ್ಭವನ್ನು ತೇಜಸ್ವಿಯವರು 'ಅಣ್ಣನ ನೆನಪುಗಳ'ಲ್ಲಿ ಹೀಗೆ ಬರೆಯುತ್ತಾರೆ: 'ಹಾಗಾದರೆ ಕುವೆಂಪು ನಮಗೂ ಅಪ್ರಸ್ತುತ ಅಥವಾ ಅರ್ಥಹೀನ ಆದರೆ, ಎನ್ನುವುದು ಈ ಚಾರಿತ್ರಿಕ ಅವಲೋಕನದಿಂದ ಏಳುವ ನೇರವಾದ ಪ್ರಶ್ನೆ. ಇದರ ನೇರವಾದ ಉತ್ತರ, ಹೌದು. ಆಗಿನ ಸಾಹಿತ್ಯ ಚರ್ಚೆ, ವಾಗ್ವಾದ (ವಿಚಾರ) ವಿವಾದ, ದ್ವೇಷಾಸೂಯೆಗಳು, ಪ್ರತಿಪಾದನೆ ಗಳು ಎಲ್ಲದರಿಂದ ಒಟ್ಟಿನಲ್ಲಿ ಬಿಂಬಿಸಿದ ಕುವೆಂಪು ನಮ್ಮ ಮಟ್ಟಿಗೆ ಅಪ್ರಸ್ತುತರಾದರು' (ಉರುಳಿದ ಪ್ರತಿಮೆಗಳು, ಪುಟ ೩೮). ಈ ರೀತಿಯ ಬರಹಕ್ಕೆ ಕಾರಣ ಕುವೆಂಪು ಅವರ 'ದ್ವಂದ್ವ' ಹಲವರಿಗಾದರೂ ದೊಡ್ಡದಾಗಿ ಕಾಣಿಸುತ್ತಿತ್ತು ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ಮುಂದುವರೆದು ತೇಜಸ್ವಿಯವರು ಬರೆಯುವುದು ಹೀಗೆ: 'ಎಪ್ಪತ್ತರ ದಶಕದ ಚರಿತ್ರೆ ಅಣ್ಣನ ಭಾಷೆಯ ಪದಗಳ ಪದಾರ್ಥಗಳನ್ನೂ ಸಂಪೂರ್ಣವಾಗಿ ಬದಲಾಯಿಸಿದ್ದು ಆಶ್ಚರ್ಯಕರ ವಿದ್ಯಮಾನ. ಎಪ್ಪತ್ತರ ದಶಕ ಒಂದು ರೀತಿ ಕುವೆಂಪು ಅರ್ಥಹೀನವಾಗುತ್ತಾ ಅಪ್ರಸ್ತುತವಾಗುತ್ತಾ ಇನ್ನೊಂದು ರೀತಿಯಲ್ಲಿ ಅರ್ಥವತ್ತಾಗುತ್ತಾ ಪ್ರಸ್ತುತ ವಾಗುತ್ತಾ ಹೋದ ಅಸಾಧಾರಣ ಸಂದಿಗ್ಧಕಾಲ' (ಅಣ್ಣನ ನೆನಪು, ಪುಟ ೨೫೯, ೪೦, ೪೧).

ಇಂಥ ಸಂದರ್ಭವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಅಂದಿನ ವಿಚಾರ ಸಂಕಿರಣದ ಉದ್ಘಾಟಕರು (ಸಿಎನ್‌ಆರ್) ಮತ್ತು ಇತರ ಉಪನ್ಯಾಸಕರೂ ಕುವೆಂಪು ಅವರ 'ದ್ವಂದ್ವ' ವಿಚಾರಗಳನ್ನು ಚರ್ಚೆಗೆ ಒಡ್ಡಿದ್ದರೆಂದು ನಾನು ಭಾವಿಸುತ್ತೇನೆ.

ಆದರೆ ಈ ಎಲ್ಲಾ ಅಧ್ಯಯನಗಳೂ ಕುವೆಂಪು ಅವರನ್ನು ಆ ಆ ಸಂದರ್ಭದ ಸಾಹಿತ್ಯ, ಸಾಮಾಜಿಕ ಸ್ಥಿತಿಗತಿಗೆ ಅನುಗುಣವಾಗಿ ಓದಿಕೊಂಡುದರ ಫಲವಾಗಿರಬಹುದೆ? ಈಗ ವಸಾಹತುಶಾಹಿಯ ಹಳಹಳಿಕೆಯನ್ನು ಬಿಟ್ಟು, ನಾವು ಹಾದುಬಂದ ಸಾಹಿತ್ಯಿಕ, ಸಾಂಸ್ಕೃತಿಕ ಮನೋಧರ್ಮಗಳಿಂದ ಭಿನ್ನವಾದ, ದೇಶೀಯತ್ವವನ್ನು ದಿಕ್ಕುಗೆಡಿಸುತ್ತಿರುವ ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳೆಂಬ ಭೂತಗಳು ನಮ್ಮ ಸಾಂಸ್ಕೃತಿಕ ಸಂದರ್ಭವನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸುತ್ತಿರುವಾಗ ಕುವೆಂಪು ಓದು ಹೊಸ ಪೀಳಿಗೆಗೆ ಹೇಗೆ ದಕ್ಕಬಹುದು? ಈ ರೀತಿಯ ಆಲೋಚನೆಯಿಂದ ಅಧ್ಯಯನ ಮಾಡಿದಾಗ ಕುವೆಂಪು ಹೀಗಿದ್ದರು: 'ಮಹಾಕವಿಯೆಂದು, ಕೆಲವರಿಗೆ ರಸಋಷಿಯೆಂದೂ ಏನೇನೋ ವಿಶೇಷಣಗಳಿಂದ ಸುಪ್ರಸಿದ್ಧನೂ ಕೆಲವರಿಗೆ ಪೂಜ್ಯನೂ ಆಗಿಬಿಟ್ಟಿದ್ದೇನೆ. ಆದರೆ ಅದನ್ನೇನಾದರೂ ಲೋಕರಂಗಕ್ಕೆ ತಂದೆನೆಂದರೆ ಎಲ್ಲರಿಂದಲೂ ದೂರವಾಗಬೇಕಾಗುತ್ತದೆ. ಜೈಲಿನಲ್ಲಿ ತಪ್ಪಿದರೆ ಹುಚ್ಚಾಸ್ಪತ್ರೆಯಲ್ಲಿ ನನ್ನ ಜೀವಮಾನವನ್ನು ಕಳೆಯಬೇಕಾಗುತ್ತದೆ. ಲೋಕರಂಗದ ಹುಚ್ಚನ್ನು ಕಲಾರಂಗಕ್ಕೆ ವರ್ಗಾಯಿಸುವುದೇ ಕಾವ್ಯರಂಗದ ಯಶಸಿದ್ಧಿ' (ನೆನಪಿನ ದೋಣಿಯಲ್ಲಿ, ಪುಟ ೮೯-೧೯೭೩). ಆದ್ದರಿಂದಲೇ ನಮ್ಮಲ್ಲಿ ಹಲವರು ಅವರ ಬಗ್ಗೆ ಎತ್ತುವ ದ್ವಂದ್ವಾತ್ಮಕ ಪ್ರಶ್ನೆಗಳು ಹಾರಿಹೋಗುತ್ತವೆ.

ಆದ್ದರಿಂದ ಕುವೆಂಪು ಅವರನ್ನು (೧) ದಾರ್ಶನಿಕ – ತತ್ವಜ್ಞಾನಿ ಕುವೆಂಪು, (೨) ಸೃಜನಶೀಲ ಲೇಖಕ ಕುವೆಂಪು ಎಂಬುದಾಗಿ ಗ್ರಹಿಸುವುದರಲ್ಲಿ ಔಚಿತ್ಯ ಇರಬಹುದೇ? ದಾರ್ಶನಿಕ, ತತ್ವಜ್ಞಾನಿ ಕುವೆಂಪು ಸುತ್ತ ಒಂದು ರೀತಿಯ ಪರಿವೇಷ ಸೃಷ್ಟಿಯಾಗುತ್ತದೆ. ಕವಿ ಕುವೆಂಪು ಸುತ್ತ 'ಮನುಜಮತ' ತತ್ವದ ಜಾತ್ಯತೀತ ಬಣ ಮಹತ್ವ ಪಡೆಯುತ್ತದೆ. ವೈಚಾರಿಕವಾಗಿಯೂ ಪ್ರಸ್ತುತವಾಗ ಬೇಕಾದ ಕುವೆಂಪು 'ಕವಿ ಕುವೆಂಪು ತಾನೆ'? ಇಷ್ಟಾದರೂ 'ದ್ವಂದ್ವ' ಕುವೆಂಪು ಇದ್ದರಲ್ಲ ಅಂದರೆ, 'ಇದ್ದರು'. ಆದರೆ ಅದನ್ನು ಮೀರುವ ಪ್ರಕ್ರಿಯೆಯಲ್ಲಿದ್ದ ಕುವೆಂಪು ಬಹಳ ಜನ ಓದುಗರಿಗೆ ಅಗೋಚರವಾಗಿಯೇ ಇದ್ದರೆ? ಇದ್ದಿರಬಹುದು. ನಮ್ಮ ಸಾಹಿತ್ಯಿಕ ಸಂದರ್ಭದಲ್ಲಿ ಈ ರೀತಿಯ ಆರೋಪ ಇನ್ನೂ ಇಬ್ಬರು ಸಾಹಿತಿಗಳ ಮೇಲೆ ಇತ್ತು, ಮತ್ತು ಇದೆ. ಅವರುಗಳೆಂದರೆ: ಗೋಪಾಲಕೃಷ್ಣ ಅಡಿಗರು, ಅನಂತಮೂರ್ತಿಯವರು. ಅಡಿಗರು 'ದ್ವಂದ್ವ ದಿಗ್ಬಂಧ' ಕವಿತೆಯಲ್ಲಿ ನಿಸರ್ಗ ಸಹಜವಾದ ದ್ವಂದ್ವ ಕ್ರಿಯೆ ನನ್ನಲ್ಲೂ ಇರುವುದಾದರೆ ಆಶ್ಚರ್ಯ ಏಕೆ, ಎಂದು ಪ್ರಶ್ನಿಸುತ್ತಾರೆ. ಆದರೆ ಅದನ್ನು ಮೀರುವ ಪ್ರಕ್ರಿಯೆಯಲ್ಲಿ ಅವರ ಸಂಕಟವನ್ನು ಮನಗಾಣಬೇಕಾಗಿದೆ. ಯಾಕೆಂದರೆ ನಮ್ಮೆಲ್ಲರ ಮನಸ್ಸುಗಳು ಪರಂಪರಾಗತವಾದ ನಂಬಿಕೆಯನ್ನು ಹೊತ್ತು ಆಧುನಿಕ ಪ್ರಗತಿಪರವಾಗಿ ದುಡಿಯುವಂಥವೇ. ಅನಂತಮೂರ್ತಿಯವರು ಅಂದಂದಿನ ಸಂದರ್ಭದ ಸಮಸ್ಯೆಗಳಿಗೆ ಪ್ರತಿಕ್ರಿಯಿಸುವ ಗತಿಶೀಲ ಪ್ರತಿಭೆಯ ಲೇಖಕರಾಗಿರುವುದರಿಂದ ದ್ವಂದ್ವವ್ಯಕ್ತಿಯಾಗಿ ಕಾಣಬಹುದು, ಅಲ್ಲವೇ? ನಂಬಿಕೆ ಮತ್ತು ವೈಚಾರಿಕತೆ ಇರುವ ಎಲ್ಲರಲ್ಲೂ ಹೀಗೇ ಅಲ್ಲವೆ? ಆದ್ದರಿಂದಲೇ ಕುವೆಂಪು ಅವರ ತಾತ್ವಿಕ ಚಿಂತನೆಗಳನ್ನು, ಸೃಜನಶೀಲ ಬರಹಗಳನ್ನು ಒಟ್ಟೊಟ್ಟಿಗೆ ನೋಡುತ್ತಾ ಹೋದಾಗ ಅವರ ಇಮ್ಮನಸ್ಸುಗಳು ಮುಖಾಮುಖಿಯಾಗುವ ಸಂದರ್ಭಗಳಿಗೆ ನಾವು ಎದುರಾಗುತ್ತೇವೆ.

ಕನ್ನಡದ ಪಂಪ, ಬಸವಣ್ಣ ಮತ್ತು ಬುದ್ಧ ಇವರೆಲ್ಲರೂ ಕೂಡಿದ ಮುಂದುವರಿಕೆಯಂತೆ ನಮ್ಮ ಕಾಲಕ್ಕೆ ಸಲ್ಲುವಂಥ 'ಮನುಜಮತ, ವಿಶ್ವಪಥ; ವಿಶ್ವ ಮಾನವ' ಇತ್ಯಾದಿ ಪರಿಕಲ್ಪನೆಗಳು ಕುವೆಂಪು ಅವರಲ್ಲಿ ರೂಪುಗೊಂಡು ಮಾನವೀಯವಾದ ಭೂಮಿಕೆ ಕನ್ನಡದಲ್ಲಿ ಸಿದ್ಧಗೊಂಡದ್ದು ಅವರ ತಪಸ್ಸಿನ ಫಲವೇ ಆಗಿದೆ. ಮತಗಳನ್ನೆಲ್ಲಾ ಮೀರಿದ 'ಮನುಜ ಮತ'ವನ್ನು ಅವರು ಸಾಕ್ಷಾತ್ಕರಿಸಿಕೊಂಡಿದ್ದರು. ದೇವರು, ದೇವಾಲಯಗಳನ್ನು ತಿರಸ್ಕರಿಸಿದ ಕುವೆಂಪು ದೇವರ ಪೂಜೆಯನ್ನು ಮಾಡುತ್ತಿದ್ದ ಸಂದರ್ಭವನ್ನು ತೇಜಸ್ವಿ ಅವರು ಹಾಸ್ಯಮಯವಾಗಿ ಚಿತ್ರಿಸಿದ್ದಾರೆ 'ಅಣ್ಣನ ನೆನಪು' ಕೃತಿಯಲ್ಲಿ. ಮೂಢನಂಬಿಕೆಗಳನ್ನು ತಿರಸ್ಕರಿಸುವ ಕುವೆಂಪು ಪವಾಡಸದೃಶ ಸಂಗತಿಗಳನ್ನು ಹೇಳುತ್ತಾರೆ (ಕೃಷ್ಣನ ಜೊತೆ ದೋಸೆ ತಿಂದದ್ದು). ಕಾಯಿಲೆಯಾಗಿದ್ದಾಗ ಇನ್ನೇನು ಸತ್ತೇಹೋಗಿಬಿಡುತ್ತೇನೆ ಅನ್ನಿಸಿ, 'I am not Puttappa, I am Vivekananda' ಅಂತ ಸಾಧಿಸೋದಕ್ಕೆ ಪ್ರಯತ್ನಪಡ್ತಾರೆ. ಬಟ್ಟೆಯನ್ನೆಲ್ಲಾ ಕಳಚಿ ಭಾವಾಂತರಗೊಳ್ಳುವ ಸ್ಥಿತಿಯನ್ನೆಲ್ಲಾ ಓದಿದರೆ (ನೆನಪಿನ ದೋಣಿಯಲ್ಲಿ) ಏನನ್ನಿಸಬಹುದು?

ಕುವೆಂಪು ಪ್ರತಿಪಾದಿಸುವ ವೈಚಾರಿಕ ಚಿಂತನೆಗಳಿಗೂ ಪೂಜೆ, ಪವಾಡ ಸದೃಶ ನಡವಳಿಕೆಗಳಿಗೂ ಎಲ್ಲಿಯ ಸಂಬಂಧ? ಉತ್ತರ ಕಷ್ಟವಾಗಬಹುದು. ಆದರೆ ಇವೆಲ್ಲಾ ರೂಪಗೊಳ್ಳುತ್ತಿರುವ ವಿಶ್ವಚೇತನದ ಪ್ರಕ್ರಿಯೆ ಎಂದು (ರಾಮಕೃಷ್ಣ ಪರಮಹಂಸರಂತೆ) ನಾನು ಭಾವಿಸುತ್ತೇನೆ. ಇವುಗಳನ್ನೇ ಕುವೆಂಪು ಅಂದುಕೊಳ್ಳುವುದಾದರೆ ಕವಿ ಕುವೆಂಪು, ದಾರ್ಶನಿಕ ಕುವೆಂಪು ನಮಗೆ ದಕ್ಕದೆಹೋಗಿಬಿಡಬಹುದು. ಅವರು ನೆನಪಿನ ದೋಣಿ ಪುಟ ೮೭೮ರಲ್ಲಿ ಹೇಳುವಂತೆ:

*ದೇಹದ ದೇಗುಲದಿಂದ್ರಿಯ ದ್ವಾರವ*
*ಎಂದಿಗು ಮುಚ್ಚೆನು ತೆರದಿಹೆ ನಾನು;*
*ಗಾಳಿಯ ರೂಪದಿ ಬೆಳಕಿನ ರೂಪದಿ*
*ದಿನ ದಿನ ಶಿವ ಸಂಚರಿಪನು ತಾನು*

ಎಂಬುದನ್ನು ಸ್ವೀಕರಿಸಿದಾಗ ಮಾತ್ರ 'ದಿಟ' ಕುವೆಂಪು ನಮಗೆ ದಕ್ಕುತ್ತಾರೇನೊ! ಮತ್ತು ಸಾಹಿತ್ಯದ ಓದನ್ನು ಕುರಿತು: 'ಪ್ರತಿಕೃತಿ ದೃಷ್ಟಿಯಿಂದ ಓದದೆ, ಪ್ರತಿಮಾ ದೃಷ್ಟಿಯಿಂದ ಓದಿ ಮತ್ತು ದರ್ಶನ ದೃಷ್ಟಿಯಿಂದ ವ್ಯಾಖ್ಯಾನಮಾಡಿ, ವಿಶ್ವಪ್ರಜ್ಞೆಯಿಂದ ಬರೆಯಿರಿ' ಎಂದು ಹೇಳುವ ಕುವೆಂಪು ನಮಗೆ ದಕ್ಕಿದರೆ ಅವರನ್ನು ಕುರಿತಾದ 'ದ್ವಂದ್ವ'ದ ಚರ್ಚೆ ಅಪ್ರಸ್ತುತ ವಾಗುತ್ತದೆ. ಅಂಥ ಓದು ನಮ್ಮದಾದಾಗ ಅವರ ವೈಚಾರಿಕತೆಯ ನಿಜದ ದರ್ಶನ ನಮಗೆ ದೊರಕುತ್ತದೆ ಎಂದು ನಾನು ಭಾವಿಸುತ್ತೇನೆ. ಮುಕ್ತ ಮನಸ್ಸಿನಿಂದ, ಪೂರ್ವಗ್ರಹಗಳನ್ನೆಲ್ಲ ಬಿಟ್ಟು ಕವಿ ದರ್ಶನವನ್ನು ಸಾಕ್ಷಾತ್ಕರಿಸಿಕೊಳ್ಳುವ ಓದು ನಮ್ಮದಾಗಬೇಕು. ಆ ದೃಷ್ಟಿಯಿಂದ:

ಅವರು ದಕ್ಷಿಣೇಶ್ವರಕ್ಕೆ ಹೋದಾಗ ಮಂತ್ರದೀಕ್ಷೆಯನ್ನು ಪಡೆಯುತ್ತಾರೆ. ಆ ಸಂದರ್ಭವನ್ನು ಕುರಿತು: 'ನನಗೆ ಮಂತ್ರ ದೀಕ್ಷೆ ಆದ ನಂತರ ಶಾಶ್ವತಾನಂದ ಸ್ವಾಮಿಗಳು ಒಂದು ಜಪಮಾಲೆಯನ್ನು ಇಟ್ಟುಕೊಳ್ಳುವಂತೆ ಹೇಳಿದರು. ಸಾಮಾನ್ಯವಾಗಿ ಮಂತ್ರದೀಕ್ಷೆ ಪಡೆದವರೆಲ್ಲ ಜಪಮಾಲೆ ಇಟ್ಟುಕೊಳ್ಳುವುದು ವಾಡಿಕೆ. ಆದರೆ ಕವಿಚೇತನಕ್ಕೆ ಅಂತಹ ಸಂಪ್ರದಾಯ ಸಂಕೋಲೆಯ ಶಿಸ್ತು ಹಿಡಿಸುವುದಿಲ್ಲವಾದುದರಿಂದ ಒಲ್ಲೆ ಅಂದುಬಿಟ್ಟೆ. ಕವಿಯ ಸಾಧನ ಮಾರ್ಗವೇ ಬೇರೆ, ಸನ್ಯಾಸಿಯ ಸಾಧನ ಮಾರ್ಗವೇ ಬೇರೆ', ಎನ್ನುವ ಕುವೆಂಪು ಆ ಸಂದರ್ಭದಲ್ಲಿ ಬರೆದ ಕವಿತೆ:

*ಜೀವನವನಿತುಂ ಜಪವೆನಗಾಗಿರೆ*
*ಜಪಗಿಪ ಮಣಿಗಿಣಿ ಮಾಲೆಯದೇಕೆ?*
*ಸುಂದರ ಜಗ ಶಿವಮಂದಿರವಾಗಿರೆ*
*ಅಂಧತೆ ಕವಿದಿಹ ದೇಗುಲವೇಕೆ?*
*ಕಂಗಳ ಸುಂದರ ಪೂಜೆಯ ಮಾಡುವೆ*
*ಶಿವ ನವ ಸೃಷ್ಟಿಯ ದೇಸಿಯ ನೋಡಿ*
*ಜಿಹ್ವೆಯ ಮಂಜುಳ ಜಪವನು ಮಾಡುವೆ*
*ನವ ನವ ಕವಿತಾವೇದವ ಹಾಡಿ*

ಎನ್ನುವ ಕುವೆಂಪು ಅವರ 'ಕವಿ ದರ್ಶನ' ವೈಚಾರಿಕತೆ ನಮಗೆ ಬೇಕು. ಯಾಕೆಂದರೆ ಸೃಜನಶೀಲ ಮನಸ್ಸು ಯಾವಾಗಲೂ ವೈಚಾರಿಕವಾದುದೇ ಅಲ್ಲವೇ?

**ಸತ್ಯನಾರಾಯಣರಾವ್ ಅಣತಿ**
ರಚನ, ೨ನೇ ತಿರುವು, ಶರಾವತಿನಗರ, ಹೊಸಮನೆ ಚರ್ಚ್ ಪಕ್ಕ
ಶಿವಮೊಗ್ಗ - ೫೭೭ ೨೦೧

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / December 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.

# 'ಕರ್ನಾಟಕ 50ರ ಸಂಭ್ರಮ'ಕ್ಕೆ ನವಕರ್ನಾಟಕದ ಕೊಡುಗೆ
























ಕನ್ನಡದ ಚಿಣ್ಣರಿಗೆ ಬಣ್ಣದ ಚಿತ್ರಪಟಗಳು !

ಪುಟಾಣಿಗಳಿಗೆ ನೀಡಲು ಚೆಂದದ ಉಡುಗೊರೆ !!

ಪ್ರತಿಯೊಂದು ಪಟದ ಹಿಂಬದಿಯಲ್ಲಿ ಪುಟಾಣಿಗಳಿಗಾಗಿ
ಸಚಿತ್ರ ಕಥೆ ಹಾಗೂ ಚಿತ್ರ ಮಾಹಿತಿಗಳಿವೆ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 1. ✆ : 22203580, 30578022, ಫ್ಯಾಕ್ಸ್: 30578023
e-mail : navakarnataka@vsnl.com web : www.navakarnatakabooks.com




ಕೀಟಾಹಾರಿ ಹಕ್ಕಿಗಳು
INSECTIVOROUS BIRDS

ಬೇಟೆಗಾರ ಹಕ್ಕಿಗಳು
ನೀರ ಹಕ್ಕಿಗಳು

ಸಾಮಾನ್ಯ ಪಕ್ಷಿಗಳು
COMMON BIRDS

ಹಾಡು ಹಕ್ಕಿಗಳು
ಫಲಾಹಾರಿ ಹಕ್ಕಿಗಳು





















**ಎಲ್ಲ ಚಿತ್ರಪಟಗಳು ಇಂಗ್ಲಿಷಿನಲ್ಲಿಯೂ ಲಭ್ಯವಿವೆ ! ಬೆಲೆ ರೂ. 30 ಮಾತ್ರ**